ಮೊದಲನೆಯ ಮುದ್ರಣ : ೧೯೫೫







This translation of THE HOME AND THE WORLD has been published by kind permission of the Trustees of Rabindranath Tagore and Messrs. Macmillan & Co., Ltd.

ಪ್ರಕಾಶಕರು :

ಕೂಡಲಿ ಚಿದಂಬರಂ, ಕಾವ್ಯಾಲಯ, ಮೈಸೂರು

ಬೆಲೆ :

ಸಾದಾ ಪ್ರತಿ ರೂ. ೧-೮-೦

ಬಿಳಿಯ ಕಾಗದದ ಪ್ರತಿ ರೂ. ೨-೮-೦

ಮುದ್ರಣಕಾರರು :

ಜಿ. ಎಚ್. ರಾಮರಾವ್, ಬಿ. ಎಸ್‌ಸಿ.

ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್

ಮೈಸೂರು

# ಮನೆ-ಜಗತ್ತು

ರವೀಂದ್ರನಾಥ ಠಾಕೂರರ ಕಾದಂಬರಿಗಳಲ್ಲಿ ಇದು ಪ್ರಾಯಶಃ ಕೊನೆಯದು ಮತ್ತು ಶ್ರೇಷ್ಠವಾದದ್ದು. ಇದರಲ್ಲಿ ಬರುವ ಪ್ರಮುಖ ವ್ಯಕ್ತಿಗಳು ಮೂವರು: ವಿಮಲೆ, ನಿಖಿಲ, ಸಂದೀಪ. ವಿಮಲೆ ನಿಖಿಲನ ಪತ್ನಿ. ನಿಖಿಲ ಬಂಗಾಳದ ಒಬ್ಬ ದೊಡ್ಡ ಜಹಗೀರುದಾರ ಅಥವಾ ರಾಜ. ಅವನು ವಿದ್ಯಾವಂತ, ಸುಸಂಸ್ಕೃತ; ಶ್ರೀಮಂತ ಕುಲದಲ್ಲಿ ಹುಟ್ಟಿದ್ದರೂ ಅದರ ದುರ್ವ್ಯಸನಗಳಿಗೆ ಒಳಗಾದವನಲ್ಲ. ಅವನ ಒಲವು ಆದರ್ಶಗಳ ಕಡೆ, ಅವನ ಚಿಂತನೆ ದೇಶಕ್ಷೇಮ.

ವಿಮಲೆ ಸಂಪ್ರದಾಯಸ್ಥಳು. ಅವಳ ಜಗತ್ತು ಪರದೆಯ ಹಿಂದೆ. ನಿಖಿಲನಿಗೆ ಅವಳಲ್ಲಿ ಅತಿಯಾದ ಪ್ರೇಮ. ಅವಳಿಗೆ ಪರದೆಯನ್ನು ತಪ್ಪಿಸಬೇಕೆಂದೂ ಅವಳು ಹೊರಪ್ರಪಂಚದಲ್ಲಿ ಬೆರೆತು ತನಗೆ ನಿಜವಾದ ಸಂಗಾತಿಯಾಗಬೇಕೆಂದೂ ನಿಖಿಲನಿಗೆ ಆಸೆ. ಅವಳನ್ನು ವಿದ್ಯಾವತಿಯನ್ನಾಗಿ ಮಾಡಲು ಇಂಗ್ಲಿಷ್ ಉಪಾಧ್ಯಾಯಿನಿಯೊಬ್ಬಳನ್ನು ಗೊತ್ತುಮಾಡುತ್ತಾನೆ.

ಬಂಗಾಳದಲ್ಲಿ, ಈ ಸಮಯದಲ್ಲಿ, ಸ್ವದೇಶಿ ಚಳವಳಿ ಬಿರುಗಾಳಿಯಂತೆ ಎದ್ದು ಹಳ್ಳಿ ಹಳ್ಳಿಗೂ ವ್ಯಾಪಿಸುತ್ತದೆ. ಸ್ವದೇಶಿಯ ಪ್ರಚಾರಕ್ಕಾಗಿ ಸಂದೀಪ ನಿಖಿಲನ ಗ್ರಾಮಕ್ಕೆ ಬರುತ್ತಾನೆ. ಅಲ್ಲಿ ಅವನ ಭಾಷಣ. ಸಂದೀಪನಲ್ಲಿ ಜನನಾಯಕನಲ್ಲಿರಬೇಕಾದ ಶಕ್ತಿ ಸಾಮರ್ಥ್ಯಗಳಿವೆ. ಅವನ ಉತ್ಸಾಹ ಒಂದು ಸೋಂಕುಜಾಡ್ಯವಿದ್ದಂತೆ. ಮಾತಿನಿಂದ ಅವನು ಜನರನ್ನು ಮರುಳುಮಾಡಬಲ್ಲ. ದೇಶಕ್ಕೆ ಮೂರ್ತಸ್ವರೂಪವನ್ನು ಕೊಡಬಲ್ಲ ಶಕ್ತಿ ಅವನಲ್ಲಿದೆ. ನಿಖಿಲನೊಡನೆ ಭಾಷಣವನ್ನು ಕೇಳಲು ಹೋದ ವಿಮಲೆಗೆ ಉತ್ಸಾಹದ ಭರದಲ್ಲಿ ಮುಖದ ಪರದೆ ಸರಿದ ಅರಿವು ಸಹ ಇಲ್ಲ.

ದೇಶಭಕ್ತನನ್ನು ಗೌರವಿಸಲು ವಿಮಲೆ ಸಂದೀಪನನ್ನು ಮನೆಗೆ ಊಟಕ್ಕೆ ಕರೆಯಲಿಚ್ಛಿಸುತ್ತಾಳೆ. ಸಂದೀಪ ನಿಖಿಲನ ಮನೆಯಲ್ಲಿ ಕೆಲವು ಕಾಲ ನಿಲ್ಲುತ್ತಾನೆ. ವಿಮಲೆಯೊಡನೆ ಅವನ ಸಲಿಗೆ ಬೆಳೆಯುತ್ತದೆ.

ನಿಖಿಲ ಸಂದೀಪರು ಬಾಲ್ಯ ಸ್ನೇಹಿತರು. ಆದರೆ ಅವರ ಮನೋಧರ್ಮಗಳು ಧ್ಯೇಯಗಳು ಬೇರೆ ಬೇರೆ. ಇವರಿವರಲ್ಲಿ ಆಗಾಗ ಚರ್ಚೆಗಳು ನಡೆಯುತ್ತವೆ: ದೇಶಸ್ವಾತಂತ್ರ್ಯದ ವಿಚಾರವಾಗಿ, ಕಾರ್ಯ ನೀತಿಗಳ ವಿಷಯವಾಗಿ, ಧ್ಯೇಯಗಳ ವಿಚಾರವಾಗಿ. ಬಲಹೀನನಿಗೆ ಯಾವುದೂ ಲಭ್ಯವಿಲ್ಲವೆಂದು, ಶಕ್ತಿಯಿಂದ ಗೆದ್ದರೆ ಮಾತ್ರ ದೇಶವೆಂದು ಸಂದೀಪನ ವಾದ. ನೀತಿ ಕೈಲಾಗದ ಹೇಡಿಗಳಿಗೆ ಹೇಳಿಸಿದ್ದು. ನೀತಿ ಧರ್ಮ ಸತ್ಯ ನ್ಯಾಯ ಇವುಗಳನ್ನೇ ನಂಬಿ ಯಾವ ಸಾಮ್ರಾಜ್ಯ ಹುಟ್ಟಿ ಬೆಳೆದಿದೆ, ಉದ್ಧಾರವಾಗಿದೆ? ಜಯವೇ ಮನುಷ್ಯನ ಗುರಿಯಾಗಿರಬೇಕು, ಸತ್ಯ ಬೇಕಾದರೆ ಅದನ್ನು ಹಿಂಬಾಲಿಸಿ ನಡೆಯಲಿ.

ಈ ಚರ್ಚೆಗಳಲ್ಲಿ ವಿಮಲೆಯೂ ಭಾಗವಹಿಸುವಳು. ಧ್ಯೇಯಗಳನ್ನು ಲೀಲಾಜಾಲವಾಗಿ ಕಿತ್ತೊಗೆಯುವ ಸಂದೀಪನ ಕೆಚ್ಚು, ಅಟ್ಟಹಾಸ, ಅಧಿಕಾರವಾಣಿ, ಅವನ ಯುಕ್ತಿ ಶಕ್ತಿಗಳು —ಇವೆಲ್ಲ ವಿಮಲೆಯ ಮನಸ್ಸನ್ನು ಸೂರೆಗೊಳ್ಳುತ್ತವೆ. ನಿಖಿಲನ ಆದರ್ಶವಾದಗಳೂ ಧ್ಯೇಯಗಳೂ ಅವಳಿಗೆ ಸಪ್ಪೆಯಾಗಿ ತೋರುತ್ತವೆ. ಅವನನ್ನು ಅಶಕ್ತನೆಂದೇ ಭಾವಿಸುತ್ತಾಳೆ.

ವಿಮಲೆ ಜೀವನದ ಉತ್ಸಾಹದಿಂದ ತುಂಬಿದ್ದಾಳೆ. ಅದರ ಬೆಡಗು ಬಣ್ಣಗಳಲ್ಲಿ ಅವಳಿಗೆ ಆಸಕ್ತಿ. ಚತುರನಾದ ಸಂದೀಪ ದೇಶದ ಮಾತಿನೊಡನೆ ಅವಳ ಹೆಸರನ್ನು ಬಹು ಜಾಣ್ಮೆಯಿಂದ ಬೆರಸುತ್ತಾನೆ. ವಿಮಲೆ ಸಾಮಾನ್ಯ ಸ್ತ್ರೀಯಲ್ಲ, ರಾಣಿ, ಶಕ್ತಿಸ್ವರೂಪಿಣಿ, ಬಂಗಾಳದ ಸ್ತ್ರೀ ಜನದ ಪ್ರತಿನಿಧಿ ಎಂದು ಮುಂತಾಗಿ ಹೊಗಳುತ್ತಾನೆ. ರಾಜಕೀಯ ಕಾರ್ಯಗಳಲ್ಲೆಲ್ಲ

ಅವಳ ಸಲಹೆಗಳನ್ನು ಕೇಳುತ್ತಾನೆ. ವಿಮಲೆಯ ಮನಸ್ಸು ಅವನಿಗೆ ಮಾರುವೋಗಿ ತಿಳಿದೂ ತಿಳಿಯದಂತೆ ಅವಳು ನಿಖಿಲನಿಂದ ದೂರವಾಗತೊಡಗುತ್ತಾಳೆ. ಸಂದೀಪನ ದೇಶ ಪ್ರೇಮ ಅವನ ಸ್ವಾರ್ಥ ಪ್ರೇಮದ ಒಂದು ಮುಖವಾಡವೆಂದು ಅವಳು ತಿಳಿಯ ಲಾರದೆ ಹೋಗುತ್ತಾಳೆ. ಸಂದೀಪನ ಸಲಿಗೆ ಹೆಚ್ಚುತ್ತದೆ; ಅವನ ದುಷ್ಪ್ರಭಾವ ದುರ್ದಮ್ಯವಾಗುತ್ತದೆ.

ವಿಮಲೆಯ ಓರಗಿತ್ತಿ ವಿಮಲೆಯ ನಡವಳಿಕೆಯನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತ ಟೀಕಿಸುತ್ತಾಳೆ. ನಿಖಿಲನ ಗುರು ಮುಂದೊದಗಬಹುದಾದ ಅನರ್ಥ ಪರಂಪರೆಗಳನ್ನು ಊಹಿಸಿ ಸಲಹೆ ಮಾಡುತ್ತಾರೆ. ನಿಖಿಲ ವಿಮಲೆಯ ಹಾದಿಯಲ್ಲಿ ಯಾವ ಅಡ್ಡಿಯನ್ನೂ ಒಡ್ಡುವುದಿಲ್ಲ. ಸಂಸಾರವೇ ನಾಶವಾಗುವಸ್ಥಿತಿ ಯಲ್ಲಿದ್ದರೂ ನಿಖಿಲ ತನ್ನನ್ನೇಕೆ ಹೊರಗೆ ಹಾಕುವುದಿಲ್ಲವೆಂದು ಸಂದೀಪನಿಗೆ ಸಹ ಆಶ್ಚರ್ಯ. ನಿಖಿಲ ಬಲವಂತದಿಂದ ಯಾವ ಕಾರ್ಯವನ್ನೂ ಮಾಡಲಿಚ್ಛಿಸುವುದಿಲ್ಲ: ಜನಗಳ ಮೇಲೆ ಬಲವಂತ ದಿಂದ ಸ್ವದೇಶಿ ವ್ರತವನ್ನು ಹೊರಿಸಲಾರ; ಬಲವಂತದಿಂದ ವಿಮಲೆಯನ್ನು ನೀತಿಯ ಕಟ್ಟಿಗೂ ಒಳಪಡಿಸಲಾರ.

ಹೀಗೆ ಸಾಂಸಾರಿಕ ಜೀವನದ ಮತ್ತು ರಾಜಕೀಯ ಆಂದೋಳನದ ಆಘಾತ ಪ್ರತ್ಯಾಘಾತಗಳಿಂದ ಕಥೆ ಕುತೂಹಲ ವನ್ನು ಕೆರಳಿಸುತ್ತ ಬಿರುಗಾಳಿಗೆ ಸಿಕ್ಕಿದ ನೌಕೆಯಂತೆ ವಿಮಲೆ ಯನ್ನೂ ದೇಶವನ್ನೂ ದುರಂತದೆಡೆಗೆ ಕೊಂಡೊಯ್ಯುತ್ತದೆ. ಕಥೆಯ ಆರಂಭದಲ್ಲಿಯೆ ನಮಗೆ ವಿಮಲೆಯ ವಿಷಯದಲ್ಲಿ ಆಕ್ಕರೆ ಹುಟ್ಟುತ್ತದೆ. ಈಗ, ಅವಳಲ್ಲಿ ಸಂದೀಪನ ಸಲಿಗೆ ಹೆಚ್ಚಿದಂತೆ, ನಮ್ಮ ಕಳವಳ ಹೆಚ್ಚುತ್ತದೆ. ಅವಳ ಭವಿಷ್ಯದ ವಿಚಾರದಲ್ಲಿ ಮರುಕವುಂಟಾಗುತ್ತದೆ.

ಉನ್ನತ ಧ್ಯೇಯಾಸಕ್ತನೂ ಸಂಸ್ಕೃತನೂ ಆದ ನಿಖಿಲನಿಗೆ —ತಿಳಿಯದ ಈ ಹೆಂಗಸು ತಕ್ಕ ಹೆಂಡತಿಯಲ್ಲವೆಂದು ಎನಿಸು

ತ್ತದೆ. ಸಂದೀಪನ ಸಾಮರ್ಥ್ಯದ ವಿಷಯದಲ್ಲುಂಟಾದ ಇವಳ ಮೋಹ ಯಾವ ಗಳಿಗೆಯಲ್ಲಿ ನಿಖಿಲನ ಸಂಸಾರವನ್ನು ವಿನಾಶದ ಹಾದಿಗೊಯ್ಯುತ್ತದೆಯೊ ಎಂಭ ಭಯ ಮನಸ್ಸನ್ನು ಆವರಿಸು ತ್ತದೆ. ಮುಂಪೆ ವಿಮಲೆ ಅನರ್ಥ ಪರಂಪರೆಗಳಿಂದ ಎಚ್ಚತ್ತು ಕೊಳ್ಳುವುದನ್ನೂ, ವಿಪ್ಲವದ ದೂತನಾದ ಸಂದೀಪ ದೇಶವನ್ನು ವಿಪತ್ತಿನ ದವಡೆಗೊಯ್ದಾಗ ನಿಖಿಲ ಧೈರ್ಯದಿಂದ ಪ್ರಾಣದಾಸೆ ಯನ್ನು ತೊರೆದು ರಕ್ಷಣೆಗೆ ನುಗ್ಗುವುದನ್ನೂ ಇಲ್ಲಿ ವಿವರಿಸುವ ಆವಶ್ಯಕತೆಯಿಲ್ಲ ; ಕಥೆಯನ್ನು ಓದಿ ತಿಳಿಯಬಹುದು.

"ಮನೆ-ಜಗತ್ತು" ಮುಖ್ಯವಾಗಿ ಪಾತ್ರಶೀಲಗಳ ಕಾದಂಬರಿ. ಇದರಲ್ಲಿ ಕಥಾ ಭಾಗ ಸ್ವಲ್ಪ. ಅನಿರೀಕ್ಷಿತವಾಗಿ ಹೊರಗಿನಿಂದ ಒದಗಿ ಬರುವ ಘಟನೆಗಳಿಲ್ಲ. ಘಟನೆಗಳ ಮೂಲ ಪ್ರಮುಖ ವ್ಯಕ್ತಿಗಳ ಗುಣಶೀಲಗಳಲ್ಲಿ ಅಡಗಿವೆ. ಮುಖ್ಯ ಘಟನೆಗಳು ಸಂದೀಪನ ವ್ಯಾಪಕವಾದ ಪ್ರಭಾವದಿಂದ ನಡೆಯು ತ್ತವೆ. ಸಂದೀಪನದು ಬಹು ಯಶಸ್ವಿಯಾಗಿ ಚಿತ್ರಿತವಾದ ಪಾತ್ರ. ಕಾದಂಬರಿಯ ವ್ಯಕ್ತಿಗಳೆಲ್ಲ ಜೀವಕಳೆಯಿಂದ ತುಂಬಿವೆ. ಆದರ್ಶವಾದಿಯಾದ ನಿಖಿಲನ ವ್ಯಕ್ತಿತ್ವ ಸಹ ಸ್ವಾಭಾವಿಕವಾಗಿ ರೂಪಿತವಾಗಿದೆ. ಪ್ರಶಾಂತ ಸ್ವಭಾವದ ಗುರುವಿನ ಪಾತ್ರ ಸೂಕ್ಷ್ಮವಾಗಿ ಲಿಖಿತವಾಗಿದೆಯಾದರೂ ಸ್ಪಷ್ಟವಾಗಿದೆ. ರಾಜ ಕೀಯ ಕ್ರೌರ್ಯ ಅನೀತಿಗಳ ತುಯ್ದದ ಮಧ್ಯೆ ಬೇರೆ ಬೇರೆ ರೀತಿ ಯಲ್ಲಿ ಕೊಂಚ ಉಪಶಮನವನ್ನು ಒದಗಿಸತಕ್ಕವರು ಓರಗಿತ್ತಿ ಮತ್ತು ಅಮೂಲ್ಯ. ಕತ್ತಲೆಯ ಪ್ರಪಂಚದಲ್ಲಿ ಇವರಿಬ್ಬರ ವಾತ್ಸಲ್ಯ ಪ್ರೀತಿಗಳು ಬೆಳಕಿನ ತಾರೆಗಳಂತೆ ಮಿನುಗುತ್ತವೆ.

ಕಾದಂಬರಿಯಲ್ಲಿ ಕಥೆಯ ಅಂಶ ಸ್ವಲ್ಪವಾದರೂ ಒಟ್ಟು ಕಥೆಯ ಕಟ್ಟಡ ಬಿಗಿಯಾಗಿದೆ. ಕಥಾತಂತ್ರ ಕುತೂಹಲಜನಕ ವಾಗಿ ಹೆಣೆದುಕೊಂಡಿದೆ. ಕಥೆ ಸಂವಾದಗಳ ಮೂಲಕ ಪುಷ್ಟಿ ಹೊಂದಿ ಸಾಗುವಂತೆ ಕಾಣುತ್ತದೆ. ಕಥೆ ಉದ್ದಕ್ಕೂ ನಾಟ

ಕೀಯವಾದ ಶಕ್ತಿಯಿಂದ ಸ್ಪಂದಿಸುತ್ತ ಘನಗಂಭೀರವಾದ ನಡಗೆಯಿಂದ ಚಲಿಸುತ್ತದೆ.

ಕಥೆಗೆ ವಿಶೇಷವಾದ ಕಳೆಯನ್ನು ತಂದುಕೊಡುವ ಒಂದು ಅಂಶ ಅದರ ವಿನೂತನ ಕಥನ ರೀತಿ. ಇದರಲ್ಲಿನ ಮುಖ್ಯ ವ್ಯಕ್ತಿಗಳು ತಮ್ಮ ಕಥೆಯನ್ನು ತಾವೇ ಹೇಳುತ್ತಾರೆ ಇದರಿಂದ ಅವರ ಅಭಿಪ್ರಾಯಗಳು, ಧ್ಯೇಯೋದ್ದೇಶಗಳು, ರಾಗ ವಿರಾಗಗಳು ಶಕ್ತಿಯಲ್ಲೂ ತೀಕ್ಷ್ಣತೆಯಲ್ಲೂ ಸ್ಫುಟಗೊಳ್ಳುತ್ತವೆ. ವ್ಯಕ್ತಿಗಳು ನಮ್ಮನ್ನು ನೇರವಾಗಿ ತಮ್ಮ ಹೃದಯದೆಡೆಗೇ ಕೊಂಡೊಯ್ಯುತ್ತಾರೆ. ಆತ್ಮಕಥನದ ಸಮಯದಲ್ಲಿ ಒಂದೆಡೆ ಆತ್ಮ ವಿಮರ್ಶೆಯೂ ಇನ್ನೊಂದೆಡೆ ತಮಗೆ ಸಂಬಂಧಿಸಿದ ವ್ಯಕ್ತಿಗಳ ಪರೀಕ್ಷೆಯೂ ನಡೆಯುತ್ತದೆ. ಕಥನದ ಮಧ್ಯೆ, ನಡೆದ ಘಟನೆಗಳನ್ನು ಸಂಭಾಷಣೆಯ ರೂಪದಲ್ಲಿ ಹೇಳುವುದರಿಂದ ಕಥನದ ಏಕ ರೀತಿ ಮಾಯವಾಗಿ ವೈವಿಧ್ಯ ಉಂಟಾಗುತ್ತದೆ. ಅಲ್ಲದೆ ಸಂಭಾಷಣೆಗಳಲ್ಲಿ, ನಾಟಕಗಳಲ್ಲಿ ಸಾಧಾರಣವಾಗಿ ಕಂಡು ಬರುವ ಮಾತಿನ ಅಡಕವೂ ಹಿಡಿತವೂ ಇವೆ.

ಇದರಲ್ಲಿ ಬರುವ ಚರ್ಚೆಗಳು ದೀರ್ಘವಾಗಿಲ್ಲ. ಅವು ಹಾಳತವಾಗಿದ್ದು ಓಜಸ್ವಿಯಾಗಿದ್ದು ವ್ಯಕ್ತಿಗಳ ಗುಣಾವಗುಣಗಳನ್ನೂ ಧ್ಯೇಯ ಧೋರಣೆಗಳನ್ನೂ ವಿಶದೀಕರಿಸುತ್ತ ಕಥೆಯ ಓಟಕ್ಕೆ ಸಹಾಯಕವಾಗಿ ಅದರ ಆವಶ್ಯಕಾಂಗವಾಗಿವೆ. ಚರ್ಚೆಗೆ ಬರತಕ್ಕ ವಿಷಯಗಳಾದರೂ ನಾನಾ ಬಗೆಯವು :

ದೇಶಭಕ್ತಿಯ ಹೆಸರಿನಲ್ಲಿ ಪರದೇಶಗಳನ್ನು ದ್ವೇಷಿಸುವುದು ಸರಿಯೆ ? ಆತ್ಮವನ್ನು ಕಳೆದುಕೊಂಡು ದೇಶವನ್ನು ಉಳಿಸಿಕೊಳ್ಳಬಹುದೊ ? ಮನುಷ್ಯನ ಗುರಿ ಸತ್ಯವೊ ಜಯವೊ ? ಸ್ವಾತಂತ್ರ್ಯಸಾಧನೆಗಾಗಿ ಸತ್ಯ ನೀತಿಗಳನ್ನು ಬದಿಗೊತ್ತಬಹುದೇ ? ಸ್ವಾತಂತ್ರ್ಯದ ಹೆಸರಿನಲ್ಲಿ ದಬ್ಬಾಳಿಕೆಯನ್ನು ನಡಸಿ ದೇಶಕ್ಕಾಗಿ ಜನರ ಹಣವನ್ನು ಲೂಟಿ ಮಾಡಬಹುದೆ ? ಸಂಸಾರವಂದಿಗಳಾದ

ಸ್ತ್ರೀ ಹೊರಗಿನ ಪ್ರಪಂಚದ ವಿಷಯದಲ್ಲಿ ಹೇಗೆ ನಡೆದುಕೊಳ್ಳ ಬೇಕು ? ಮುಸ್ಲಿಮರ ಸಮಸ್ಯೆಯನ್ನು ಬಗೆ ಹರಿಸುವ ರೀತಿ ಯಾವುದು ? ನಿಜವಾದ ದೇಶಭಕ್ತರು ಯಾರು ?–ನಿಖಿಲನಂಥ ಸತ್ತ್ವಶಾಲಿಗಳೊ ? ಧರ್ಮದ ಅಳುಕಿಲ್ಲದೆ ಮುನ್ನುಗ್ಗುವ ಸಂದೀಪ ನಂತಹ ಉತ್ಸಾಹಶಾಲಿಗಳೊ ?–ಈ ವಾದಗಳು ಆಯಾ ಸಂದರ್ಭ ಗಳಿಗೆ ಆವಶ್ಯಕವಾದ ಕಥಾಂಗವಾಗಿರುವುದರಿಂದ ಬೇಸರವನ್ನು ತರುವುದಿಲ್ಲ. ಅಲ್ಲದೆ ವಾದ ಪ್ರತಿವಾದಗಳು ವ್ಯಕ್ತಿಗಳ ಪ್ರೇರಕ ಶಕ್ತಿಯನ್ನು ತೋರುವ ಮಾತುಗಳಾಗಿ ಬರುವುದರಿಂದ ಅವುಗಳಲ್ಲಿ ನಮಗೆ ಆಸಕ್ತಿ. ಈ ಆಸಕ್ತಿಯ ಮೂಲ ಕಾರಣ ಕಥೆಯಲ್ಲಿರುವ ನೈತಿಕ ಬೆಲೆ.

ಇದರಲ್ಲಿ ಎಲ್ಲಿಯೂ ಕವಿಯ ಮಾತು ನೇರವಾಗಿ ಬರುವು ದಿಲ್ಲ. ಆದರೂ ಠಾಕೂರರ ಒಲವು ಯಾವ ಕಡೆಗಿದೆಯೆಂಬುದು ಸ್ಪಷ್ಟವಾಗಿದೆ. ಕಥೆಯನ್ನು ನಡಸಿಕೊಂಡು ಹೋಗಿರುವ ರೀತಿ ಯಿಂದ, ಪಾತ್ರಗಳ, ಘಟನೆಗಳ ಮತ್ತು ಪರಿಣಾಮಗಳ ಜೋಡಣೆಯ ರೀತಿಯಿಂದ, ಅದು ವ್ಯಕ್ತವಾಗುತ್ತದೆ: ನೀತಿ ಸಮ್ಮತವಾದ ನಡವಳಿಕೆ ವ್ಯಕ್ತಿಯ ಶೀಲವನ್ನು ಬೆಳೆಸುವುದರಲ್ಲಿ ಹೇಗೆ ಆವಶ್ಯಕವೊ ಹಾಗೆಯೆ ದೇಶದ ಬೆಳವಣಿಗೆಯ ವಿಷಯ ದಲ್ಲಿಯೂ ಆವಶ್ಯಕ. ಜಯವೇ ಗುರಿಯಾಗುಳ್ಳ ಪಾಶ್ಚಾತ್ಯರ ಕಾರ್ಯ ನೀತಿ ನಮ್ಮ ದೇಶದ ರಾಜಕೀಯ ಜೀವನಕ್ಕೆ ಮೇಲ್ಪಂಕ್ತಿ ಯಾಗಲಾರದು.

**ಕೂಡಲಿ ಚಿದಂಬರಂ**

# ಕೃತಜ್ಞತೆ

ಇಂಗ್ಲಿಷಿಗೆ ಭಾಷಾಂತರವಾಗಿ ಬಂದಿರುವ ರವೀಂದ್ರನಾಥ ಠಾಕೂರರ "The Wreck," "The Home and the World" ಮತ್ತು "Gora" ಈ ಮೂರು ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದ ಮಾಡಿಕೊಟ್ಟು ಅವುಗಳ ಪ್ರಕಟನೆಗೆ ಒಪ್ಪಿ ಉಪಕಾರ ಮಾಡಿರುವ ಶ್ರೀಮತಿ ಎಚ್.ವಿ. ಸಾವಿತ್ರಮ್ಮನವರಿಗೆ ಕೃತಜ್ಞರಾಗಿದ್ದೇವೆ.

'ಮನೆ-ಜಗತ್ತು' ಕಾದಂಬರಿಯಲ್ಲಿ ಅಲ್ಲಲ್ಲಿ ಪದ್ಯ ಖಂಡಗಳು ಬರುತ್ತವೆ. ಇವುಗಳಲ್ಲಿ ೩೯ನೆಯ ಪುಟದಲ್ಲಿ ಬರುವ ಪದ್ಯಾನುವಾದ ಮಿತ್ರರಾದ ಶ್ರೀಮಾನ್ ಕೆ. ನರಸಿಂಹಶಾಸ್ತ್ರಿಗಳ ವಿಶ್ವಾಸದಿಂದ ದೊರೆತಿದ್ದು, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಇತರ ಪುಟಗಳಲ್ಲಿ ಬರುವ ಪದ್ಯಖಂಡಗಳ ಭಾಷಾಂತರಗಳಿಗೆ ಪ್ರಕಾಶಕರು ಮಾತ್ರ ಹೊಣೆ.

ಪ್ರಕಾಶಕರು

## ಶ್ರೀಮತಿ ಎಚ್. ವಿ. ಸಾವಿತ್ರಮ್ಮನವರ ಕೃತಿಗಳು

**ನಿರಾಶ್ರಿತೆ** (ಕಥೆಗಳು)

**ಮರುಮದುವೆ** (ಕಥೆಗಳು)

ಅನುವಾದಿತ :

**ನೌಕಾಘಾತ** (ಕಾದಂಬರಿ)

**ಮನೆ-ಜಗತ್ತು** (ಕಾದಂಬರಿ)

**ಗೋರಾ** (ಕಾದಂಬರಿ ; ಅಚ್ಚಿನಲ್ಲಿ )

# ವಿಷಯ ಸೂಚಿಕೆ

# ಮನೆ—ಜಗತ್ತು

## ೧ ನೆಯ ಅಧ್ಯಾಯ

## ವಿಮಲೆಯ ಕಥೆ

### ೧

ಅಮ್ಮಾ, ಇಂದು, ನಿನ್ನ ಬೈತಲೆಯ ಮುಂದೆ ರಂಜಿಸುತ್ತಿದ್ದ ಕುಂಕುಮ, ಅಗಲವಾದ ಕೆಂಪಂಚಿನ ನಿನ್ನ ಸೀರೆ, ಶಾಂತವಾದ, ಗಂಭೀರವಾದ ನಿನ್ನ ಮುದ್ದು ಕಣ್ಣುಗಳು ನನ್ನ ನೆನಪಿಗೆ ಬರುತ್ತಿವೆ. ಜೀವನದ ಪ್ರಾತಃಕಾಲದಲ್ಲಿ ಅವುಗಳನ್ನು ನಾನು ಅರುಣೋದಯದಂತೆ ಮಾರ್ಗದರ್ಶಕವಾಗಿ ಕಂಡೆನು.

ಬೆಳಕನ್ನು ನೀಡುವ ಆಗಸ ನೀಲಿಯಾಗಿರುತ್ತದೆ; ನನ್ನ ತಾಯಿಯ ಮುಖ ಶ್ಯಾಮವರ್ಣ; ಆದರೆ ಸುಂದರಿಯರ ಅಹಂಕಾರವನ್ನಡಗಿಸುವ ಅವಳ ಸೌಂದರ್ಯದಲ್ಲಿ ಪವಿತ್ರತೆಯ ಬೆಳಕಿತ್ತು.

ನಾನು ನನ್ನ ತಾಯಿಯನ್ನು ಹೋಲುತ್ತೇನೆಂದು ಎಲ್ಲರೂ ಎನ್ನುತ್ತಾರೆ. ಚಿಕ್ಕಂದಿನಲ್ಲಿ ಈ ಮಾತು ನನಗೆ ರುಚಿಸುತ್ತಿರಲಿಲ್ಲ; ಕನ್ನಡಿಯ ಮೇಲೆ ರೇಗುತ್ತಿದ್ದೆ. ನನ್ನ ದೇಹದ ಕಪ್ಪು ದೇವರ ಅನ್ಯಾಯವೆಂದೂ, ನನ್ನ ತಪ್ಪಿನಿಂದಾದುದಲ್ಲವೆಂದೂ, ಆಲೋಚಿಸುತ್ತಿದ್ದೆ. ಈ ತಪ್ಪನ್ನು ಸರಿಪಡಿಸಲು ದೇವರು ನನ್ನನ್ನು ಪುರಾಣಗಳಲ್ಲಿ ಕಾಣುವ ಆದರ್ಶ ಸ್ತ್ರೀಯನ್ನಾಗಿ ಮಾಡಬೇಕೆಂದು ಬಯಸುತ್ತಿದ್ದೆ.

ಮದುವೆಯ ಪ್ರಸ್ತಾಪ ಬಂದಾಗ ಒಬ್ಬ ಜ್ಯೋತಿಷ್ಕನು ನನ್ನ ಹಸ್ತವನ್ನು ಪರೀಕ್ಷಿಸಿ, "ಈಕೆ ಅದೃಷ್ಟಶಾಲಿನಿ. ಆದರ್ಶ ಪತ್ನಿಯಾಗುತ್ತಾಳೆ," ಎಂದನು. ಕೇಳಿದವರೆಲ್ಲರೂ, "ಅದರಲ್ಲಿ

ಆಶ್ಚರ್ಯವೇನು ? ತಾಯಿಯಂತೆ ಮಗಳು," ಎಂದರು.

ನಾನು ಒಂದು ಶ್ರೀಮಂತ ಜಮೀನ್ದಾರ ಮನೆತನವನ್ನು ಸೇರಿದೆ. ಚಿಕ್ಕವಳಾಗಿದ್ದಾಗ ಕಟ್ಟುಕತೆಗಳ ರಾಜಪುತ್ರರ ವರ್ಣನೆಯನ್ನು ಕೇಳಿದ್ದೆ. ಆದರೆ ನನ್ನ ಗಂಡ ಈ ಕಲ್ಪನೆಯ ರಾಜಕುಮಾರರಂತಿರಲಿಲ್ಲ. ಆತನೂ ನನ್ನಂತೆಯೇ ಕಪ್ಪು. ಅದರಿಂದ ನನ್ನ ಸೌಂದರ್ಯದ ವಿಚಾರದಲ್ಲಿದ್ದ ಸಂಕೋಚ ಕೊಂಚ ಕಡಿಮೆಯಾದರೂ ಮನಸ್ಸಿನಲ್ಲಿ ಸ್ವಲ್ಪ ಅಸಮಾಧಾನ ಉಳಿಯಿತು.

ಆದರೆ ಬಾಹ್ಯ ಸೌಂದರ್ಯ ಇಂದ್ರಿಯಗಳ ಪರೀಕ್ಷೆಯಿಂದ ಪಾರಾಗಿ ಹೃದಯ ಮಂದಿರವನ್ನು ಹೊಕ್ಕರೆ ತನ್ನ ಇರವನ್ನೇ ಮರೆಯಬಲ್ಲುದು. ಒಳಹೊಕ್ಕು ನೋಡಿದರೆ ದೃಢವಾದ ಅನುರಾಗವೇ ಸೌಂದರ್ಯವೆಂಬುದನ್ನು ಚಿಕ್ಕಂದಿನ ಅನುಭವದಿಂದ ತಿಳಿದಿದ್ದೆ. ನನ್ನ ತಾಯಿ ಪ್ರೀತಿಯಿಂದ ಬಿಡಿಸಿದ ಹಣ್ಣುಗಳನ್ನು ತಟ್ಟೆಯಲ್ಲಿ ನನ್ನ ತಂದೆಯ ಮುಂದಿಟ್ಟು ಮುತ್ತುವ ನೊಣಗಳನ್ನು ಓಡಿಸುತ್ತಾ ಕುಳಿತಳೆಂದರೆ ಆಕೆಯ ಸೇವೆ ಬಾಹ್ಯಾಡಂಬರಗಳನ್ನು ಮೀರಿದ ಸೌಂದರ್ಯದಲ್ಲಿ ಸೇರಿ ಹೋಗುತ್ತಿತ್ತು. ಚಿಕ್ಕಂದಿನಲ್ಲೂ ಆ ಅನುರಾಗದ ಶಕ್ತಿಯನ್ನು ನಾನರಿತಿದ್ದೆ. ಅದು ಚರ್ಚೆ, ಅನುಮಾನ, ಲೆಖ್ಖಾಚಾರಗಳನ್ನು ಮೀರಿದ್ದು : ಅದು ಶುದ್ಧ ಸಂಗೀತದಂತೆ.

ಮದುವೆಯಾದ ಮೇಲೆ, ಬೆಳಗಿನ ಜಾವದಲ್ಲಿ, ಸದ್ದಿಲ್ಲದೆ, ಆತನನ್ನೆಚ್ಚರಿಸದೆ, ಪತಿಯ ಪಾದ ಧೂಳಿಯನ್ನು ತಲೆಯಲ್ಲಿ ಧರಿಸಿದಾಗ ನನ್ನ ಕುಂಕುಮ ಬೆಳಗಿನ ನಕ್ಷತ್ರದಂತೆ ಬೆಳಗುತ್ತಿರುವ ಹಾಗೆ ನನಗೆ ಭಾಸವಾಗುತ್ತಿದ್ದದ್ದು ಈಗಲೂ ನನಗೆ ನೆನಪಿದೆ. ಒಂದು ದಿನ ಆತನು ಎಚ್ಚರಗೊಂಡು, "ಏನಿದು ವಿಮಲಾ ? ಏನು ಮಾಡುತ್ತಿರುವೆ ? " ಎಂದು ನಕ್ಕರು.

ನನಗೆ ತುಂಬಾ ನಾಚಿಕೆಯಾಯಿತು. ಗುಟ್ಟಾಗಿ ಪುಣ್ಯವನ್ನು ಸಂಪಾದಿಸಲು ಪ್ರಯತ್ನಿಸುತ್ತಿದ್ದೇನೆಂದು ಆತನು ತಿಳಿದು

ಕೊಂಡಿರಬಹುದು. ಆದರೆ ನನಗೆ ಪುಣ್ಯದ ಆಲೋಚನೆಯೇ ಇರಲಿಲ್ಲ. ಹೆಂಗಸಿನ ಹೃದಯದ ರೀತಿ ಅದು: ಪ್ರೀತಿಸ ಬೇಕಾದರೆ ಅದು ಪೂಜಿಸಲೇ ಬೇಕು.

ಬಾದಷಹರ ಕಾಲದಿಂದ ನನ್ನ ಮಾವನ ವಂಶ ಪ್ರಸಿದ್ಧ ವಾದುದು. ರೀತಿ ಭಾಷೆ ವ್ಯವಹಾರಗಳು ಮೊಗಲಾಯಿ ಪಠಾನ ರಿಗೆ ಸೇರಿದಂತೆಯೂ, ಆಚಾರ ಪದ್ಧತಿಗಳು ಮನು, ಪರಾಶರ ಕಾಲದಂತೆಯೂ ಇದ್ದುವು. ಆದರೆ ನನ್ನ ಪತಿ ಮಾತ್ರ ತೀರ ಆಧುನಿಕ. ಆ ಮನೆತನದಲ್ಲಿ, ಕಾಲೇಜಿಗೆ ಹೋಗಿ ಎಂ.ಎ. ಪದವಿ ಧರಿಸಲು ಆತನೇ ಮೊದಲು. ಆತನ ಅಣ್ಣ ಮದ್ಯಪಾನಾ ಸಕ್ತನಾಗಿ ಚಿಕ್ಕಂದಿನಲ್ಲಿಯೇ ಮಕ್ಕಳಿಲ್ಲದೆ ಸತ್ತು ಹೋಗಿದ್ದನು. ನನ್ನ ಪತಿ ಕುಡಿಯುತ್ತಿರಲಿಲ್ಲ. ಆ ವಂಶದಲ್ಲಿ ಹಾಗೆ ಯಾರೂ ಇರದಿದ್ದುದರಿಂದ ಎಲ್ಲರಿಗೂ ವಿಚಿತ್ರ ವ್ಯಕ್ತಿಯಾಗಿ ಕಾಣು ತ್ತಿದ್ದರು. ಪರಿಶುದ್ಧತೆ—ಅದೃಷ್ಟ ಹೀನರಿಗೆ ಮಾತ್ರ ತಕ್ಕುದೆಂದು ಜನರ ಅಭಿಪ್ರಾಯ. ಚಂದ್ರನಲ್ಲಿ ಕಲೆಗಳಿರುವಂತೆ ನಕ್ಷತ್ರಗಳಲ್ಲಿರ ಬಲ್ಲುವೇ !

ನನ್ನ ಪತಿಯ ತಂದೆ ತಾಯಿಗಳು ಬಹು ಹಿಂದೆಯೇ ತೀರಿ ಹೋಗಿದ್ದರು. ಆತನ ಅಜ್ಜಿಯೇ ಮನೆಯ ಯಜಮಾನಿ. ನನ್ನ ಪತಿ ಆಕೆಯ ಜೀವನ ಸರ್ವಸ್ವ; ಆತನು ಯಾವ ಹಳೆಯ ಸಂಪ್ರದಾಯವನ್ನು ಮೀರಿದರೂ ಆಕೆ ಆಕ್ಷೇಪಿಸುತ್ತಿರಲಿಲ್ಲ. ಮನೆಯಲ್ಲೂ ನೆರೆಹೊರೆಯಲ್ಲೂ ಜನ ನಾಲಗೆಯನ್ನು ಮನಸ್ವಿ ಯಾಗಿ ಚಲಾಯಿಸಿದರೂ ನನ್ನ ಪತಿ ಲಕ್ಷಿಸದೆ, ನನಗೆ ಪಾಠ ಹೇಳಿ, ಸಂಗಾತಿಯಾಗಿರಲು ಮಿಸ್. ಗಿಲ್ಬಿ ಎಂಬ ಪಾಶ್ಚಾತ್ಯ ಹೆಂಗಸನ್ನು ಗೊತ್ತು ಮಾಡಿದರು.

ನನ್ನ ಪತಿ, ಆಗತಾನೆ ಬಿ.ಎ. ಪದವೀಧರರಾಗಿ ಎಂ.ಎ. ಗೆ ಓದುತ್ತಿದ್ದುದರಿಂದ ಕಲ್ಕತ್ತೆಯಲ್ಲಿರಬೇಕಾಗಿತ್ತು. ಪ್ರತಿದಿನವೂ ನನಗೆ ಕಾಗದಗಳನ್ನು ಬರೆಯುತ್ತಿದ್ದರು. ಅವರು ಬರೆಯು

ತ್ತಿದ್ದುದು ಕೆಲವೇ ಮಾತುಗಳು; ಆದರೂ ಎಷ್ಟು ಪ್ರೇಮ ಪೂರಿತವಾದುವು! ಆ ಕಾಗದಗಳನ್ನು ಗಂಧದ ಪೆಟ್ಟಿಗೆಯಲ್ಲಿಟ್ಟು ಪ್ರತಿದಿನವೂ ಪುಷ್ಪಗಳಿಂದ ಮುಚ್ಚುತ್ತಿದ್ದೆನು.

ಆ ವೇಳೆಗೆ ಕಟ್ಟು ಕತೆಯ ರಾಜಕುಮಾರ ಪ್ರಾತಃಕಾಲದ ಚಂದ್ರನಂತೆ ಮಾಯವಾಗಿ, ನಿಜಕಾಂತನು ನನ್ನ ಹೃದಯ ಸಿಂಹಾಸನದಲ್ಲಿ ಪ್ರತಿಷ್ಠಿತನಾಗಿದ್ದನು. ನಾನು ಆತನ ರಾಣಿ; ಆತನ ಪಕ್ಕದಲ್ಲಿ ನನಗೆ ಸ್ಥಾನವಿತ್ತು; ಆದರೆ ಆತನ ಪಾದದಡಿ ಯಲ್ಲಿ ಕುಳಿತುಕೊಳ್ಳುವುದೇ ನನಗೆ ಹೆಚ್ಚು ಪ್ರಿಯವಾಗಿತ್ತು.

ಈಗ ನಾನು ವಿದ್ಯಾವತಿಯಾಗಿ ಆಧುನಿಕ ಪ್ರಪಂಚದಲ್ಲಿ ಅಡಿಯಿಟ್ಟಿರುವುದರಿಂದ ನನ್ನ ಮಾತುಗಳನ್ನು ನೋಡಿ ನನಗೇ ನಾಚಿಕೆಯಾಗುತ್ತದೆ. ಈ ಆಧುನಿಕ ನಾಗರಿಕತೆಯ ರೀತಿ ನೀತಿ ಗಳ ಸೋಂಕಿಲ್ಲದಿದ್ದರೆ, ಪ್ರೇಮಮಯಳಾದ ಹೆಂಗಸಿಗೆ ಸೇವಾ ನಿಷ್ಠೆಯೆಂಬುದು ಸಹಜವಾದದ್ದೆಂದು ನನಗೇ ತಿಳಿಯುತ್ತಿತ್ತು. ಪತಿಭಕ್ತಿಯೆಂಬುದು ಕಾಪೀ ಪುಸ್ತಕದ ಜಡವಾದ ಮೇಲ್ಪಂಕ್ತಿ ಯಲ್ಲವೆಂದು ಅರಿಯುತ್ತಿದ್ದೆ.

ಆದರೆ ನನ್ನ ಪತಿಗೆ ಈ ವಿಧವಾದ ಪೂಜೆ ಇಷ್ಟವಿರಲಿಲ್ಲ. ಅದೇ ಆತನ ಹೆಚ್ಚಳ: ಪತ್ನಿಯಿಂದ ಹಕ್ಕಾಗಿ ಭಕ್ತಿಯನ್ನಪೇಕ್ಷಿ ಸುವವರು ಹೇಡಿಗಳು. ಆದರಿಂದ ಇಬ್ಬರಿಗೂ ಅಪಮಾನ.

ಆತನ ಪ್ರೀತಿಯ ಸಂಪತ್ತು ಸೇವೆಗಳು ನನ್ನನ್ನು ಮುಳು ಗಿಸಿ ಬಿಡುತ್ತಿದ್ದವು. ಆದನೆ ನನಗಿದ್ದ ಆತುರ ಪ್ರೀತಿಸುವುದೇ ಹೊರತು ಪ್ರೀತಿಸಲ್ಪಡುವುದಲ್ಲ. ಪ್ರೀತಿಯ ಪುಷ್ಪ ನೆಲದ ಭೂಮಿಯ ಧೂಳಿನಲ್ಲರಳುವಂತೆ, ಅಲಂಕೃತ ಪಾತ್ರೆಯಲ್ಲರಳು ವುದಿಲ್ಲ.

ಪೂರ್ವ ಸಂಪ್ರದಾಯಗಳನ್ನೆಲ್ಲ ಮೀರಲು ನನ್ನ ಪತಿಗೂ ಸಾಧ್ಯವಿರಲಿಲ್ಲ. ಇಷ್ಟಬಂದಾಗಲೆಲ್ಲ ನಾವು ಸಂಧಿಸಲು ಅವಕಾಶ ವಿರಲಿಲ್ಲ. ಆತನು ಬರುವ ಸಮಯ ನಿರ್ದಿಷ್ಟವಾಗಿ ತಿಳಿದಿರು

ತ್ತಿದ್ದುದರಿಂದ, ಅದಕ್ಕಾಗಿ ಪ್ರೇಮದಿಂದ ಸಿದ್ಧತೆ ಮಾಡುತ್ತಿದ್ದೆ. ಛಂದೋಮಾರ್ಗದಿಂದ ಬರುವ ಪದ್ಯದ ಪ್ರಾಸದಂತೆ ನಮ್ಮ ಸಮಾಗಮ ಒದಗಬೇಕಾಗಿತ್ತು.

ದಿನದ ಕೆಲಸವನ್ನೆಲ್ಲಾ ಮುಗಿಸಿ, ಸ್ನಾನಮಾಡಿ, ಕೂದಲನ್ನು ಸುಂದರವಾಗಿ ಕಟ್ಟಿ, ಕುಂಕುಮವನ್ನು ಸರಿಪಡಿಸಿಕೊಂಡು ಮಡಿಸಿಟ್ಟಿದ್ದ ಸೀರೆಯನ್ನುಡುತ್ತಿದ್ದೆನು. ಮನೆಯ ತಾಪತ್ರಯಗಳಿಂದ ಮನಸ್ಸನ್ನೂ ದೇಹವನ್ನೂ ದೂರಮಾಡಿ ಆ ಪವಿತ್ರ ಸಮಯದಲ್ಲಿ ಅವುಗಳನ್ನು ಆ ಏಕೈಕ ವ್ಯಕ್ತಿಗೆ ಅರ್ಪಿಸುತ್ತಿದ್ದೆನು. ಆತನೊಡನೆ ಕಳೆದ ಆ ಸಮಯ ಅಲ್ಪವಾದರೂ ಅನಂತವಾಗಿ ತೋರುತ್ತಿತ್ತು.

ಪ್ರೇಮದಲ್ಲಿ ಸಮಪಾಲನ್ನಪೇಕ್ಷಿಸುವುದರಿಂದ ಪತಿಪತ್ನಿಯರು ಸಮಾನರೆಂದು ನನ್ನ ಪತಿ ಹೇಳುತ್ತಿದ್ದರು. ನಾನು ಆತನೊಡನೆ ಚರ್ಚಿಸದಿದ್ದರೂ, ಭಕ್ತಿಯಿಂದ ಸಮಾನತೆಗೆ ಭಂಗಬರಲಾರದೆಂದು ನನ್ನ ಹೃದಯ ಹೇಳುತ್ತಿತ್ತು. ಆದರಿಂದ ಸಮಾಗಮದ ಮಟ್ಟ ಉನ್ನತವಾಗುತ್ತದೆ. ಮೇಲ್ತರದ ಈ ಸಮಾನತೆಯ ಆನಂದ ಶಾಶ್ವತವಾದದ್ದು. ಅದೆಂದಿಗೂ ಅಲ್ಪತೆಯ ಮಟ್ಟಕ್ಕೆ ಜಾರುವುದಿಲ್ಲ.

ಪ್ರಿಯತಮ, ನನ್ನಿಂದ ಪೂಜೆಯನ್ನಪೇಕ್ಷಿಸದಿದ್ದುದು ನಿಮ್ಮ ಯೋಗ್ಯತೆಗೆ ತಕ್ಕುದೇ. ಆದರೆ ನೀವು ಅದನ್ನು ಸ್ವೀಕರಿಸಿದ್ದರೆ ನನಗೆ ನಿಜವಾದ ಸಹಾಯವಾಗುತ್ತಿತ್ತು. ನನ್ನನ್ನು ಅಲಂಕರಿಸಿ, ವಿದ್ಯಾಭ್ಯಾಸ ಮಾಡಿಸಿ, ಕೇಳಿದ ಮತ್ತು ಕೇಳದ ವಸ್ತುಗಳನ್ನು ತಂದುಕೊಟ್ಟು ನಿಮ್ಮ ಪ್ರೀತಿಯನ್ನು ವ್ಯಕ್ತಗೊಳಿಸಿದಿರಿ. ನಿಮ್ಮ ಪ್ರೀತಿಯ ಆಳವನ್ನು ಕಂಡಿದ್ದೇನೆ. ನನ್ನಮೇಲಿನ ಪ್ರೀತಿಯಿಂದ ನೀವು ಅಡಗಿಸಿಕೊಂಡ ನೋವಿನ ನಿಟ್ಟುಸಿರನ್ನು ಅರಿತಿದ್ದೇನೆ. ದೇವಲೋಕದ ಪುಷ್ಪವೆಂದು ನನ್ನ ದೇಹವನ್ನು

ಪ್ರೀತಿಸಿದಿರಿ. ದೇವದತ್ತವಾದ ಅಪೂರ್ವ ವಸ್ತುವೆಂದು ನನ್ನ ಸ್ವಭಾವವನ್ನು ಮೆಚ್ಚಿದಿರಿ.

ನನ್ನ ಬಾಗಿಲಿಗೆ ನಿಮ್ಮನ್ನು ಬರಮಾಡಿದ ಸಂಪತ್ತೆಲ್ಲಾ ನನ್ನದೇ ಎಂದು ಅಭಿಮಾನದಿಂದ ಹಿಗ್ಗಿದೆ. ಆದರೆ ಇಂತಹ ದುರಭಿಮಾನ ಪ್ರೀತಿಯ ಸಂಪೂರ್ಣ ಅರ್ಪಣೆಗೆ ತಡೆಯಾಗುತ್ತದೆ. ರಾಣಿಯ ಸಿಂಹಾಸನದ ಮೇಲೆ ಕುಳಿತು ಭಕ್ತಿಯನ್ನು ಅಪೇಕ್ಷಿಸ ತೊಡಗಿದನ್ನೆ ಅಪೇಕ್ಷೆ ಹೆಚ್ಚುತ್ತಲೇ ಹೋಗುತ್ತದೆ. ಅದಕ್ಕೆ ತೃಪ್ತಿಯೇ ಇರುವುದಿಲ್ಲ. ಒಬ್ಬ ಮನುಷ್ಯನ ಮೇಲೆ ಶಕ್ತಿಯಿದ್ದ ಮಾತ್ರದಿಂದ ಸ್ತ್ರೀಗೆ ನಿಜವಾದ ಸುಖವಿರುವುದೆ! ಅಭಿಮಾನವನ್ನು ಭಕ್ತಿಯಲ್ಲಿ ಲೀನ ಮಾಡುವುವೇ ಸ್ತ್ರೀಯ ಮೋಕ್ಷ.

ನಮ್ಮ ಸಂತೋಷದ ದಿನಗಳು ಎಲ್ಲರ ಈರ್ಷ್ಯೆಗೂ ಕಾರಣವಾಗಿದ್ದುವೆಂದು ಈ ದಿನ ನನ್ನ ನೆನಪಿಗೆ ಬರುತ್ತಿದೆ. ನನ್ನ ಅದೃಷ್ಟ ಆಕಸ್ಮಾತ್ ಲಭಿಸಿದುದೇ ಹೊರತು, ಸಂಪಾದಿಸುವ ಶಕ್ತಿಯಿಂದ ದಕ್ಕಿದುದಲ್ಲವಾದುದರಿಂದ ಎಲ್ಲರೂ ಹೊಟ್ಟೆಕಿಚ್ಚು ಪಟ್ಟುದು ಸ್ವಾಭಾವಿಕವಾಗಿಯೇ ಇತ್ತು. ಪ್ರತಿ ದಿನವೂ ಅಂತಹ ಅದೃಷ್ಟವನ್ನುಳಿಸಿಕೊಳ್ಳಲು ಅನೇಕ ದಿನಗಳು ಪ್ರಯತ್ನ ಪಡದಿದ್ದರೆ ನಿಲ್ಲುವುದಿಲ್ಲ. ಅಯೋಗ್ಯವಾದ ಕೈಗಳಿಂದ ದೇವನ ವರಗಳು ಹೇಗೆ ಜಾರಿ ಹೋಗುತ್ತವೆ!

ನನ್ನ ಪತಿಯ ತಾಯಿ ಅಜ್ಜಿಯರು ಸೌಂದರ್ಯಕ್ಕೆ ಪ್ರಖ್ಯಾತರಾಗಿದ್ದರು. ನನ್ನ ವಿಧವೆಯಾದ ಓರಗಿತ್ತಿಯೂ ಅಸಾಮಾನ್ಯ ಸುಂದರಿಯಾಗಿದ್ದಳು. ಅವರೆಲ್ಲರನ್ನೂ ವಿಧಿಯು ಸುಖದಿಂದ ವಂಚಿಸಿದ ಮೇಲೆ, ಮಿಕ್ಕ ಮೊಮ್ಮಗನಿಗೆ ಸುಂದರಿಯೇ ಪತ್ನಿಯಾಗಬೇಕೆಂದು ಅಪೇಕ್ಷಿಸುವುದಿಲ್ಲವೆಂದು ಅಜ್ಜಿ ಶಪಥ ಮಾಡಿದಳು. ನನ್ನ ಶುಭ ಚಿಹ್ನೆಗಳು ನನ್ನನ್ನು ಆ ಮನೆಯೊಳ ಹೊಗಿಸಿದುವು. ಇಲ್ಲದಿದ್ದರೆ ಅಲ್ಲಿರಲು ನನಗೆ ಯಾವ ಹಕ್ಕೂ ಇರಲಿಲ್ಲ.

ಈ ಸಂಪತ್ತಿನ ನಡುವೆ ಸ್ತ್ರೀಯರಿಗೆ ಗೌರವ ದೊರಕಿರಲಿಲ್ಲ. ಮದ್ಯಪಾನದ ಗಲಭೆಯಲ್ಲಿ, ವೇಶ್ಯೆಯರ ಗೆಜ್ಜೆಯ ನಿನಾದದ ಸಂಭ್ರಮದಲ್ಲಿ ಪುರಾತನ ಮನೆತನದ ರಾಣಿಯರೆಂಬ ಹೆಮ್ಮೆ ಮಾತ್ರ ಅವರ ಆತ್ಮಾಭಿಮಾನವನ್ನುಳಿಸಿತ್ತು. ನನ್ನ ಪತಿ ಮದ್ಯಪಾನಾಸಕ್ತನಾಗದುದೂ, ವೇಶ್ಯೆಯರ ಸಹವಾಸವನ್ನಪೇಕ್ಷಿಸದುದೂ ನನ್ನ ಮಹಿಮೆಯಿಂದಲೆ? ಪುರುಷರ ಚಂಚಲ ಮನವನ್ನು ತಡೆಯಲು ನಾನಾವ ಮಂತ್ರಶಕ್ತಿಯನ್ನರಿತಿದ್ದೆ? ಅದು ನನ್ನ ಒಳ್ಳೆಯ ಅದೃಷ್ಟವೇ ಹೊರತು ಬೇರೆಯಲ್ಲ. ನನ್ನ ಓರಗಿತ್ತಿಗೆ ಅದೃಷ್ಟ ಒಲಿಯಲಿಲ್ಲ. ಕತ್ತಲಾಗುವ ಮುಂಚೆಯೇ ಅವಳ ಜೀವನದ ಉತ್ಸವವಡಗಿ, ಶೂನ್ಯ ಮಂದಿರದಲ್ಲಿ, ಸಂಗೀತದ ಯಾವ ಹಿನ್ನೆಲೆಯೂ ಇಲ್ಲದೆ ಆಕೆಯ ಸೌಂದರ್ಯ ಬೆಳಗುತ್ತಿತ್ತು.

ನನ್ನ ಪತಿಯ ನವೀನ ಅಭಿಪ್ರಾಯಗಳು ಆತನ ಅತ್ತಿಗೆಗೆ ಹಾಸ್ಯಕರವಾಗಿ ತೋರುತ್ತಿದ್ದುವು. ಒಬ್ಬ ಚಿಕ್ಕ ಪತ್ನಿ ಮೇಲೆ ಪ್ರಸಿದ್ಧ ಮನೆತನದ ಗೌರವದ ಭಾರವನ್ನೆಲ್ಲಾ ಹೊರಿಸುವುದೆಂದರೇನು! ಆಕೆಯ ತಿರಸ್ಕಾರದ ಅನುಭವ ನನಗೆ ಅನೇಕ ಸಲ ಆಗಿತ್ತು: "ಗಂಡನ ಪ್ರೀತಿಯನ್ನಪಹರಿಸಿದ ಕಳ್ಳಿ", "ವಿಚಿತ್ರ ಅಲಂಕಾರಗಳಿಂದ ಮರುಳುಗೊಳಿಸುವ ಮಾಯಾವಿ." ನನ್ನ ಪತಿ ನವೀನ ಉಡುಪುಗಳಿಂದ ನನ್ನನ್ನು ಅಲಂಕರಿಸಿ ಆನಂದ ಪಡುತ್ತಿದ್ದ ರೀತಿ ಆಕೆಯ ಅಸೂಯೆಯನ್ನು ಕೆರಳಿಸಿತು. "ಅವಳಿಗಿರುವ ರೂಪಕ್ಕೆ, ಪ್ರದರ್ಶನದ ಬೊಂಬೆಯಾಗಿ ಮೆರೆಯುತ್ತಾಳೆ!"

ನನ್ನ ಪತಿ ಇದನ್ನೆಲ್ಲಾ ಅರಿತಿದ್ದರೂ ಆತನ ಮನಸ್ಸಿನ ಮಾರ್ದವಕ್ಕೆ ಮೇರೆಯೇ ಇರಲಿಲ್ಲ. ಆಕೆಯನ್ನು ಕ್ಷಮಿಸಬೇಕೆಂದು ನನ್ನಲ್ಲಿ ಬೇಡುತ್ತಿದ್ದರು.

ನಾನೊಂದು ಬಾರಿ, "ಹೆಂಗಸರ ಮನಸ್ಸು ಸಂಕುಚಿತ, ಕೊಂಕು," ಎಂದೆ. ಆತನು—"ಚೀನಾ ಹೆಂಗಸರ ಪಾದಗಳಂತೆ!

ಸಮಾಜದ ಹಿಡಿತದಲ್ಲಿ ಸಿಕ್ಕಿ ಡೊಂಕಾಗಿವೆ. ಅವರು ಅದೃಷ್ಟದ ಆಟದ ಗೊಂಬೆಗಳು. ಅವರಿಗೆ ಸ್ವಂತ ಹೊಣೆಗಾರಿಕೆಯೆಲ್ಲಿದೆ?"
—ಎಂದರು.

ನನ್ನ ಓರಗಿತ್ತಿ ಬೇಕಾದುದನ್ನೆಲ್ಲಾ ನನ್ನ ಪತಿಯಿಂದ ಪಡೆಯುತ್ತಿದ್ದರು. ಆಕೆಯ ಕೇಳಿಕೆಯ ಯುಕ್ತಾಯುಕ್ತತೆಯ ವಿಚಾರ ಆತನು ಆಲೋಚಿಸುತ್ತಲೇ ಇರಲಿಲ್ಲ. ಆಕೆಯ ಕೃತಘ್ನತೆ ನನ್ನನ್ನು ಕೆರಳಿಸುತ್ತಿತ್ತು. ಆಕೆಗೆ ಎದುರು ಮಾತ ನಾಡುವುದಿಲ್ಲವೆಂದು ನನ್ನ ಪತಿಗೆ ವಚನ ಕೊಟ್ಟಿದ್ದುದರಿಂದ ಒಳಗೇ ಕುದಿಯುತ್ತಿದ್ದೆ. ಸಾತ್ವಿಕತೆಯ ಮಿತಿ ಮೀರಿದರೆ ಮನುಷ್ಯರು ಹೇಡಿಗಳಾಗುವರೆಂದೆನ್ನಿಸುತ್ತಿತ್ತು. ನಿಜ ಹೇಳ ಬೇಕಾದರೆ ನನ್ನ ಪತಿ ಗಂಡೆದೆ ತೋರಿ ಸಾತ್ವಿಕತೆಯನ್ನು ಸ್ವಲ್ಪ ಮರೆತರೂ ಒಳ್ಳೆಯದೆನ್ನಿಸುತ್ತಿತ್ತು.

ನನ್ನ ಓರಗಿತ್ತಿ, ಹಿರಿಯ ರಾಣಿ, ಇನ್ನೂ ಯುವತಿ; ಸನ್ಯಾಸಿನಿಯೇನಲ್ಲ. ಹಾಸ್ಯದಲ್ಲಿ, ಮಾತಿನಲ್ಲಿ, ನಗುವಿನಲ್ಲಿ ಮುಂದಾಗಿಯೇ ತೋರುತ್ತಿದ್ದಳು. ಆಕೆಯ ಬಳಿಯಿದ್ದ ಸೇವಕಿ ಯರೂ ತಲೆ ಹರಟೆಯವರೇ. ಆಕೆಗೆ ಮಾರುತ್ತರ ಕೊಡಲು ಆ ಮನೆಯಲ್ಲಿ ಯಾರಿಗೂ ಅಧಿಕಾರವಿರಲಿಲ್ಲ. ನನ್ನ ಪತಿ ದೋಷರಹಿತರಾಗಿದ್ದುದೇ ಆಕೆಗೆ ಕಣ್ಣು ಬೇನೆ. ಆತನಿಗೆ ಮಾತ್ರ, ಆಕೆಯಲ್ಲಿ ಅನುಕಂಪವೇ ಹೊರತು ತಪ್ಪು ಬೆದಕುವ ಕ್ರೋಧ ವಿರಲಿಲ್ಲ.

೨

ನನಗೆ ಪರದೆ ತಪ್ಪಿಸಬೇಕೆಂದು ಆತನ ಆಕಾಂಕ್ಷೆ.
" ಹೊರಗಿನ ಲೋಕದಲ್ಲಿ ನನಗೇನು ಕೆಲಸ? " ಎಂದೆ.
" ಹೊರಗಿನ ಲೋಕಕ್ಕೆ ನಿನ್ನ ಅಗತ್ಯವಿರಬಹುದು."
" ಇಷ್ಟು ದಿನ ನಾನಿಲ್ಲದೆ ಲೋಕ ನಡೆಯಲಿಲ್ಲವೆ. ಈಗ

ಬಂದಿರುವ ಅಗತ್ಯವೇನು ? "

"ಲೋಕಕ್ಕಾಗಿ ನಾನು ಮರುಗುತ್ತಿಲ್ಲ. ನಾನು ಆಲೋಚಿಸುತ್ತಿರುವುದು ನನ್ನ ಸ್ವಂತ ವಿಚಾರ."

" ಅದೇನು ವಿಚಾರ ? "

ನನ್ನ ಪತಿ ಸುಮ್ಮನಿದ್ದರು. ಆತನ ಮುಖದಲ್ಲಿ ನಗೆ ಸುಳಿಯುತ್ತಿತ್ತು.

ಆತನ ರೀತಿಯನ್ನರಿತಿದ್ದ ನಾನು, " ನೀವು ಹೇಳದಿದ್ದರೆ ಬಿಡುವುದಿಲ್ಲ ; ಎಂದೆ."

" ಎಲ್ಲಾ ವಿಚಾರಗಳೂ ಮಾತುಗಳಿಗೆ ನಿಲುಕುತ್ತವೆಯೆ ?"

" ನಿಮ್ಮ ಒಗಟುಗಳು ಸಾಕು. ಹೇಳಿ."

" ಹೊರಗಿನ ಪ್ರಪಂಚದಲ್ಲಿ ನಾವಿಬ್ಬರೂ ಹೆಚ್ಚಾಗಿ ಒಂದಾಗಬೇಕು. ಆ ಒಂದು ಸಾಲ ಉಳಿದಿದೆ."

" ಆದರೆ ನಮ್ಮ ಪ್ರೀತಿ ಪೂರ್ಣವಾಗಿಲ್ಲವೆ ? "

" ಈ ಸಂಕುಚಿತ ವಾತಾವರಣದಲ್ಲಿ ನಿನಗೇನು ಸಿಕ್ಕಿದೆಯೋ, ಇನ್ನೇನು ಬೇಕೋ ಎಂಬ ಅರಿವೇ ನಿನಗಿಲ್ಲ."

" ನೀವು ಹೀಗೆ ಮಾತನಾಡಬೇಡಿ."

" ನೀನು ಹೊರಗಿನ ವಾಸ್ತವ ಪ್ರಪಂಚದಲ್ಲಿ ಅಡಿಯಿಡಬೇಕು. ಮನೆಗೆಲಸಗಳಲ್ಲಿ ದಿನದಂತೆ ದಿನ ದುಡಿಯುತ್ತಿರಲು ನೀನು ಹುಟ್ಟಿಲ್ಲ. ವಾಸ್ತವ ಪ್ರಪಂಚದಲ್ಲಿ ಒಬ್ಬರನ್ನೊಬ್ಬರು ಅರಿತುಕೊಂಡು ಪ್ರೀತಿಸಿದೆವಾದರೆ, ನಮ್ಮ ಪ್ರೀತಿ ಸತ್ಯವಾದುದು."

"ನಿಮ್ಮ ಅಭಿಪ್ರಾಯ ಹಾಗಿದ್ದರೆ ನಾನು ಹೇಳುವುದೇನಿದೆ? ನನಗೇನೋ ಯಾವ ಕೊರತೆಯೂ ಇಲ್ಲ."

" ಕೊರತೆ ನನ್ನದೇ ಆದರೂ ನಿವಾರಿಸಬಹುದಲ್ಲ."

ಇಂತಹ ಚರ್ಚೆಗಳು ನಡೆಯುತ್ತಲೇ ಇದ್ದುವು. ಒಂದು ದಿನ, " ಮೀನನ್ನು ತಿನ್ನಲಾಸೆಯುಳ್ಳವನಿಗೆ ಕತ್ತರಿಸಲು ವ್ಯಥೆಯಿಲ್ಲ. ಆದರೆ ಮೀನಿನ ಮೇಲೆ ಪ್ರೀತಿಯುಳ್ಳವನಿಗೆ ಅದು

ನೀರಿನಲ್ಲಿ ಆಡುವುದೇ ಆನಂದ. ಅದು ತನ್ನ ಕೈಗೆ ಸಿಕ್ಕದಿದ್ದರೂ ಸುಖವಾಗಿದೆಯೆಂಬುದೇ ಅವನಿಗೆ ತೃಪ್ತಿ. ಪೂರ್ಣ ಸಂಪಾದನೆ ಸಾಧ್ಯವಿಲ್ಲದಿದ್ದರೆ ಸಂತೋಷವಾಗಿ ಬಿಟ್ಟುಕೊಡುವುದೇ ಒಳ್ಳೆಯದು."

ನನ್ನ ಪತಿಯ ವಾದದ ರೀತಿ ನನಗೆ ರುಚಿಸದಿದ್ದರೂ ನಾನು ಪರದೆ ಬಿಡದಿದ್ದುದು ಅದಕ್ಕಾಗಿ ಅಲ್ಲ. ಆತನ ಅಜ್ಜಿ ಇನ್ನೂ ಜೀವಿಸಿದ್ದರು. ಆಕೆಗೆ ಇಷ್ಟವಿಲ್ಲದ ಅನೇಕ ವಸ್ತುಗಳನ್ನು ನನ್ನ ಪತಿ ಮನೆಯಲ್ಲಿ ತುಂಬಿಸಿದ್ದರೂ ಆಕೆ ಆಕ್ಷೇಪಿಸಿರಲಿಲ್ಲ. ಶ್ರೀಮಂತ ಮನೆತನದ ಸೊಸೆ ಪರದೆ ಬಿಟ್ಟು ಬಂದಿದ್ದರೂ ಆಕೆ ಆಕ್ಷೇಪಿಸುತ್ತಿರಲಿಲ್ಲ. ಸಿದ್ಧವಾಗಿಯೇ ಇದ್ದಳು. ಆದರೆ ಹಾಗೆ ಮಾಡುವುದು ಆಕೆಯ ಮನ ನೋಯಿಸುವಷ್ಟು ಮುಖ್ಯವಾದುದೆಂದು ನಾನೆಣಿಸಲಿಲ್ಲ. ನಮ್ಮನ್ನು ಅನೇಕರು ಪಂಜರದ ಪಕ್ಷಿಗಳೆಂದು ಕರೆದಿದ್ದಾರೆ. ಆದರೆ ನನ್ನ ಪಂಜರದಲ್ಲಿದ್ದಷ್ಟು ಸಂಪತ್ತು ಜಗತ್ತಿನಲ್ಲೇ ಹಿಡಿಸಲಾರದೆಂದು ಆಗ ನನ್ನ ಅಭಿಪ್ರಾಯವಿತ್ತು.

ಮುದುಕಿಗೆ ನನ್ನಲ್ಲಿ ತುಂಬಾ ಪ್ರೀತಿಯಿತ್ತು. ನನ್ನ ಶುಭಗ್ರಹಗಳ ಶಕ್ತಿಯಿಂದ ಗಂಡನ ಪ್ರೀತಿಯನ್ನು ಹಿಡಿತದಲ್ಲಿಟ್ಟುಕೊಂಡಿದ್ದೇನೆಂದು ಆಕೆ ಭಾವಿಸಿದ್ದಿರಬಹುದು. ಗಂಡಸಿನ ದಾರಿ ಸ್ವಾಭಾವಿಕವಾಗಿ ಅಧೋಗತಿಯ ಕಡೆಗಲ್ಲವೆ? ಮಿಕ್ಕವರೆಲ್ಲಾ ತಮ್ಮ ಸೌಂದರ್ಯದ ಶಕ್ತಿಯಿಂದ ಗಂಡಂದಿರ ನಾಶವನ್ನು ತಡೆಯಲು ಅಸಮರ್ಥರಾಗಿದ್ದರು. ಆ ಉರಿಯನ್ನು ಶಮನ ಮಾಡಿದ ಶಕ್ತಿ ನನ್ನದೆಂದೇ ಮುದುಕಿ ಭಾವಿಸಿದ್ದಳು. ಆದುದರಿಂದ ಆಕೆ ನನ್ನನ್ನು ಬಹುವಾಗಿ ಪ್ರೀತಿಸುತ್ತಿದ್ದಳು.

ನನ್ನ ಪತಿ ತರುತ್ತಿದ್ದ ಪಾಶ್ಚಾತ್ಯ ಉಡುಪುಗಳೂ ಒಡವೆಗಳೂ ಆಕೆಗೆ ಸೇರುತ್ತಿರಲಿಲ್ಲ. ಆದರೆ, "ಗಂಡಸರು ಹೇಗಾದರೂ ದುಡ್ಡು ಹಾಳುಮಾಡಬೇಕು. ಆಸ್ತಿಯನ್ನೆಲ್ಲಾ ತೀರ ನಾಶ

ಮಾಡದಿದ್ದರೆ ಸರಿ. ನಿಖಿಲ ಹೆಂಡತಿಯನ್ನಲಂಕರಿಸದಿದ್ದರೆ ಯಾರನ್ನಲಂಕರಿಸುತಿದ್ದನೋ!" ಎಂದು ಕೊಳ್ಳುವಳು. ಆದುದರಿಂದ ನನ್ನ ವಸ್ತ್ರಗಳನ್ನು ನೋಡಿದಾಗಲೆಲ್ಲಾ ನನ್ನ ಗಂಡನನ್ನು ಹಾಸ್ಯಮಾಡಿ ನಗುತ್ತಿದ್ದಳು.

ಬರಬರುತ್ತಾ ಆಕೆಗೇ ನವೀನ ಪದ್ಧತಿಗಳಲ್ಲಿ ವ್ಯಾಮೋಹ ಉಂಟಾಗುತ್ತ ಹೋಯಿತು. ಕಡೆಗೆ, ಇಂಗ್ಲಿಷ್ ಕಥೆಗಳನ್ನು ಕೇಳದಿದ್ದರೆ ಆಕೆಗೆ ನಿದ್ರೆಯೇ ಬರುತ್ತಿರಲಿಲ್ಲ.

ಆಕೆ ಸತ್ತಮೇಲೆ ನಾವಿಬ್ಬರೂ ಕಲ್ಕತ್ತೆಯಲ್ಲಿ ನಿಲ್ಲಬೇಕೆಂದು ನನ್ನ ಪತಿ ಹೇಳಿದರು. ಆದರೆ ನನಗಿಷ್ಟವಾಗಲಿಲ್ಲ. ಇದು ನಮ್ಮ ಮನೆ; ಎಷ್ಟೋ ಸುಖದುಃಖಗಳಲ್ಲಿ ಆಸರೆ ಕೊಟ್ಟ ಮನೆ. ಅದನ್ನು ಬಿಟ್ಟು ನಾನು ಪಟ್ಟಣ ಸೇರಿದರೆ ಶಾಪ ತಟ್ಟುವುದಿಲ್ಲವೆ? ಅಜ್ಜಿಯ ಬರಿದಾದ ಕುರ್ಚಿ ನನ್ನನ್ನು ತಡೆದು ನಿಲ್ಲಿಸಿತು. ಆಕೆ ಎಂಟನೆಯ ವರ್ಷದಲ್ಲಿ ಈ ಮನೆ ಸೇರಿ ಎಪ್ಪತ್ತೊಂಭತ್ತನೆಯ ವರ್ಷದಲ್ಲಿ ಪರಲೋಕ ಸೇರಿದ್ದಳು. ಆಕೆಯ ಜೀವನ ಸುಖಮಯವಾಗಿರಲಿಲ್ಲ. ಅನೇಕ ಕಷ್ಟಗಳಿಂದ ವಿಧಿ ಘಾತಿಸಿದ್ದರೂ ಆಕೆಯ ಧೈರ್ಯ ಉಡುಗಿರಲಿಲ್ಲ. ಈ ಮನೆ ಆಕೆಯ ಕಣ್ಣೀರಿನಿಂದ ಪವಿತ್ರವಾಗಿತ್ತು. ಅದರಿಂದ ದೂರವಾಗಿ, ಧೂಳಿನಿಂದಾವೃತವಾದ ಕಲ್ಕತ್ತೆಯಲ್ಲಿ ನನಗೇನು ಕೆಲಸ?

ನನ್ನ ಓರಗಿತ್ತಿಗೆ ಮನೆಯ ಆಡಳಿತದ ಸ್ವಾತಂತ್ರ್ಯಕೊಟ್ಟು ನಾವು ಕಲ್ಕತ್ತೆಯಲ್ಲಿ ನಮ್ಮ ಜೀವನವನ್ನು ವಿಸ್ತರಿಸಿಕೊಳ್ಳಬಹುದೆಂದು ನನ್ನ ಪತಿಯ ಅಭಿಪ್ರಾಯ. ಇಲ್ಲಿಯೇ ನನಗೂ ಕಷ್ಟ ತೋರಿದ್ದು. ಆಕೆ ನನ್ನನ್ನು ಹಿಂಸಿಸಿದ್ದಳು; ನನ್ನ ಪತಿಯ ಸುಖವನ್ನು ನೋಡಿ ಕರುಬಿದ್ದಳು; ಅದಕ್ಕೋಸ್ಕರ ಆಕೆಗೆ ಪುರಸ್ಕಾರವೆ? ನಾವು ಕಲ್ಕತ್ತೆಯಿಂದ ಹಿಂದಿರುಗಿದರೆ! ಮನೆಗೆ ಪುನಃ ಯಜಮಾನಿಯಾಗಲು ನನಗೆ ಸಾಧ್ಯವೆ?

"ಆ ಯಾಜಮಾನ್ಯದಿಂದ ನಿನಗಾಗ ಬೇಕಾದುದೇನು?

ಲೋಕದಲ್ಲಿ ಬೇರೆ ಅಪೇಕ್ಷಣೀಯ ವಸ್ತುಗಳಿಲ್ಲವೆ?"

—ನನ್ನ ಪತಿ ಕೇಳಿದರು.

ಗಂಡಸರಿಗೆ ಈ ವಿಚಾರಗಳು ಅರ್ಥವಾಗುವುದಿಲ್ಲ. ಹೊರಗಿನ ಪ್ರಪಂಚದ ಸಂಪರ್ಕವಿರುವ ಅವರಿಗೆ ಮನೆಯ ಬೆಲೆ ತಿಳಿಯುವುದಿಲ್ಲ. ಈ ವಿಚಾರದಲ್ಲಿ ಹೆಂಗಸರ ಅಭಿಪ್ರಾಯದಂತೆ ನಡೆಯುವುದೇ ಗಂಡಸರಿಗೆ ಹಿತಕರವೆಂದು ನನಗೆ ತೋರುತ್ತಿತ್ತು. ನಮ್ಮ ಹಕ್ಕುಗಳನ್ನು ಸಾಧಿಸದೆ ಹೊರಟು ಹೋದರೆ ಸೋಲನ್ನೊಪ್ಪಿಕೊಂಡಂತೆ ತೋರಿತು.

ಆದರೆ ನನ್ನ ಪತಿ ತಮ್ಮೊಡನೆ ಕಲ್ಕತ್ತೆಗೆ ಹೋಗುವಂತೆ ನನ್ನನ್ನು ಬಲವಂತ ಪಡಿಸಲಿಲ್ಲ. ಆ ಶಕ್ತಿಯಿದ್ದುದರಿಂದಲೇ ಆತನು ಅದನ್ನು ಪ್ರದರ್ಶಿಸಲಿಲ್ಲ.

೩

ಬೆಳಗಿನಿಂದ ಸಂಜೆಯವರೆಗಿನ ಅಂತರವನ್ನು ನಿಧಾನವಾಗಿ ತುಂಬ ಬೇಕಾದರೆ ಯುಗವೇ ಹಿಡಿಸೀತು! ಆದರೆ ಸೂರ್ಯ ಬೆಳಗುವುದೇ ತಡ ಕತ್ತಲೆ ಮಾಯವಾಗುತ್ತದೆ,—ಅನಂತವಾದ ಅಂತರವನ್ನು ಅತಿಕ್ರಮಿಸಲು ಕ್ಷಣಾರ್ಧ ಸಾಕು.

ಬಂಗಾಳದಲ್ಲಿ ಸ್ವಾತಂತ್ರ್ಯ ಚಳುವಳಿ ಆರಂಭವಾಯಿತು. ಅದು ಹೇಗೆ ಪ್ರಾರಂಭವಾಯಿತೆಂಬುದರ ಸ್ಪಷ್ಟ ಅರಿವು ನಮಗಿಲ್ಲ. ಭೂತ ವರ್ತಮಾನಗಳನ್ನು ಸೇರಿಸಿದ ಕುಣಿಕೆ ಕಾಣಲಿಲ್ಲ. ಅದರಿಂದಲೇ ಹೊಸಯುಗ ಒಂದು ಮಹಾ ಪೂರದಂತೆ ಭಯ ವಿವೇಕಗಳನ್ನೆಲ್ಲಾ ಕೊಚ್ಚಿಕೊಂಡು ಬಂತು. ಏನಾಗುತ್ತಿದೆ, ಏನಾಗಬಹುದೆಂದು ಆಲೋಚಿಸಲು ಕೂಡ ಹೊತ್ತಿರಲಿಲ್ಲ.

ನವಯುಗದ ಪ್ರಭಾವಕ್ಕೆ ಸಿಕ್ಕಿ ನನ್ನ ದೃಷ್ಟಿ, ಬುದ್ಧಿ, ಆಸೆ ಅಭಿಲಾಷೆಗಳೆಲ್ಲಾ ಉದ್ವಿಗ್ನವಾದುವು. ಇದುವರೆಗೂ ನನ್ನ ಸಮಸ್ತ ಜಗತ್ತಾದ ಮನೆಯಿಂದ ಹೊರಗೆ ಹೋಗದಿದ್ದರೂ

ಈಗ ನನ್ನ ದೃಷ್ಟಿ ದೂರಕ್ಕೆ ಪ್ರಸರಿಸಿತು. ದೂರದ ದಿಗಂತದಿಂದ ಕೇಳಬರುತ್ತಿದ್ದ–ಧ್ವನಿಯ ಅರ್ಥ ಅಸ್ಪಷ್ಟವಾದರೂ, ಅದರ ಕರೆ ನನ್ನ ಹೃದಯವನ್ನು ನೇರವಾಗಿ ಪ್ರವೇಶಿಸಿತು.

ನನ್ನ ಪತಿ ವಿದ್ಯಾರ್ಥಿಯಾಗಿದ್ದಾಗಲೂ ಗೃಹ ಕೈಗಾರಿಕೆ ಗಳನ್ನು ಹೆಚ್ಚಿಸಲು ಪ್ರಯತ್ನಿಸುತ್ತಿದ್ದರು. ನಮ್ಮ ಕಡೆ ಹೇರಳ ವಾಗಿ ಬೆಳೆಯುತ್ತಿದ್ದ ಖರ್ಜೂರದಿಂದ ಷರಬತ್ತು ತಯಾರಿಸಲು ಯಂತ್ರ ಸಲಕರಣೆಗಳನ್ನು ಮಾಡಲು ಪ್ರಯತ್ನಪಟ್ಟಿದ್ದರು. ನಮ್ಮದೇ ಒಂದು ಬ್ಯಾಂಕು ಸ್ಥಾಪಿಸುವ ಆಲೋಚನೆ ಮಾಡಿದ್ದರು. ನನಗೂ ಅರ್ಥಶಾಸ್ತ್ರ ಕಲಿಸುತ್ತಿದ್ದರು. ಜನರಿಗೆ ದುಂದು ಗಾರಿಕೆಯ ಅನಾಹುತಗಳನ್ನು ವಿವರಿಸಿ ಬ್ಯಾಂಕನ್ನು ಪ್ರಾರಂಭಿ ಸಿದರು. ಅಲ್ಲಿಯ ಹೆಚ್ಚು ಬಡ್ಡಿಗಾಸೆಪಟ್ಟು ಹಳ್ಳಿಗರೆಲ್ಲರೂ ಹೆಚ್ಚು ಹಣ ಹಾಕಿದುದರಿಂದ ಬಡ್ಡಿ ತೀರಿಸಲಾರದೆ ಬ್ಯಾಂಕು ಮುಳುಗಿ ಹೋಯಿತು.

ಜಮೀನ್ದಾರಿಯ ನೌಕರರಿಗೆಲ್ಲಾ ಗಾಬರಿಯಾಯಿತು. ಶತ್ರುಗಳು ಹಿಗ್ಗಿದರು. ಕುಟುಂಬದಲ್ಲೆಲ್ಲಾ ಶಾಂತಳಾಗಿದ್ದವಳು ಅಜ್ಜಿಯೊಬ್ಬಳೇ.

"ಅವನನ್ನೇಕೆ ಹಿಂಸಿಸುತ್ತೀರಿ? ಜಮೀನಿನ ವಿಚಾರ ಗಾಬರಿಯೇ? ಎಷ್ಟು ಸಲ ಈ ಜಮೀನು ದಿವಾಳಿಯಾಗುವ ಸ್ಥಿತಿಗೆ ಬಂದಿದೆ! ಗಂಡಸರು ಹೆಂಗಸರಂತಲ್ಲ. ದುಡ್ಡು ಖರ್ಚು ಮಾಡುವುದಕ್ಕೇ ಅವರು ಹುಟ್ಟುವುದು. ನಿನ್ನ ಗಂಡ ಹಣಮಾತ್ರ ಹಾಳುಮಾಡುತ್ತಾನೆಂದು ಸಂತೋಷಪಡು," ಎಂದು ನನ್ನನ್ನು ಗದರಿಸುತ್ತಿದ್ದಳು.

ನನ್ನ ಪತಿಯ ದಾನಧರ್ಮಗಳಿಗೆ ಮಿತಿಯೇ ಇರಲಿಲ್ಲ. ಹೊಸಮಗ್ಗ, ಹೊಸಅಕ್ಕಿಯಂತ್ರ ಯಾವುದನ್ನಾದರೂ ಕಂಡು ಹಿಡಿಯುವೆನೆಂದರೆ ಎಷ್ಟಾದರೂ ದುಡ್ಡು ಸುರಿಯುತ್ತಿದ್ದರು. ಆದರೆ ಸಂದೀಪಬಾಬು ಸ್ವದೇಶಿಯ ಹೆಸರಿನಲ್ಲಿ ಆತನಿಂದ ಹಣ

ಸುಲಿಯುತ್ತಿದ್ದ ರೀತಿ ನನ್ನ ಮೈ ಉರಿಸುತ್ತಿತ್ತು; ಆತ ಒಂದು ಪತ್ರಿಕೆ ಹೊರಡಿಸಲಿ, ಉಪನ್ಯಾಸಗಳಿಗಾಗಿ ಪ್ರವಾಸ ಹೊರಡಲಿ, ತನ್ನ ಆರೋಗ್ಯದ ನಿಮಿತ್ತ ಎಲ್ಲಾದರೂ ಹೋಗಲಿ,—ನನ್ನ ಪತಿ ಪ್ರಶ್ನಿಸದೆ ಹಣ ಕೊಡುತ್ತಿದ್ದರು. ಆತನ ಜೀವನಕ್ಕೆ ತಿಂಗಳು ತಿಂಗಳೂ ಬೇರೆ ಹಣ ಕೊಡುತ್ತಿದ್ದರು. ಆದರೆ ಇಬ್ಬರ ಅಭಿಪ್ರಾಯಗಳೂ ಎಂದೂ ಸರಿ ಹೊಂದುತ್ತಿರಲಿಲ್ಲ.

ಸ್ವದೇಶಿಯ ಹುಚ್ಚು ಹತ್ತುತ್ತಲೇ ನಾನು ನನ್ನ ಪತಿಯೊಡನೆ, "ನನ್ನ ವಿದೇಶಿ ಬಟ್ಟೆಗಳನ್ನೆಲ್ಲಾ ಸುಡಬೇಕು," ಎಂದೆ.

"ಸುಡುವುದೇಕೆ? ಹಾಕಿಕೊಳ್ಳದಿದ್ದರೆ ಸರಿ."

"ಈ ಜನ್ಮದಲ್ಲಂತೂ ಹಾಕುವುದಿಲ್ಲ."

"ಬೇಡ, ಆದರೆ ಕಾಮನಹಬ್ಬದ ಪ್ರಮೇಯವೇನು?"

"ನನ್ನ ಇಚ್ಛೆ ನಿಮಗಿಷ್ಟವಿಲ್ಲವೇನು?"

"ಹಾಗಲ್ಲ, ಏನನ್ನಾದರೂ ನಿರ್ಮಿಸಲು ಪ್ರಯತ್ನಿಸಬೇಕು. ನಾಶಮಾಡುವುದಕ್ಕೆ ಶಕ್ತಿಯನ್ನು ವ್ಯರ್ಥವಾಗಿ ಕಳೆಯಬಾರದು."

"ಈ ಉತ್ಸಾಹವೇ ನಿರ್ಮಿಸುವ ಶಕ್ತಿಯನ್ನು ಕೊಡುವುದು."

"ಉರಿಸದೆ ಮನೆಯಲ್ಲಿ ಬೆಳಕನ್ನುಂಟುಮಾಡಲಾಗುವುದಿಲ್ಲವೆ?"

ಮಿಸ್. ಗಿಲ್ಬಿ ಬಂದಾಗ ಮನೆಯಲ್ಲಿ ಗಲಭೆಯಾಗಿತ್ತು. ಬರಬರುತ್ತಾ ಎಲ್ಲರಿಗೂ ಅಭ್ಯಾಸವಾಗಿ ಸುಮ್ಮನಾಗಿದ್ದರು. ನಾನೂ ಆಕೆ ಪರದೇಶೀಯಳೆಂದು ಆಕ್ಷೇಪಿಸಿರಲಿಲ್ಲ. ಈಗ, "ಆಕೆಯನ್ನು ಕಳುಹಿಸಿಬಿಡಬೇಕು," ಎಂದು ನನ್ನ ಪತಿಗೆ ಹೇಳಿದೆ. ಆತ ಮಾತನಾಡಲಿಲ್ಲ.

ನಾನು ರೇಗಿ ಕೂಗಾಡಿದಾಗ ವ್ಯಸನದಿಂದ ಹೊರಗೆ ಹೋದರು. ರಾತ್ರಿಯ ವೇಳೆಗೆ ನನ್ನ ಕೋಪವೂ ಶಾಂತವಾಗಿತ್ತು.

ನನ್ನ ಪತಿ "ಈ ಕೃತ್ರಿಮ ವಾತಾವರಣದ ಮಬ್ಬಿಗೆ ಸಿಕ್ಕಿ ಮಿಸ್ ಗಿಲ್ಬಿ ಹೊರಗಿನವಳೆಂದು ನಾನು ಭಾವಿಸಲಾರೆ. ಇಷ್ಟು ದಿನದ ಸಹವಾಸದಿಂದಲೂ ಆಕೆ ವಿದೇಶೀಯಳೆಂಬುದನ್ನು ಮರೆಯಲಾರೆಯಾ? ಆಕೆಗೆ ನಿನ್ನಲ್ಲಿ ಎಷ್ಟು ಪ್ರೀತಿಯಿದೆ," ಎಂದರು. ನಾನೂ ಸ್ವಲ್ಪ ನಾಚಿ, "ಇರಲಿ. ಆಕೆಯನ್ನು ಕಳುಹಿಸಿ ಬಿಡಬೇಕೆಂದು ನನಗೂ ಆತುರವಿಲ್ಲ" ಎಂದೆ.

ಆಕೆ ನಿಂತಳು.

ಒಂದು ದಿನ ಆಕೆ ದೇವಸ್ಥಾನಕ್ಕೆ ಹೋಗುತ್ತಿದ್ದಾಗ ನಮ್ಮ ಪರಿವಾರದ ಒಬ್ಬ ಹುಡುಗ ಆಕೆಯನ್ನು ಅವಮಾನ ಪಡಿಸಿದನೆಂದು ತಿಳಿಯಿತು. ನನ್ನ ಪತಿ ಅವನನ್ನು ಮನೆಬಿಟ್ಟು ಓಡಿಸಿದಾಗ ಮನೆಯವರಿಗೆಲ್ಲಾ, ನನಗೂ, ತುಂಬ ಅಸಮಾಧಾನವಾಯಿತು. ಮಿಸ್ ಗಿಲ್ಬಿ ಹೊರಟು ಹೋದರು. ನನ್ನಿಂದ ಬೀಳ್ಕೊಡುವಾಗ ಆಕೆ ಕಣ್ಣೀರು ಸುರಿಸಿದರೂ ನನ್ನ ಮನಸ್ಸು ಕರಗಲಿಲ್ಲ. ಸ್ವದೇಶಿಗೋಸ್ಕರ ಊಟ ತಿಂಡಿಗಳ ಕಡೆ ಲಕ್ಷ್ಯ ಕೊಡದಿದ್ದ ಹುಡುಗನನ್ನು ದೂಷಿಸಿದಳಲ್ಲಾ ಎಂದು ಕ್ರೋಧವೇ ಇತ್ತು.

ನನ್ನ ಪತಿ ಮಿಸ್. ಗಿಲ್ಬಿಯೊಡನೆ ರೈಲ್ವೆ ನಿಲ್ದಾಣಕ್ಕೆ ಹೋದಾಗ, ಕೋಪ ಬಂತು. ಈ ವಿಚಾರವನ್ನೆತ್ತಿ ಪತ್ರಿಕೆಗಳು ಆತನನ್ನು ದೂಷಿಸಿದಾಗ "ಸರಿಯಾಯಿತು", ಎಂದುಕೊಂಡೆ.

ನನ್ನ ಪತಿಯ ಕಾರ್ಯಗಳಿಂದ ಚಿಂತೆಗೊಳಗಾಗುತ್ತಿದ್ದರೂ ಇದುವರೆಗೆ ಅವಮಾನಿತಳಾಗಿರಲಿಲ್ಲ. ಮಿಸ್. ಗಿಲ್ಬಿಯನ್ನು ನರೇಂದ್ರನು ಏನು ಅವಮಾನ ಪಡಿಸಿದ್ದನೆಂಬುದು ನನಗೆ ತಿಳಿಯದಿದ್ದರೂ, ಇಂತಹ ಕಾಲದಲ್ಲಿ ಅವನನ್ನು ಶಿಕ್ಷಿಸಿದುದು ಸರಿಯಲ್ಲ. ಆಂಗ್ಲ ಸ್ತ್ರೀಯನ್ನೆದುರಿಸಿದ ಅವನ ಉತ್ಸಾಹವನ್ನು ನಂದಿಸಬಾರದಾಗಿತ್ತು. ಇಷ್ಟು ಸುಲಭ ವಿಚಾರ ಅರ್ಥವಾಗದ ನನ್ನ ಪತಿ ಹೇಡಿಯೆಂದೇ ತಿಳಿದೆ.

ಹೀಗೆಂದು ಅವರು ಸ್ವದೇಶಿಯನ್ನು ತಿರಸ್ಕರಿಸುತ್ತಿದ್ದ ರೆಂದಲ್ಲ. "ವಂದೇ ಮಾತರಂ" ನ ಪೂರ್ಣ ತತ್ತ್ವವನ್ನು ಆತ ಗ್ರಹಿಸಿರಲಿಲ್ಲ. 'ದೇಶ ಸೇವೆಗೆ ನಾನು ಸಿದ್ಧನಿದ್ದೇನೆ. ಆದರೆ ಸತ್ಯ, ನ್ಯಾಯಗಳ ಸೇವೆ ದೇಶ ಸೇವೆಗಿಂತ ಹೆಚ್ಚಾದುದು. ದೇಶ ವನ್ನು ದೇವರ ಸ್ಥಾನಕ್ಕೆ ಏರಿಸಿದರೆ ಶಾಪ ತಟ್ಟೀತು', ಎನ್ನು ತ್ತಿದ್ದರು.

## ೨ ನೆಯ ಅಧ್ಯಾಯ
# ವಿಮಲೆಯ ಕಥೆ

ಳ

ಈ ಸಮಯದಲ್ಲಿ ಸಂದೀಪಬಾಬುವೂ ಆತನ ಶಿಷ್ಯರೂ ಸ್ವದೇಶಿಯನ್ನು ಉಪದೇಶಿಸಲು ನಮ್ಮ ಪ್ರಾಂತ್ಯಕ್ಕೆ ಬಂದರು. ದೇವಸ್ಥಾನದಲ್ಲಿ ಭಾರಿ ಸಭೆ ಸೇರಿತ್ತು. ನಾವೆಲ್ಲಾ ಹೆಂಗಸರು ಪರದೆಯಹಿಂದೆ ಒಂದುಕಡೆ ಕುಳಿತಿದ್ದೆವು. "ವಂದೇ ಮಾತರಂ" ಎಂಬ ಕೂಗು ಸಮೀಪಿಸಲು ನನ್ನ ಮೈಯಲ್ಲಿ ರೋಮಾಂಚ ಉಂಟಾಯಿತು. ಕಾವಿಬಟ್ಟೆ ಧರಿಸಿದ ಕೆಲವು ಯುವಕರು ಬರಿ ಕಾಲಿನಲ್ಲಿ ಪ್ರವಾಹದಂತೆ ನುಗ್ಗಿ ಬಂದರು. ಹತ್ತುಹನ್ನೆರಡು ಜನ ಯುವಕರು ಸಂದೀಪಬಾಬುವನ್ನು ಗುಂಪಿನ ನಡುವೆ ಕುರ್ಚಿಯ ಮೇಲೆ ಹೊತ್ತುತಂದರು.

" ವಂದೇ ಮಾತರಂ ! ವಂದೇ ಮಾತರಂ ! ವಂದೇ ಮಾತರಂ " ನಿನಾದವು ಆಗಸವನ್ನು ಸೀಳಿತು.

ಸಂದೀಪ ಬಾಬುವಿನ ಚಿತ್ರವನ್ನು ನಾನು ನೋಡಿದ್ದೆ. ಆತನ ಮುಖ ಸುಂದರವಾಗಿತ್ತು. ಆದರೆ ಏನೋ ದೋಷ ಇದ್ದಂತೆ ನನಗೆ ತೋರುತ್ತಿತ್ತು. ಆತನ ಕಣ್ಣುಗಳಲ್ಲಿ ಸತ್ಯದ ಕಾಂತಿ ಇರಲಿಲ್ಲ. ಆದ್ದರಿಂದಲೇ ನನ್ನ ಪತಿ ಆತನಿಗೆ ಸಹಾಯ ಮಾಡುವುದು ನನಗಿಷ್ಟವಾಗಿರಲಿಲ್ಲ. ಹಣ ಹೋಯಿತೆಂಬ ಚಿಂತೆಯಿರಲಿಲ್ಲ. ಸ್ನೇಹದ ಹೆಸರಿನಲ್ಲಿ ಆತನು ನನ್ನ ಪತಿಗೆ ಮೋಸ ಮಾಡುತ್ತಿದ್ದನೆಂಬ ನೋವಿತ್ತು. ಆತನಲ್ಲಿ ಸನ್ಯಾಸಿಯ ತ್ಯಾಗದ ಲಕ್ಷಣಗಳು ಕಾಣಬರಲಿಲ್ಲ. ಇಂತಹ ಎಷ್ಟೋ ಆಲೋಚನೆಗಳು ನನ್ನ ತಲೆಯಲ್ಲಿ ಸುಳಿದು ಹೋದುವು.

ಆದರೆ ಆ ದಿನ ಆತನು ಮಾತನಾಡಲಾರಂಭಿಸಿದಾಗ, ಜನರು ಉಸಿರಾಡದೆ ಕೇಳುತ್ತಿದ್ದಾಗ, ಆತನ ಮುಖವೇ ಬದಲಾ

ಯಿಸಿದಂತೆ ತೋರಿತು. ಹಠಾತ್ತಾಗಿ ಆತನ ಮುಖದ ಮೇಲೆ ಸೂರ್ಯಕಿರಣವೊಂದು ಮಿಂಚಿದಾಗ ಆತನು ದೇವದೂತನೆಂದೇ ತೋರಿತು.

ಮೊದಲಿನಿಂದ ಕೊನೆಯವರೆಗೂ ಜನ ಕರತಾಡನಮಾಡಿದರು. ಆತನ ಆತ್ಮವಿಶ್ವಾಸಕ್ಕೆ ಮೇರೆಯೇ ಇದ್ದಂತಿರಲಿಲ್ಲ. ಪರದೆ ಸರಿದುದೂ ತಿಳಿಯದೆ ನಾನೂ ನಟ್ಟ ದೃಷ್ಟಿಯಿಂದ ಕೇಳುತ್ತಿದ್ದೆ. ಅಲ್ಲಿ ಯಾರಿಗೂ ಮೈಮೇಲೆ ಪರಿವೆಯಿದ್ದಂತಿರಲಿಲ್ಲ. ಒಂದೇ ಒಂದು ಸಲ ಆತನ ದೃಷ್ಟಿ ನನ್ನ ಮುಖದ ಮೇಲೆ ಬಿದ್ದಿತು. ನನಗೆ ಜ್ಞಾನವೇ ಇರಲಿಲ್ಲ. ನಾನು ಶ್ರೀಮಂತ ಮನೆತನದ ಹೆಂಗಸಾಗಿರಲಿಲ್ಲ. ಬಂಗಾಳದ ಸ್ತ್ರೀ ಪ್ರತಿನಿಧಿಯಾಗಿದ್ದೆ. ಆತ ಬಂಗಾಳದ ನಾಯಕ. ಸೂರ್ಯ ಆತನ ಮೇಲೆ ಕಿರಣ ಪ್ರಸರಿಸಿದಂತೆ ಸ್ತ್ರೀಯ ಮಂಗಳಾಕಾಂಕ್ಷೆಯೂ ಆತನನ್ನಾಶೀರ್ವದಿಸಬೇಕು.

ನನ್ನನ್ನು ನೋಡಿ ಆತನ ಸ್ಫೂರ್ತಿ ಹೆಚ್ಚಿದಂತೆ ತೋರಿತು. ಇಂದ್ರನ ರಥದ ಹಿಂದೆ ಗುಡುಗು ಮಿಂಚುಗಳಿದ್ದೇ ಇವೆ. ಆತನ ವಾಕ್ಶಕ್ತಿ ನನ್ನ ಕಣ್ಣುಗಳಿಂದ ಇಮ್ಮಡಿ ಸ್ಫೂರ್ತಿ ತಳೆದಂತೆ ತೋರಿತು. ಸ್ತ್ರೀ ಗೃಹದೇವತೆ ಮಾತ್ರವಲ್ಲ; ಜೀವಾಗ್ನಿ ಕೂಡ.

ಹೆಮ್ಮೆಯಿಂದ, ಸಂತೋಷದಿಂದ, ಮನೆಗೆ ಹಿಂದಿರುಗಿದೆ. ನನ್ನ ಜೀವನದಲ್ಲಿ ಬಿರುಗಾಳಿ ಎದ್ದು ನಡುಗಿಸಿತ್ತು. ಗ್ರೀಸ್ ತರುಣಿಯರಂತೆ, ನನ್ನ ಕೂದಲನ್ನು ಕತ್ತರಿಸಿ ನಾಯಕನ ಬಿಲ್ಲ ಹೆದೆಯಾಗಿಸಲು ಸಿದ್ಧಳಾಗಿದ್ದೆ. ನನ್ನ ಮನಸ್ಸಿನೊಳಗಿನ ತುಮುಲ ಒಡವೆಗಳಿಗೂ ತಾಗಿದ್ದರೆ ಎಲ್ಲವೂ ಆ ದಿನ ಒಡೆದು ಜನರ ನಡುವೆ ತಾರಾಗಣದಂತೆ ಉದುರುತ್ತಿದ್ದುವು. ಏನಾದರೂ ಬಲಿದಾನ ಮಾಡದೆ ನನ್ನ ಮನಸ್ಸಿನ ಅಶಾಂತಿ ತಗ್ಗದೆಂದು ತೋರಿತು.

ನನ್ನ ಪತಿ ಮನೆಗೆ ಬಂದಾಗ, ಅಪಸ್ವರ ನುಡಿದು ನನ್ನ

ಹೃದಯದ ಜಯ ಧ್ವನಿಯನ್ನು ಸತ್ಯದ ಹೆಸರಿನಲ್ಲಿ ಅಲ್ಲಗಳೆಯುವ ರೆಂದು ಹೆದರಿದೆ. ಹಾಗಾಗಿದ್ದರೆ ಆತನನ್ನು ಅವಮಾನ ಪಡಿಸಲು ಕೂಡ ಸಿದ್ಧಳಾಗಿದ್ದೆ. ಆದರೆ ಆತನು ಏನೂ ಮಾತನಾಡಲಿಲ್ಲ. ....ಅದೂ ನನಗೆ ರುಚಿಸಲಿಲ್ಲ.

ಆತನು, "ಸಂದೀಪನಿಂದ ಜ್ಞಾನೋದಯವಾಯಿತು." ಎನ್ನ ಬೇಕಾಗಿತ್ತು.

ಆತನು ಬೇಕೆಂದೇ ಉತ್ಸಾಹವನ್ನಡಗಿಸಿ ಸುಮ್ಮನಿದ್ದರೆಂದು ಕೊಂಡೆ. ಸಂದೀಪಬಾಬು ಎಷ್ಟು ದಿನ ನಮ್ಮಲ್ಲಿ ನಿಲ್ಲುವರೆಂದು ಕೇಳಿದೆ.

"ಬೆಳಗ್ಗೆ ರಂಗಪುರಕ್ಕೆ ಹೋಗುತ್ತಾನೆ."

"ನಾಳೆಯೇ ಹೋಗಬೇಕೆ ?"

"ಹೌದು. ಅಲ್ಲಿ ಒಂದು ಭಾಷಣದ ಕಾರ್ಯಕ್ರಮವಿದೆ. ನಾನು ಸ್ವಲ್ಪ ಸುಮ್ಮನಿದ್ದು, "ಹೇಗಾದರೂ ಒಂದು ದಿನ ನಿಲ್ಲ ಲಾಗುವುದಿಲ್ಲವೆ ?"

"ಆಗಲಾರದು. ಏಕೆ ?"

"ಆತನನ್ನು ಊಟಕ್ಕೆ ಕರೆಯ ಬೇಕೆಂದಿದ್ದೇನೆ."

ನನ್ನ ಪತಿಗೆ ಆಶ್ಚರ್ಯವಾಯಿತು. ಆತನು ಸ್ನೇಹಿತರನ್ನು ಊಟಕ್ಕೆ ಕರೆದಾಗ ಅನೇಕ ಸಲ ನಾನು ಅಲ್ಲಿಗೆ ಬರಬೇಕೆಂದು ಕೇಳಿದ್ದರು. ನಾನೇ ಒಪ್ಪಿರಲಿಲ್ಲ. ನನಗೇ ಅರ್ಥವಾಗದ ದೃಷ್ಟಿ ಯೊಂದನ್ನು ನನ್ನ ಕಡೆ ಬೀರಿದರು.

ನನಗೇ ನಾಚಿಕೆಯಾಗಿ, "ಬೇಡ, ಬೇಡ", ಎಂದೆ.

"ಅದೇಕೆ ? ನಾನೇ ಹೇಳಿ ಸಾಧ್ಯವಾದರೆ ನಿಲ್ಲಿಸುತ್ತೇನೆ."

ಸಂದೀಪಬಾಬು ನಿಂತರು.

ಸತ್ಯ ಹೇಳುತ್ತೇನೆ. ಆ ದಿನ, ವಿಧಾತ ನನಗೆ ಅನುಪಮ ಸೌಂದರ್ಯ ಕೊಡಲಿಲ್ಲವೆಂದು ಮರುಗಿದೆ. ಆ ದಿನ ಸ್ತ್ರೀ ದೇವತೆ ಯಾಗಿ ಕಾಣಬೇಕಾಗಿತ್ತು. ಬಾಹ್ಯ ಸೌಂದರ್ಯವಿಲ್ಲದೆ ಪುರುಷರು

ದೈವತ್ವವನ್ನು ಗುರುತಿಸಲಾರರು. ಸಂದೀಪಬಾಬು ನನ್ನಲ್ಲಿ ದೇಶದ ಶಕ್ತಿ ಸ್ವರೂಪಿಣಿಯನ್ನು ಕಾಣುವರೆ? ಇಲ್ಲ, ಸಾಧಾರಣ ಹೆಂಗಸೆಂದು ತಿಳಿಯುವರೋ!

ಆ ದಿನ ಕೂದಲನ್ನು ಸೊಗಸಾಗಿ ಬಾಚಿ ಕಟ್ಟಿದೆ. ಉಟ್ಟಿದ್ದ ಬಿಳೀ ಸೀರೆಗೆ ಸರಿಗೆಯ ಅಂಚಿತ್ತು. ಆಡಂಬರ ರಹಿತ ವಾಗಿ ಅಲಂಕರಿಸಿಕೊಂಡಿದ್ದೆನೆಂದೇ ಭಾವಿಸಿದ್ದೆ. ಆದರೆ ನನ್ನ ಓರಗಿತ್ತಿ ನನ್ನನ್ನು ನೋಡಿ ಅರ್ಥಪೂರ್ಣವಾಗಿ ನಕ್ಕರು. ಏಕೆಂದು ಕೇಳಿದರೆ, "ನಿನ್ನ ಅಲಂಕಾರ ಮೆಚ್ಚುತ್ತಿದ್ದೇನೆ" ಎಂದರು. "ಅದರಲ್ಲಿ ನಗುವುದಕ್ಕೇನಿದೆ?"—ಕೋಪದಿಂದ ಕೇಳಿದೆ. "ಬಹಳ ಚೆನ್ನಾಗಿದೆ! ಪರಂಗಿಯವರಂತೆ ದೊಡ್ಡ ಕತ್ತಿನ ಕುಪ್ಪಸ ಹಾಕಿದ್ದರೆ ಇನ್ನೂ ಚೆನ್ನಾಗಿರುತ್ತಿದ್ದೆ."—ಆಕೆ ದೇಹಾದ್ಯಂತ ನಗುತ್ತಿದ್ದಂತೆ ಭಾಸವಾಯಿತು.

ಬಟ್ಟೆಯನ್ನು, ಸಾಧಾರಣ ಉಡುಪಿಗೆ ಬದಲಾಯಿ ಸೋಣವೇ ಎಂದು ಆಲೋಚಿಸಿದೆ. ಏಕೆ ಹಾಗೆ ಮಾಡಲಿಲ್ಲವೋ ಕಾಣೆ. ಸ್ತ್ರೀ ಸಮಾಜದ ಭೂಷಣ. ಸಂದೀಪ ಬಾಬುವಿನೆದುರು ನಾನು ಸರಿಯಾದ ಅಲಂಕಾರವಿಲ್ಲದೆ ಕಾಣಿಸಿಕೊಂಡರೆ, ನನ್ನ ಪತಿಗೇ ಅಸಮಾಧಾನವಾದೀತೆಂದು ಸಮಾಧಾನ ಮಾಡಿಕೊಂಡೆ.

ಅವರು ಊಟಕ್ಕೆ ಕುಳಿತಮೇಲೆ ಹೋದರೆ, ಬಡಿಸುವ ಗಲಾಟೆಯಲ್ಲಿ ನಾಚಿಕೆ ಮರೆಯಾಗಬಹುದೆಂದು ಕೊಂಡೆ. ಅಡಿಗೆ ನಿಧಾನವಾದುದರಿಂದ ನನ್ನ ಪತಿ 'ಪರಿಚಯ'ಕ್ಕಾಗಿ ಹೇಳಿ ಕಳುಹಿಸಿದರು.

ಸಂದೀಪ ಬಾಬುವಿನೆದುರಿಗೆ ಹೋಗಲು ನನಗೆ ತುಂಬಾ ನಾಚಿಕೆಯಾಯಿತು. ಧೈರ್ಯಮಾಡಿ, "ಅಡಿಗೆ ನಿಧಾನ ವಾಯಿತು. ಕ್ಷಮಿಸಿ," ಎಂದೆ.

ಆತ ಧೈರ್ಯವಾಗಿ ನನ್ನ ಪಕ್ಕದಲ್ಲೇ ಕುಳಿತು, "ಊಟ ಪ್ರತಿದಿನವೂ ಇದ್ದೇ ಇದೆ. ಆದರೆ ಅನ್ನಪೂರ್ಣೆ ತೆರೆಯ ಮರೆ

ಯಲ್ಲೇ ಇರುತ್ತಾಳೆ. ದೇವಿಯೇ ಪ್ರತ್ಯಕ್ಷವಾಗಿರುವಾಗ ಊಟ ತಡವಾದರೇನು ? " ಎಂದನು.

ಸಭೆಯಲ್ಲಿ ಮಾತನಾಡಿದಷ್ಟೇ ದರ್ಪದಿಂದ ಇಲ್ಲಿಯೂ ಮಾತನಾಡುತ್ತಿದ್ದನು. ಅನುಮಾನವೇ ಇಲ್ಲದೆ ಸ್ನೇಹದಿಂದ ಮಾತನಾಡಿಸುತ್ತಿದ್ದುದರಿಂದ ನಾಚಿಕೊಳ್ಳುವುದು ಅಸಂಗತವಾಗಿ ತೋರುತ್ತಿತ್ತು.

ನನ್ನನ್ನು ಹಳೆಯ ಕಾಲದ ಮಂಕು ಮುದ್ದೆಯೆಂದು ಆತ ಭಾವಿಸಬಹುದೆಂದು ಹೆದರಿದೆ. ಆದರೆ ಯಾವ ಮಾತುಗಳೂ ನನ್ನ ಬಾಯಿಂದ ಬರಲಿಲ್ಲ.

ಊಟವಾದ ಮೇಲೆ ನಾನು ಒಳಗೆ ಹೋಗಲು ಪ್ರಯತ್ನಿಸಿದೆ. ಸಂದೀಪ ಬಾಬು ತಡೆದು, "ನನ್ನನ್ನು ಹೊಟ್ಟೆ ಬಾಕನೆಂದು ಭಾವಿಸಬೇಡಿ. ಈ ದಿನ ನಾನು ನಿಂತದ್ದು ನಿಮ್ಮ ಆಹ್ವಾನ ದಿಂದಲೇ ಹೊರತು ಊಟಕ್ಕಾಗಿ ಅಲ್ಲ. ಈಗ ನೀವು ಒಳಕ್ಕೆ ಓಡುವುದು ನ್ಯಾಯವಲ್ಲ, " ಎಂದನು.

ಸರಳವಾಗಿ ಈ ಮಾತನ್ನು ಆತ ಹೇಳದಿದ್ದರೆ ಅಸಂಗತ ವಾಗಿ ತೋರುತ್ತಿತ್ತು. ನನ್ನ ಪತಿಗೆ ಅಷ್ಟು ಪ್ರಿಯ ಸ್ನೇಹಿತ ನಾಗಿದ್ದುದರಿಂದ ನಾನು ಆತನಿಗೆ ತಂಗಿಯೇ ಆದೆ.

ನನ್ನ ಪತಿ, " ಊಟಮಾಡಿ, ಇಲ್ಲಿಗೇ ಬಾ," ಎಂದರು.

ಸಂದೀಪ ಬಾಬು, " ಬರುತ್ತೇನೆಂದು ಮಾತು ಕೊಟ್ಟು ಹೋಗಿ," ಎಂದರು.

ನಾನು ನಸು ನಕ್ಕು, " ಬರುತ್ತೇನೆ ", ಎಂದೆ.

ಸಂದೀಪ ಬಾಬು, " ನನಗೆ ನಿಮ್ಮಲ್ಲಿ ನಂಬಿಕೆಯಿಲ್ಲ. ನಿಖಿಲನಿಗೆ ಮದುವೆಯಾಗಿ ಒಂಭತ್ತು ವರ್ಷವಾದರೂ ನೀವು ತಪ್ಪಿಸಿಕೊಂಡೇ ತಿರುಗುತ್ತಿದ್ದೀರಿ. ಇನ್ನು ಒಂಭತ್ತು ವರ್ಷ ಹೀಗೆಯೇ ಮಾಡಿದರೆ ನಮಗೆ ಪರಸ್ಪರ ಭೇಟಿಯಾಗುವುದೇ ಇಲ್ಲ."

ನಾನು ಆತನಂತೆಯೇ, " ಹಾಗಾದರೆ ಮಾತ್ರ ಏಕೆ ಭೇಟಿ ಯಾಗಬಾರದು ? " ಎಂದೆ.

" ಹೆಚ್ಚು ಆಯುಸ್ಸು ಇಲ್ಲವೆಂದು ನನ್ನ ಜಾತಕ ಹೇಳುತ್ತದೆ. ನನ್ನ ಪಿತೃಗಳು ಯಾರೂ ಮೂವತ್ತು ವರ್ಷಗಳಿಗಿಂತ ಹೆಚ್ಚಾಗಿ ಬದುಕಲಿಲ್ಲ. ನನಗೆ ಆಗಲೇ ಇಪ್ಪತ್ತೇಳು ವರ್ಷ.

ಇದರಿಂದ ನನ್ನ ಮನಸ್ಸು ನೋಯುವುದೆಂದು ಆತನಿಗೂ ತಿಳಿದಿತ್ತು. ಅನುತಾಪದಿಂದ ನಾನು " ದೇಶದ ಆಶೀರ್ವಾದ ನಿಮ್ಮನ್ನು ಗಂಡಾಂತರದಿಂದ ಪಾರು ಮಾಡುತ್ತದೆ ", ಎಂದೆ.

" ದೇಶದ ಆಶೀರ್ವಾದ ದೇವಿಯ ಮುಖದಿಂದ ಹೊರ ಬೀಳಲಿ, ಈಗಿನಿಂದಲೇ ನನ್ನ ರಕ್ಷೆ ಸಿದ್ಧಿಯಾಗಲೆಂದೇ ನೀವು ಪುನಃ ಬರಬೇಕೆಂದು ನಾನು ಕೇಳಿದುದು."

ಬೇರೆಯವನ ಬಾಯಿಂದ ಕೇಳಲಾಗದಿದ್ದ ಮಾತುಗಳನ್ನು ಸಂದೀಪ ಬಾಬು ಹೇಳಿದಾಗ, ತಪ್ಪಾಗಿ ತೋರಲಿಲ್ಲ.

" ಆದರೆ ನೀವು ಬರುವವರೆಗೂ ನಿಖಿಲನನ್ನು ಒತ್ತೆ ಇಟ್ಟುಕೊಂಡಿರುತ್ತೇನೆ " ಎಂದು ನಕ್ಕನು.

ನಾನು ಒಳಗೆ ಹೋಗುತ್ತಿರಲು, " ಸ್ವಲ್ಪ ತೊಂದರೆ ಕೂಡ ಬೇಕಾಗಿದೆಯಲ್ಲಾ," ಎಂದನು.

ನಾನು ಗಾಬರಿಯಿಂದ ತಿರುಗಲು, " ಭಯಪಡಬೇಡಿ. ಒಂದು ಲೋಟ ನೀರು ಬೇಕು, ಅಷ್ಟೆ! ಊಟಮಾಡಿದ ಸ್ವಲ್ಪ ಹೊತ್ತು ಬಿಟ್ಟೇ ನಾನು ನೀರು ಕುಡಿಯುವುದು. "

ನಾನೂ ಕುತೂಹಲ ನಟಿಸಿ ಏಕೆಂದು ಕೇಳಿದೆ. ಏಳು ತಿಂಗಳಿಂದ ಹೊಟ್ಟೆ ನೋವೆಂದೂ, ಯಾವ ಔಷಧಿಯಿಂದಲೂ ಗುಣವಾಗದೆ ಆಯುರ್ವೇದದಿಂದಲೇ ವಾಸಿಯಾಗುವ ಲಕ್ಷಣಗಳು ಕಾಣುತ್ತಿದ್ದುವೆಂದೂ ಹೇಳಿದನು.

ಸ್ವಲ್ಪ ನಕ್ಕು, " ನನ್ನ ರೋಗಗಳೂ ಸ್ವದೇಶಿ ಮಾತ್ರೆಗಳನ್ನೇ ಕೇಳುತ್ತವೆ," ಎಂದನು.

ನನ್ನಪತಿ, “ ಭೂಮಿಗೆ ಉಲ್ಕಾಪಾತಗಳನ್ನು ಕಂಡರೆ ಎಷ್ಟು ಆಕರ್ಷಣೆಯೋ, ಪರದೇಶಿ ಔಷಧಗಳನ್ನು ನೋಡಿದರೆ ನಿನಗೂ ಹಾಗೆ. ನಿನ್ನ ಕೋಣೆಯಲ್ಲಿ ಮೂರು ಬೀರುಗಳ ತುಂಬ....”

ಸಂದೀಪ ಬಾಬು ಮಧ್ಯೆ ಬಾಯಿ ಹಾಕಿ. “ಅವು ಪ್ರೋಲೀಸರ ಹಾಗೆ. ಅವುಗಳ ಅಗತ್ಯವಿಲ್ಲದಿದ್ದರೂ ಪರದೇಶದ ದಬ್ಬಾಳಿಕೆಯಿಂದ ತೊಂದರೆ ಮಾಡಲು ಇರುತ್ತವೆ,” ಎಂದನು.

ನನ್ನ ಪತಿಗೆ ಈ ಮಾತುಗಳು ರುಚಿಸಲಿಲ್ಲ. ಅಲಂಕಾರಗಳೆಲ್ಲಾ ಉತ್ಪ್ರೇಕ್ಷೆಯೇ, ಅವುಗಳನ್ನು ಮಾಡಿದವನು ಮಾನವ, ದೇವರಲ್ಲ.

ನಾನೊಂದುದಿನ ಸುಳ್ಳು ಹೇಳಿ ತಪ್ಪಿಸಿಕೊಳ್ಳಲು, “ ಗಿಡ, ಮೃಗಪಕ್ಷಿಗಳು ಸುಳ್ಳಾಡುವುದಿಲ್ಲ. ಮಾನವ ಅವುಗಳನ್ನು ಮೀರಿಸಿದವನು. ಹೆಂಗಸು ಪುರುಷರನ್ನೂ ಮೀರಿಸಿದವಳು. ಹೆಂಗಸು ಹೆಚ್ಚು ಅಲಂಕಾರ ಮಾಡಿಕೊಂಡರೆ ಹೇಗೆ ಆಭಾಸವಲ್ಲವೋ, ಹೆಚ್ಚು ಸುಳ್ಳಾಡಿದರೂ ಆಭಾಸವಿಲ್ಲ,” ಎಂದು ನನ್ನ ಪತಿಯೊಡನೆ ಹೇಳಿದ್ದೆ.

ನಾನು ಹೊರಗೆ ಬಂದಾಗ ನನ್ನ ಓರಗಿತ್ತಿ ಕಿಟಕಿಯ ಹತ್ತಿರ ನಿಂತಿದ್ದರು.

“ ಇಲ್ಲಿ ಇದ್ದೀರ ? ”

“ ಹೊಂಚಿ ಕೇಳುತ್ತಿದ್ದೆ,”—ಆಕೆ ಉತ್ತರವಿತ್ತರು.

೫

ನಾನು ಹಿಂದಿರುಗಿದಾಗ ಸಂದೀಪ ಬಾಬು. “ ನಮ್ಮಿಂದ ನಿಮ್ಮ ಊಟಕ್ಕೆ ತೊಂದರೆಯಾಯಿತು,” ಎಂದರು.

ನಿಜವಾಗಿಯೂ ನಾನು ತುಂಬಾ ಬೇಗ ಊಟ ಮುಗಿಸಿದ್ದೆ. ಅದು ಅವರಿಗೂ ತಿಳಿಯಿತೆಂದು ನಾಚಿಕೆಯಾಯಿತು.

ನನ್ನ ಸಂಕೋಚವನ್ನು ತಿಳಿದು ಸಂದೀಪ ಬಾಬು, " ನೀವು ಹರಿಣಿಯಂತೆ ಓಡಿ ಬಿಡದೆ ಪುನಃ ಬಂದುದಕ್ಕಾಗಿ ನಾನು ಋಣಿ," ಎಂದರು.

ಉತ್ತರ ಹೇಳಲು ತೋರದೆ ಸೋಫಾದ ಮೇಲೆ ಕುಳಿತೆ. ನಾನು ಸ್ತ್ರೀ ಶಕ್ತಿಯ ಅವತಾರವೆಂದೂ ಸುಮ್ಮನೆ ಬಂದುದ ರಿಂದಲೇ ಸಂದೀಪ ಬಾಬುವನ್ನು ಕೃತಾರ್ಥನನ್ನಾಗಿ ಮಾಡಿದೆ ನೆಂದೂ ಎಂದುಕೊಳ್ಳಲು ಪ್ರಯತ್ನ ಮಾಡಿದೆ. ಸಾಧ್ಯವಾಗಲಿಲ್ಲ.

ಸಂದೀಪ ಬಾಬು ಬೇಕೆಂತಲೇ ನನ್ನ ಪತಿಯೊಡನೆ ಚರ್ಚೆಗೆ ಆರಂಭಿಸಿದನು. ಚರ್ಚೆಯಲ್ಲಿ ತನ್ನ ಬುದ್ಧಿ ಬೆಳಗುವು ದೆಂದು ಆತ ಅರಿತಿದ್ದನು. ನಾನು ಎದುರಿಗಿದ್ದಾಗಲೆಲ್ಲಾ ಆತ ಚರ್ಚೆಗೆ ಆರಂಭಿಸದೆ ಬಿಡುತ್ತಿರಲಿಲ್ಲ.

ನನ್ನ ಪತಿಯನ್ನು ರೇಗಿಸುತ್ತಾ, " ದೇಶಭಕ್ತಿಯನ್ನೆಚ್ಚರಿ ಸುವಾಗ ಕಲ್ಪನೆಗೆ ಸ್ಥಳ ಕೊಡಕೂಡದೆ ? "

" ನಿಜ, ಸಂದೀಪ್. ಆದರೆ ಅದಕ್ಕೇ ಮುಖ್ಯ ಸ್ಥಾನ ಕೊಡಕೂಡದು. ದೇಶದ ಸತ್ಯತೆಯನ್ನರಿಯಬೇಕು. ದೇಶ ಭಕ್ತಿಯ ಕೂಗುಗಳ ಮೋಹಕ ವಿದ್ಯೆಯನ್ನುಪಯೋಗಿಸಲು ನನಗೆ ನಾಚಿಕೆ, ಹೆದರಿಕೆ. "

....ಅದು ನಿನ್ನ ನಂಬಿಕೆಯಾದರೆ ಮನುಷ್ಯರಲ್ಲೂ, ದೇಶ ವಿದೇಶಗಳಲ್ಲೂ ನೀನು ಯಾವ ಭೇದವನ್ನೂ ಕಾಣಕೂಡದು. "

" ನಿಜ. ಆದರೆ ನನ್ನ ಶಕ್ತಿ ಅಲ್ಪ. ಮಾನವ ಪ್ರೇಮ ವನ್ನು ದೇಶ ಪ್ರೇಮದಲ್ಲಿ ಮಾತ್ರ ತೋರಲು ಸಮರ್ಥನಾಗಿ ದ್ದೇನೆ. "

" ನಿನ್ನ ಪೂಜೆ ಸರಿಯೇ. ದೇವರು ಎಲ್ಲಾ ದೇಶಗಳಲ್ಲೂ ಇದ್ದಾನೆ. ಬೇರೆ ದೇಶಗಳನ್ನು ದ್ವೇಷಿಸಿ, ದೇವನ ಪೂಜೆ ಹೇಗೆ ಮಾಡುತ್ತೀಯೆ ? "

" ದ್ವೇಷವೂ ಪೂಜೆಗೆ ಸಂಬಂಧಿಸಿದುದು......ಅರ್ಜುನ

ಮಹಾ ದೇವನೊಡನೆ ಹೋರಾಡಿ ವರಪಡೆಯಲಿಲ್ಲವೆ? ನಾವು ದೇವನೊಡನೆ ಹೋರಾಡಿದರೆ ಕಡೆಗೆ ಆತನು ನಮ್ಮನ್ನೇ ಸೇರುತ್ತಾನೆ."

"ಹಾಗಾದರೆ ದೇಶ ಪ್ರೇಮಿಗಳೂ, ದೇಶ ದ್ರೋಹಿಗಳೂ ಭಗವಂತನ ಭಕ್ತರೇ. ದೇಶ ಪ್ರೇಮವನ್ನೇಕೆ ಬೋಧಿಸಬೇಕು?"

"ನಮ್ಮ ಸ್ವಂತ ದೇಶವಾದರೆ, ಪೂಜೆಯನ್ನೇ ನಿರೀಕ್ಷಿಸುತ್ತದೆ."

"ಹಾಗೆಯೇ ಚರ್ಚೆಯನ್ನು ಮುಂದುವರಿಸಿದರೆ ದೇವರು ನಮ್ಮಲ್ಲಿಯೂ ಇದ್ದಾನೆ. ಸ್ವಾರ್ಥವೂ ದೇವರ ಪೂಜೆಯಲ್ಲವೆ?"

"ಇವೆಲ್ಲಾ ಬರಿಯ ಮಾತುಗಳು, ನಿಖಿಲ. ಆಂತರಿಕ ಭಾವನೆಗಳಿರಬಹುದೆಂಬ ಕಲ್ಪನೆ ನಿನಗಿಲ್ಲವೆ?"

ನನ್ನ ಪತಿ— "ನಿಜ ಹೇಳುತ್ತೇನೆ, ಸಂದೀಪ್. ಅನ್ಯಾಯವನ್ನು ಕರ್ತವ್ಯವೆಂದೂ, ಅಧರ್ಮವನ್ನು ಉದಾತ್ತ ಧ್ಯೇಯವೆಂದೂ ಹೇಳಿದಾಗ ನನ್ನ ಹೃದಯ ನೋಯುತ್ತದೆ. ನಾನು ಕದಿಯದಿರುವುದು ಬುದ್ಧಿ ಪ್ರೇರಣೆಯಿಂದ ಮಾತ್ರವಲ್ಲ; ಆತ್ಮಗೌರವ, ಧ್ಯೇಯಗಳ ಅಭಿಮಾನದಿಂದ ಕೂಡ."

ನನಗೆ ತುಂಬಾ ಕೋಪ ಬಂತು. ಸುಮ್ಮನಿರಲಾರದೆ, "ಪ್ರತಿದೇಶದ ಚರಿತ್ರೆಯೂ ಸ್ವಂತ ದೇಶಕ್ಕಾಗಿ ಕದಿಯುವ ಪ್ರಸಂಗವೇ ಅಲ್ಲವೇ?" ಎಂದೆ.

"ಆ ಕಳ್ಳತನಕ್ಕೆ ಪ್ರಾಯಶ್ಚಿತ್ತವಿದೆ. ಅವರ ಚರಿತ್ರೆ ಇನ್ನೂ ಮುಗಿದಿಲ್ಲ."

ಸಂದೀಪ ಬಾಬು, "ನಾವು ಕಳ್ಳತನದಿಂದ ನಮ್ಮ ದೇಶದ ಭಂಡಾರವನ್ನು ತುಂಬೋಣ. ಶತಮಾನಗಳಲ್ಲಿ ತೀರಿಸೋಣ. ಆದರೆ ಚರಿತ್ರೆಯಲ್ಲಿ ಈ ಪ್ರಾಯಶ್ಚಿತ್ತದ ಮಾತೇ ಇಲ್ಲವಲ್ಲ."

"ರೋಂ ಚಕ್ರಾಧಿಪತ್ಯ ಪಾಪದ ಫಲವನ್ನನುಭವಿಸಿದಾಗ ಯಾರಿಗೂ ತಿಳಿಯಲೇ ಇಲ್ಲ. ಅದುವರೆಗೂ ಅದರ ಉತ್ಕರ್ಷಕ್ಕೆ

ಮಿತಿಯೇ ಇರಲಿಲ್ಲ. ಆದರೆ ಅವುಗಳ ರಾಜಕೀಯ ಸುಳ್ಳು ಮೋಸಗಳಿಂದ ತುಂಬಿ ಬೆನ್ನೆಲುಬನ್ನು ಮುರಿಯುತ್ತಿದ್ದುದು ನಿನಗೆ ತಿಳಿಯಲಿಲ್ಲವೆ ? ”

ನಾನು ಮೊದಲೆಂದೂ ಗಂಡಸರ ಚರ್ಚೆಗಳಲ್ಲಿ ಭಾಗ ವಹಿಸಿರಲಿಲ್ಲ. ನನ್ನ ಪತಿ ನನ್ನೊಡನೆ ಚರ್ಚಿಸಿದಾಗ, ನನ್ನ ಮೇಲಿನ ಪ್ರೀತಿಯಿಂದಲೇ ನಿಲ್ಲಿಸಿ ಬಿಡುತ್ತಿದ್ದರು. ಈಗ ಚರ್ಚೆ ಯಲ್ಲಿ ಆತನಿಗಿದ್ದ ಕೌಶಲವನ್ನರಿತೆನು.

ಆದರೆ ನನ್ನ ಪತಿಯ ವಾದವನ್ನು ನನ್ನ ಹೃದಯ ಒಪ್ಪಲಿಲ್ಲ. ಉತ್ತರ ಮಾತ್ರ ತೋರಲಿಲ್ಲ. ವಾದದಲ್ಲಿ ‘ ಧರ್ಮ ’ದ ಹೆಸರು ಬಂದರೆ ಒಳ್ಳೆಯದು; ಅನುಪಯೋಗವಾದುದೆಂದು ಹೇಳಲಾಗು ವುದಿಲ್ಲ.

ಸಂದೀಪ ಬಾಬು ಇದ್ದಕ್ಕಿದ್ದಂತೆ ನನ್ನ ಕಡೆ ತಿರುಗಿ, “ ನೀವೇನು ಹೇಳುತ್ತೀರಿ ? ” ಎಂದರು.

“ ಈ ಪ್ರಭೇದಗಳು ನನಗೆ ತಿಳಿಯುವುದಿಲ್ಲ. ನಾನು ಸಾಧಾರಣ ವ್ಯಕ್ತಿ. ನನಗೆ ದುರಾಸೆಯಿದೆ. ಸಮಯ ಬಿದ್ದರೆ ಕದಿಯುವುದಕ್ಕೂ ನಾನು ಹಿಂಜರಿಯುವುದಿಲ್ಲ. ನನಗೆ ರೋಷ ವಿದೆ. ದೇಶಕ್ಕಾಗಿ ಕೋಪ ಮಾಡಿ ಕೊಳ್ಳ ಬಲ್ಲೆ. ಬೇಕಾದಾಗ, ದೇಶಕ್ಕಾದ ಅವಮಾನದ ಸೇಡು ತೀರಿಸಿಕೊಳ್ಳಲು, ಹೊಡೆಯ ಬಲ್ಲೆ ; ಕೊಲ್ಲಬಲ್ಲೆ. ನನ್ನ ಹೃದಯವನ್ನು ಸೆರೆ ಹಿಡಿಯಲು ದೇಶಮಾತೆ ನನಗೆ ಪ್ರತ್ಯಕ್ಷವಾಗಿ ಕಾಣಿಸಬೇಕು. ಆ ದೇವಿ ನನ್ನ ಮನಸ್ಸನ್ನು ಮೋಹಿಸಿ ಹಿಡಿಯಬೇಕು. ನನ್ನ ದೇಶವನ್ನು, ಮಾತೆಯೆಂದು, ದೇವಿಯೆಂದು, ದುರ್ಗೆಯೆಂದು ಕರೆಯುತ್ತೇನೆ. ಆಕೆಯ ಬಲಿಗಾಗಿ ಭೂಮಿಯನ್ನು ರಕ್ತದಲ್ಲಿ ಅದ್ದುತ್ತೇನೆ. ನಾನು ಮಾನವಿ, ದೇವಿಯಲ್ಲ.”

ಸಂದೀಪಬಾಬು ಉದ್ವೇಗದಿಂದ ಎದ್ದು “ ವಂದೇ ಮಾತರಂ ” ಎಂದು ಕೂಗಿದರು.

ನನ್ನ ಪತಿಯ ಮನಸ್ಸಿಗೆ ನೋವಾಯಿತು. ಮೃದು ಸ್ವರದಲ್ಲಿ "ನಾನೂ ದೇವತೆಯಲ್ಲ; ಮಾನವನೇ; ಆದರಿಂದಲೇ ನನ್ನಲ್ಲಿರುವ ದೋಷವನ್ನು ದೇಶಮಾತೆಯೆಂದು ಎಂದೂ ಉತ್ಪ್ರೇಕ್ಷೆಮಾಡಿ ಹೇಳುವುದಿಲ್ಲ." ಎಂದರು.

ಸಂದೀಪಬಾಬು—"ನಿಖಿಲ್, ಸ್ತ್ರೀ ಹೃದಯದಲ್ಲಿ ಸತ್ಯ ಹೇಗೆ ಪ್ರತ್ಯಕ್ಷ ರೂಪವನ್ನು ತಾಳುತ್ತದೆ, ನೋಡು. ಸ್ತ್ರೀ ಕ್ರೂರಿಯಾಗಬಲ್ಲಳು; ಆಕೆಯ ಕೋಪ ಚಂಡಮಾರುತ. ಆದರಲ್ಲಿ ಭಯಂಕರ ಸೌಂದರ್ಯವಿದೆ. ಪುರುಷನು ಬುದ್ಧಿ ಆಲೋಚನೆಗಳ ಪರೀಕ್ಷೆಗೆ ಆದನ್ನು ಸಿಕ್ಕಿಸುವುದರಿಂದ ವಿಕಾರವಾಗಿ ತೋರುತ್ತದೆ. ನಮ್ಮ ಸ್ತ್ರೀಯರಿಂದಲೇ ದೇಶ ಉದ್ಧಾರವಾಗಬೇಕು, ನಿಖಿಲ್. ಇಲ್ಲಿ ಯುಕ್ತಾಯುಕ್ತತೆಗಳಿಗೆ ಸ್ಥಳವಿಲ್ಲ. ಧರ್ಮ ಸೂಕ್ಷ್ಮಗಳಿಗೆ ಇದು ಕಾಲವಲ್ಲ. ನಿರಾತಂಕವಾಗಿ ನಿಶ್ಚಿಂತೆಯಿಂದ ಕ್ರೂರಿಗಳಾಗಬೇಕು. ಪಾಪ ಮಾಡಬೇಕು. ನಮ್ಮ ಸ್ತ್ರೀಯರು ರಕ್ತ ಗಂಧದಿಂದ ನಮ್ಮ ಪಾಪವನ್ನು ಅಲಂಕರಿಸಬೇಕು. ಕವಿಯ ಮಾತು ನಿನಗೆ ನೆನಪಿಲ್ಲವೆ?—

ಪಾಪವೆ ಬಾ, ಓ ಸುಂದರತರ ಪಾಪವೆ,
ಕೊಡು ನಿನ್ನಾಕೆಚ್ಚಿನ ಚುಚ್ಚುವ ಚುಂಬನವ
ಸುರಿ ನಮ್ಮಯ ಧಮನಿಗೆ ಉರಿಗೆಂಪಿನ ಮಧುವ
ತಡೆಯಿಲ್ಲದ ಕೆಡುಕಿನ ಕಹಳೆಯ ದನಿಮಾಡು
ನೀತಿಯ ಕಟ್ಟನು ಕಿತ್ತೊಗೆಯುವ ವಿಜಯದ
ಪೂಮಾಲೆಯನೆಮ್ಮಯ ಬಾಸಿಗದಲಿ ನೀ ನೀಡು.
ಓ ಪಾಪಗಳಧಿದೇವತೆಯೇ,
ಬಳಿ ನಮ್ಮೆದೆಯೊಳು ದುಷ್ಕೀರ್ತಿಯ ಕೆಸರಿನ
ಕರಿ-ಕರಿಮಸಿಯ, ಬಿಡು ನಾಚಿಕೆಯ.

ಸಂದೀಪಬಾಬು ತಲೆಯೆತ್ತಿ ನಿಂತು, ಮನುಷ್ಯರು ಹೃದಯ ಮಂದಿರದಲ್ಲಿ, ಸದಾ ಕಾಲದಲ್ಲಿ, ಸರ್ವ ದೇಶಗಳಲ್ಲಿ ಪೂಜಿಸುವ

ಎಲ್ಲಾ ಧ್ಯೇಯಗಳನ್ನೂ ತಿರಸ್ಕರಿಸಿದಾಗ ನನ್ನ ಮೈ ಝುಮ್ಮೆಂದಿತು.

"ಮನೆಯನ್ನು ಸುಟ್ಟು ಬೂದಿಮಾಡಿ ಜಗಜ್ಜ್ಯೋತಿಯನ್ನು ಬೆಳಗುವ ಅಗ್ನಿದೇವಿ ನೀವು. ನಾಶದ ತಳವನ್ನೇ ಮುಟ್ಟುವ ಧೈರ್ಯವನ್ನು ನೀಡು ದೇವಿ. ಪಾಪಕ್ಕೆ ಸೌಂದರ್ಯವನ್ನು ನೀಡು" ಸಂದೀಪ ಬಾಬು ಮುಂದುವರಿಸಿದರು.

ಸಂದೀಪ ಬಾಬು ಯಾರನ್ನು ಕುರಿತು ಈ ಮಾತುಗಳನ್ನಾಡುತ್ತಿದ್ದನೋ ಸ್ಪಷ್ಟವಾಗಲಿಲ್ಲ. 'ವಂದೇ ಮಾತರಂ' ಎಂದು ಪೂಜಿಸುತ್ತಿದ್ದ ದೇವಿಯನ್ನು ಸಂಬೋಧಿಸುತ್ತಿರಬಹುದು; ದೇಶದ ಸ್ತ್ರೀ ಸ್ತೋಮವನ್ನು ಹೊಗಳುತ್ತಿರಬಹುದು ಅಥವಾ ಆ ಸ್ತ್ರೀಯರ ಪ್ರತಿನಿಧಿಯಾದ ನನ್ನನ್ನೇ ಇರಬಹುದು. ನನ್ನ ಪತಿ ತಟ್ಟನೆ ಎದ್ದು, "ಸಂದೀಪ್, ಚಂದ್ರನಾಥಬಾಬು ಬಂದರು", ಎನ್ನದಿದ್ದರೆ ಇನ್ನೂ ಹಾಗೆಯೇ ಮಾತುಗಳನ್ನು ಮುಂದುವರಿಸುತ್ತಿದ್ದನೋ ಏನೋ.

ಒಳಗೆ ಬರಬಹುದೋ ಕೂಡದೋ ಎಂದು ಅನುಮಾನಿಸುತ್ತಿದ್ದ, ಗಂಭೀರ ಭಾವದ ಮುದುಕರೊಬ್ಬರು ಬಾಗಿಲಲ್ಲಿ ನಿಂತಿದ್ದರು. ಮುಳುಗುವ ಸೂರ್ಯನಲ್ಲಿರುವಂತಹ ಪ್ರಶಾಂತವಾದ ಬೆಳಕು ಆತನ ಮುಖದಲ್ಲಿ ಬೆಳಗುತ್ತಿತ್ತು.

ನನ್ನ ಪತಿ ಮೆಲ್ಲಗೆ ನನ್ನೊಡನೆ "ಈತನೇ ನನ್ನ ಗುರು. ನಮಸ್ಕಾರ ಮಾಡು", ಎಂದರು.

ನಾನು ಬಗ್ಗಿ ನಮಸ್ಕರಿಸಿದಾಗ, "ದೇವರು ನಿನ್ನನ್ನು ಯಾವಾಗಲೂ ಕಾಪಾಡಲಿ, ತಾಯಿ", ಎಂದು ಆತ ಆಶೀರ್ವದಿಸಿದರು. ಆ ಕ್ಷಣದಲ್ಲಿ ಆ ಆಶೀರ್ವಾದ ನನಗೆ ಆವಶ್ಯಕವಾಗಿತ್ತು.

# ನಿಖಿಲನ ಕಥೆ

## ೧

ದೇವರು ಕೊಟ್ಟ ಸುಖ ದುಃಖಗಳನ್ನು ಅನುಭವಿಸುವ ಶಕ್ತಿ ನನಗಿದೆಯೆಂದು ಒಂದಾನೊಂದು ದಿನ ನಂಬಿದ್ದೆ. ಆಗ ನಾನು ಪರೀಕ್ಷೆಗೆ ಸಿಕ್ಕಿರಲಿಲ್ಲ. ಈಗ ಆ ಕಾಲ ಒದಗಿದೆ.

ಬಡತನ, ಅವಮಾನ, ಸಾವು—ವಿಮಲೆಯದು ಕೂಡ, ಈ ಎಲ್ಲ ಕೇಡಾಗಬಹುದೆಂದು ಕಲ್ಪಿಸಿಕೊಂಡು ನನ್ನ ಶಕ್ತಿಯನ್ನು ಪರೀಕ್ಷಿಸುತ್ತಿದ್ದೆ—ಇವುಗಳನ್ನು ತಡೆಯ ಬಹುದೆಂದು ನಾನೆಂದು ಕೊಳ್ಳುತ್ತಿದ್ದುದು ಬರಿಯ ಅಹಂಭಾವದಿಂದಲ್ಲ. ಆದರೆ ಈಗ ನಾನು ಅನುಭವಿಸ ಬೇಕಾಗಿರುವ ಕಷ್ಟ ಕಲ್ಪನೆಯಲ್ಲಿ ಸುಳಿದಿರ ಲಿಲ್ಲ. ನನಗೆ ಶಕ್ತಿ ಇದೆಯೇ ? ನಿತ್ಯದ ಕೆಲಸಗಳನ್ನು ಸಾಗಿಸು ತ್ತಿರುವಾಗಲೂ ನನ್ನ ಹೃದಯವನ್ನು ಒಂದು ಮುಳ್ಳು ಚುಚ್ಚು ತ್ತಿದೆ. ನಿದ್ರೆಯಲ್ಲಿಯೂ ನೋವೆ. ಬೆಳಗ್ಗೆ ಏಳುವಾಗಲೇ ಆಕಾಶವನ್ನು ಅಂಧಕಾರ ಆವರಿಸಿದಂತಿದೆ. ಏನಾಗುತ್ತಿದೆ ? ಸುಖದ ಸೋಗನ್ನು ಹಾಕಿಕೊಂಡು ಬಂದ ನನ್ನ ಹಳೆಯ ಜೀವನ ಹೃದಯವನ್ನೇ ಹಿಂಡುತ್ತಿದೆ. ಮುಖ ಮುಚ್ಚಿಕೊಂಡರೂ ಮುಂದೆ ಬರುತ್ತಿರುವ ದುಃಖಾವಮಾನಗಳು ಪ್ರಕಟವಾಗುತ್ತಿವೆ. ಹೃದಯವೆಲ್ಲಾ ಕಣ್ಣಾಗಿ ನೋಡಬಾರದುದನ್ನು, ನೋಡಲಿಷ್ಟ ವಿಲ್ಲದುದನ್ನು ನೋಡಬೇಕಾಗಿದೆ. ನನ್ನ ದುರದೃಷ್ಟ ಜೀವನದ ಬಡತನ, ಮುಸುಕು ಹರಿದು ನಿಲ್ಲಬೇಕಾಗಿದೆ. ತುಂಬಿದಂತಿದ್ದ ಜೀವನ ಬರಿದಾಗಿದೆ. ಒಂಬತ್ತು ವರ್ಷ ಯೌವ್ವನದಲ್ಲಿ ನಾನು ಕೊಂಡ ಮಾಯೆಯ ಸಂಪತ್ತನ್ನು ಇಂದು ಸತ್ಯಕ್ಕೆ ಬಡ್ಡಿ ಸಮೇತ ತೀರಿಸ ಬೇಕಾಗಿದೆ.

ಸ್ವಾಭಿಮಾನಕ್ಕೆ ಹೆಣಗಾಡಿ ಪ್ರಯೋಜನವೇನು ? ನನ್ನ ಬಡತನವನ್ನೊಪ್ಪಿಕೊಂಡರೆ ತಪ್ಪೇನು ? ಹೆಂಗಸರು ನಿರೀಕ್ಷಿಸುವ ವಿವೇಕ ಶೂನ್ಯ ಅಹಂಭಾವ ನನ್ನಲ್ಲಿರದಿರಬಹುದು. ಆದರೆ ಶಕ್ತಿ–

ಬಲ ಪ್ರದರ್ಶನ ಮಾತ್ರವೇ ? ದುರ್ಬಲರನ್ನು ತುಳಿಯಲು ಬಲ ಶಾಲಿಗಳಿಗೆ ಸಂಕೋಚವಿಲ್ಲವೆ ?

ಮಾತನಾಡಿ ಪ್ರಯೋಜನವೇನು ? ಚರ್ಚೆಯಿಂದ ಅಧಿ ಕಾರ ಸಿಕ್ಕಲಾರದು. ನಾನು ಅಪ್ರಯೋಜಕ

ಆದರೇನು ? ನಿಜವಾದ ಪ್ರೀತಿ ತನ್ನ ಸಂಪತ್ತಿನಿಂದ ಬಲ ಹೀನರನ್ನು ಹರಸ ಬಲ್ಲುದು. ಅದೃಷ್ಟಶಾಲಿಗಳಿಗೆ ಭೂಮಿಯಲ್ಲಿ ಅನೇಕ ಬಹುಮಾನಗಳಿವೆ ; ಪ್ರೀತಿ ನಿರ್ಬಲರಿಗೆ ಮೀಸಲಾಗಿರುವ ಬಹುಮಾನ.

ಇದುವರೆಗೂ ವಿಮಲೆ, ನನ್ನ ಮನೆಯ ವಿಮಲೆಯಾಗಿದ್ದಳು. ಅವಳ ಪ್ರಪಂಚ ಈ ಗೋಡೆಗಳನ್ನು ದಾಟರಲಿಲ್ಲ. ಅವಳ ಪ್ರೀತಿ ಹೃದಯಾಂತರಾಳದಿಂದ ಬಂದ ಅಮೃತವಾಹಿನಿಯೋ ಅಭ್ಯಾಸ ಬಲದಿಂದ ತೋರಿಕೆಗೆ ಹರಿಯುತ್ತಿದ್ದ ಕೊಳಾಯಿ ನೀರೋ ?

ವಿಮಲೆ ಸತ್ಯ ಶಕ್ತಿಗಳಿಂದ ತುಂಬಿ ಅರಳಲೆಂದು ಆಶಿಸು ತ್ತಿದೆ. ಆದರೆ ನಾನು ಮರೆತ ವಿಚಾರ—ಹಕ್ಕು ಬಾಧ್ಯತೆಗಳನ್ನು ಬಿಟ್ಟು ಕೊಟ್ಟ ಹೊರತು ಮನುಷ್ಯನ ಹೃದಯಾಂತರಾಳದ ಸತ್ಯ ತಿಳಿಯುವುದಿಲ್ಲವೆಂಬುದು.

ನಾನೀ ವಿಚಾರವನ್ನೇಕೆ ಮರೆತೆ ? ಪತಿಯ ಅಧಿಕಾರದ ಹೆಮ್ಮೆಯಿಂದಲೋ ? ಇಲ್ಲ. ಪ್ರೀತಿಯನ್ನು ಸಂಪೂರ್ಣವಾಗಿ ನಂಬಿ ಮೋಸಹೋದೆ. ಸತ್ಯದ ನಗ್ನ ತೀಕ್ಷ್ಣತೆಯನ್ನು ತಡೆಯುವ ಶಕ್ತಿ ನನಗಿದೆ. ನಾನೀ ಕಷ್ಟದಿಂದ ಪಾರಾಗ ಬೇಕೆಂಬ ಸಂಕಲ್ಪ ವನ್ನು ಬಿಟ್ಟು ಕೊಡಲಿಲ್ಲ.

ವಿಮಲೆಗೆ ಒಂದು ವಿಚಾರ ತಿಳಿಯಲಿಲ್ಲ. ಶಕ್ತಿ ಪ್ರದರ್ಶನ ದೌರ್ಬಲ್ಯದ ಚಿಹ್ನೆಯೆಂದು ನಾನು ಭಾವಿಸಿದೆನೆಂದು ಅವಳಿಗೆ ತಿಳಿಯಲಿಲ್ಲ. ಅಶಕ್ತರೇ ನ್ಯಾಯಕ್ಕೆ ಹೆದರುವುದು ; ನ್ಯಾಯಕ್ಕೆ ಸಲ್ಲಬೇಕಾದ ಹೊಣೆಯಿಂದ ನುಸುಳಿ ಅನ್ಯಾಯದಿಂದ ಕೆಲಸ ಸಾಧಿಸುವರು. ವಿಮಲೆಗೆ ತಾಳ್ಮೆಯನ್ನು ಕಂಡರಾಗದು. ಪುರುಷ

ರಲ್ಲಿ ಕೋಪ ಅನ್ಯಾಯ ಅಸಂತುಷ್ಟಿಗಳನ್ನು ನಿರೀಕ್ಷಿಸುವಳು. ಅವಳ ಪೂಜೆಯಲ್ಲಿ ಹೆದರಿಕೆ ಬೆರೆತಿರಬೇಕು.

ಹೊರಗಿನ ಪ್ರಪಂಚದಲ್ಲಿ ಕಾಲಿಟ್ಟ ಮೇಲೆ, ಅಧಿಕಾರಕ್ಕೆ ತಲೆ ಬಾಗುವುದನ್ನು ಬಿಡುವಳೆಂದಿದ್ದೆ. ಆದರೆ ಈ ಸ್ವಭಾವ ಅವಳಲ್ಲಿ ರಕ್ತಗತವಾದುದು. ಅಟ್ಟಹಾಸದಲ್ಲಿ ಆಕೆಗೆ ಪ್ರೀತಿ. ನಾಲಗೆಯ ತುದಿಯಿಂದ ಕರುಳಿನವರೆಗೆ ಖಾರ ಚುರ್ ಎಂದ ರೇನೇ ಅವಳಿಗೆ ಆಹಾರ ರುಚಿಸುವುದು: ಅವಳು ಜೀವನದ ಸವಿಯನುಣ್ಣುವ ಬಗೆ ಅಂತಹುದು. ಆದರೆ ನಾನು ಆಲೋಚಿ ಸದೆ, ಉದ್ರೇಕದಿಂದ, ಕರ್ತವ್ಯಕ್ಕೆ ಕೈಯಿಡ ಕೂಡದೆಂದು ನಿರ್ಧರಿ ಸಿದ್ದೆ: ವಿಮಲೆ ನನ್ನನ್ನು ಅಶಕ್ತನೆಂದು ತಿಳಿದು ನನ್ನಲ್ಲಿ ಗೌರವ ವನ್ನು ಕಳೆದು ಕೊಂಡಿದ್ದಾಳೆ. ನಾನು ಹುಚ್ಚು ಹುಚ್ಚಾಗಿ 'ವಂದೇ ಮಾತರಂ', ಎಂದು ಕೂಗುವುದಿಲ್ಲವೆಂದು ನನ್ನಲ್ಲಿ ಬೇಸರಗೊಂಡಿದ್ದಾಳೆ.

ಇದರಿಂದ ನಾನು ಬಹಳ ಜನಕ್ಕೆ ಬೇಡವಾಗಿದ್ದೇನೆ. ಯಾವುದೋ ಪ್ರಶಸ್ತಿಗಳಿಸಲು ಅಥವಾ ಪೋಲೀಸರಿಗೆ ಹೆದರಿ ಕೊಂಡು ನಾನು ಹೀಗಾದೆನೆಂದು ಅನೇಕರು ತರ್ಕಿಸಿದ್ದಾರೆ. ಪೋಲೀಸರು ನನ್ನ ತಾಟಸ್ಥ್ಯವನ್ನು ಗಮನಿಸಿ, ಏನೋ ಮೋಸ ವಿರಬಹುದೆಂದು ಕೊಂಡಿದ್ದಾರೆ.

ದೇಶದ ಸ್ಥಿತಿಯ ವಾಸ್ತವ ಜ್ಞಾನದಿಂದ ಉತ್ಸಾಹ ಗೊಳ್ಳದೆ, ಮನುಷ್ಯ ಮನುಷ್ಯನೆಂದು ಅವನನ್ನು ಪ್ರೀತಿಸದೆ— ದೇಶವನ್ನು ದೇವತ್ವಕ್ಕೊಯ್ದು ಕೂಗಿ ತೃಪ್ತಿಪಡುವವರು ದೇಶ ಕ್ಕಿಂತ ಉದ್ರೇಕವನ್ನೇ ಹೆಚ್ಚು ಪ್ರೀತಿಸುವರೆಂದು ನನ್ನ ಅಭಿಪ್ರಾಯ. ಸತ್ಯಕ್ಕಿಂತ ಉದ್ರೇಕಕ್ಕೆ ಹೆಚ್ಚಿನ ಸ್ಥಾನ ಕೊಡು ವುದು ಅಲ್ಪ ಬುದ್ಧಿ: ಬುದ್ಧಿ ಸ್ವತಂತ್ರವಾದರೆ ದಿಕ್ಕೇ ತೋರು ವುದಿಲ್ಲ. ನಾವು ಉತ್ಸಾಹದಿಂದ ಮುಂದುವರಿಯ ಬೇಕಾದರೆ, ಯಾವುದೋ ಮಾಯೆ, ಅಧಿಕಾರ, ಹುಚ್ಚು ನಂಬಿಕೆಗಳು

ನಮ್ಮನ್ನು ನೂಕಬೇಕು. ನಾವು ಎಂದಿನವರೆಗೆ ಸತ್ಯಕ್ಕೆ ತಲೆ ಬಾಗದೆ, ಕಾಲ್ಪನಿಕ ಮೋಹಕ್ಕೆ ಎಡೆಗೊಡುವೆವೋ ಅದುವರೆಗೆ ಸ್ವಾತಂತ್ರ್ಯದ ಅಧಿಕಾರ ನಮಗಿಲ್ಲ. ನಾವು ಯಾವ ಸ್ಥಿತಿಯಲ್ಲಿದ್ದರೂ, ನಮ್ಮ ಉತ್ಕರ್ಷಕ್ಕೆ ಯಾವುದೋ ಕಾಲ್ಪನಿಕ ಶಕ್ತಿಯನ್ನು, ಮಂತ್ರವಾದಿಯನ್ನು ಅಪೇಕ್ಷಿಸುತ್ತೇವೆ.

ಸಂದೀಪ ನನ್ನಲ್ಲಿ ಕಲ್ಪನಾ ಶಕ್ತಿ ಇಲ್ಲವೆಂದೂ, ಆದರಿಂದ ದೇಶವನ್ನು ಪ್ರತ್ಯಕ್ಷ ಮೂರ್ತಿಯಾಗಿ ಆರಾಧಿಸುವ ಶಕ್ತಿಯಿಲ್ಲವೆಂದೂ ಹೇಳಿದಾಗ ವಿಮಲೆಯೂ ಒಪ್ಪಿದಳು. ಚರ್ಚೆಯಲ್ಲಿ ಗೆದ್ದರೂ ಸುಖ ಸಾಧಿಸಿದಂತಾಗುವುದಿಲ್ಲವೆಂದು ಸುಮ್ಮನಾದೆ. ಆಕೆಯ ಅಭಿಪ್ರಾಯ ಬೇರೆಯಾದುದು ಬುದ್ಧಿ ಶಕ್ತಿಯ ಭೇದದಿಂದಲ್ಲ ; ಪ್ರಕೃತಿ ವೈಷಮ್ಯದಿಂದ.

ನನಗೆ ಕಲ್ಪನಾ ಶಕ್ತಿ ಇಲ್ಲವೆನ್ನುತ್ತಾರೆ—ನನ್ನಲ್ಲಿ ತೈಲವಿದ್ದರೂ ದೀಪವಿಲ್ಲವೆನ್ನುತ್ತಾರೆ. ಅವರ ವಿಚಾರದಲ್ಲಿ ನನ್ನ ಆಕ್ಷೇಪಣೆಯೂ ಅದೇ. " ನೀವು ಚಕಮಕಿಯಂತೆ ಕಪ್ಪು ; ಕಿಡಿ ಹೊರಡಿಸಬೇಕಾದರೆ ಜಗಳಗಳಿಲ್ಲದೆ, ಶಬ್ದವಿಲ್ಲದೆ ನಿಮಗೆ ಸಾಧ್ಯವಿಲ್ಲ. ಆದರೆ ಆ ಕಿಡಿಗಳು ನಿಮ್ಮ ಅಹಂಕಾರವನ್ನು ಹೆಚ್ಚಿಸುವುವೇ ಹೊರತು ದೃಷ್ಟಿಯನ್ನು ಸ್ವಚ್ಛಗೊಳಿಸುವುದಿಲ್ಲ ", ಎನ್ನುತ್ತೇನೆ.

ಸಂದೀಪನಲ್ಲಿ ದುರಾಸೆಯ ಕುರುಹುಗಳು ಕಾಣುತ್ತಿವೆ. ಅವನ ಐಹಿಕ ದೃಷ್ಟಿ ದೇಶಭಕ್ತಿಯಲ್ಲಿ ಅಹಂಭಾವವನ್ನು ಪ್ರದರ್ಶಿಸುತ್ತಿದೆ. ಬುದ್ಧಿ ಚುರುಕಾದರೂ ಒರಟು ಸ್ವಭಾವವಾದುದರಿಂದ, ತನ್ನ ಸ್ವಾರ್ಥ ಅಭಿಲಾಷೆಗಳಿಗೆ ದೊಡ್ಡ ಹೆಸರು ಕೊಡುತ್ತಾನೆ. ಅವನಿಗೆ ದ್ವೇಷ ಹಸಿವನ್ನು ತೀರಿಸುವಷ್ಟೇ ಆವಶ್ಯಕ. ಹಿಂದೆ ವಿಮಲೆ ಅವನಿಗೆ ದುಡ್ಡು ಕೊಡಬೇಡವೆಂದು ಅಡ್ಡಿ ಮಾಡುತ್ತಿದ್ದಳು. ಅವನೊಡನೆ ಹೆಣಗಾಡಲು ಅವಮಾನವಾಗಿ ನಾನು ಸುಮ್ಮನಿದ್ದೆ.

ಆದರೆ ಈ ದಿನ ಸಂದೀಪನ ದೇಶಪ್ರೇಮ, ಅವನ ಸ್ವಾರ್ಥ ಪ್ರೇಮದ ಇನ್ನೊಂದು ಮುಖವೆಂದು ವಿಮಲೆಗೆ ತಿಳಿಯ ಹೇಳಲು ಸಾಧ್ಯವಿಲ್ಲ. ಅವಳಿಗೆ ಅವನಲ್ಲಿರುವ ಮೆಚ್ಚುಗೆ ನನ್ನ ಬಾಯನ್ನು ಮುಚ್ಚಿಸಿದೆ: ಅಸೂಯೆ ಹೆಚ್ಚು ಮಾತನಾಡಿಸ ಬಹುದೆಂದು ಹೆದರುತ್ತೇನೆ. ನನ್ನ ಹೃದಯದ ನೋವು ಸಂದೀಪನನ್ನು ವಿಕೃತವಾಗಿ ಮಾಡಿರಬಹುದು. ಆದರೆ ಈ ನೋವನ್ನನುಭವಿಸು ವುದಕ್ಕಿಂತ ಮಾತನಾಡುವುದೇ ಒಳ್ಳೆಯದು.

೨

ನನ್ನ ಗುರುವಿನ ಪರಿಚಯವಾಗಿ ಮೂವತ್ತು ವರ್ಷ ಗಳಾದುವು. ಅಪವಾದ, ವಿಪತ್ತು, ಸಾವು ಯಾವುದೂ ಆತ ನನ್ನು ಹೆದರಿಸಲಾರವು. ಆತನು ನನ್ನ ಜೀವನವನ್ನು ಶಾಂತಿ, ಸತ್ಯ, ದೈವ ಪ್ರೇಮಗಳಿಂದ ತುಂಬದಿದ್ದರೆ ಈ ಮನೆತನದಲ್ಲಿ ಹುಟ್ಟಿ ನಾನು ಯಾವ ಗತಿಗೀಡಾಗಬೇಕಾಗಿತ್ತೋ!

ಆ ದಿನ ನನ್ನ ಗುರು, "ಸಂದೀಪನು ಇಲ್ಲಿ ಇರಬೇಕೇ?" ಎಂದರು. ಅನಿಷ್ಟದ ನೆರಳು ಆತನಿಗೆ ಅರ್ಥವಾಗಿತ್ತು. ಮುಂದಿನ ಅನರ್ಥಗಳು ಆತನಿಗೆ ಸ್ಪಷ್ಟವಾಗಿದ್ದುವು. ಆತನ ಪ್ರೀತಿಯನ್ನರಿಯೆನೆ?

ಟೀ ಕುಡಿಯುವಾಗ ಸಂದೀಪನೊಡನೆ, "ರಂಗಪುರದಿಂದ ಕಾಗದ ಬಂತು. ನಾನು ಸ್ವಾರ್ಥತೆಯಿಂದ ನಿನ್ನನ್ನು ನಿಲ್ಲಿಸಿ ಕೊಂಡಿದ್ದೇನೆಂದು ಆಕ್ಷೇಪಿಸಿದ್ದಾರೆ. ನೀನು ಅಲ್ಲಿಗೆ ಹೋಗು ವುದು ಯಾವಾಗ?" ಎಂದೆ.

ವಿಮಲೆಯ ಮುಖ ಸಪ್ಪಗಾಗಿ ಸಂದೀಪನ ಕಡೆ ನೋಡಿದಳು.

ಸಂದೀಪ, "ಸುಮ್ಮನೆ ಅಲ್ಲಿಂದಿಲ್ಲಿಗೆ ಓಡಾಡುವುದರಿಂದ ಏನೂ ಪ್ರಯೋಜನವಿಲ್ಲ. ಒಂದೇ ಕಡೆ ನಿಂತು ಕೆಲಸ ಮಾಡಿ ದರೆ ಹೆಚ್ಚು ಫಲಕಾರಿಯಾಗಬಹುದು", ಎಂದನು.

ವಿಮಲೆಯ ಕಡೆ ನೋಡಿ, "ನೀವೇನೆನ್ನುತ್ತೀರಿ?" ಎಂದು ಕೇಳಿದನು.

ವಿಮಲೆ ಸ್ವಲ್ಪ ತಡೆದು, "ನಿಮಗೆ ಸರಿ ತೋರಿದಂತೆ ಮಾಡುವುದು ಉತ್ತಮ", ಎಂದಳು.

ಸಂದೀಪ, "ಹಾಗಾದರೆ ನನ್ನ ಮನಸ್ಸಿನಲ್ಲಿರುವುದನ್ನು ಹೇಳುತ್ತೇನೆ. ನನಗಿನ್ನೂ ನನ್ನ ಪಥ ಸ್ಪಷ್ಟವಾಗಿಲ್ಲ. ಅದರಿಂದಲೇ ಓಡಾಡಿ, ಜನರಲ್ಲಿ ಉತ್ಸಾಹತುಂಬಿ ನನ್ನ ಶಕ್ತಿಯನ್ನು ಹೆಚ್ಚಿಸಿ ಕೊಳ್ಳುತ್ತಿದ್ದೇನೆ. ಈದಿನ ನೀವು ರಾಷ್ಟ್ರದ ಸಂದೇಶವನ್ನು ಕೊಟ್ಟದ್ದೀರಿ. ಈ ಶಕ್ತಿ ಬೇರೆ ಯಾರಲ್ಲಿಯೂ ಇಲ್ಲ. ನಿಮ್ಮಿಂದ ಶಕ್ತಿಪಡೆದು ಉತ್ಸಾಹದ ದಾವಾನಲವನ್ನು ದೇಶದಲ್ಲಿ ಹಬ್ಬು ತ್ತೇನೆ. ನಾಚಿಕೊಳ್ಳಬೇಡಿ. ನೀವು ಸಂಕೋಚವನ್ನು ಮೆಟ್ಟಿ ನಿಂತಿದ್ದೀರಿ. ರಾಣಿಜೇನಿನ ಆಜ್ಞೆಯಂತೆ ನಡೆಯಲು ಕೆಲಸ ಗಾರರಿದ್ದೇವೆ. ನೀವೇ ನಮ್ಮ ಕೇಂದ್ರ, ನಮ್ಮ ಶಕ್ತಿ."

ವಿಮಲೆಯ ಮುಖ ನಾಚಿಕೆಯಿಂದಲೂ ಅಭಿಮಾನ ದಿಂದಲೂ ಕೆಂಪಾಯಿತು. ಟೀ ಬಗ್ಗಿಸುತ್ತಿದ್ದ ಅವಳ ಕೈ ನಡುಗುತ್ತಿತ್ತು.

ಇನ್ನೊಂದು ದಿನ, ನನ್ನ ಗುರು, "ನೀವಿಬ್ಬರೂ ಡಾರ್ಜಿ ಲಿಂಗಿಗೆ ಕೆಲವು ದಿನ ಏಕೆ ಹೋಗಿ ಬರಬಾರದು? ನೀನು ಸ್ವಸ್ಥ ವಾಗಿಲ್ಲ. ನಿದ್ದೆ ಸರಿಯಾಗಿ ಬರುವುದೋ?" ಎಂದು ಕೇಳಿದರು.

ಸಂಜೆ ವಿಮಲೆಯನ್ನು ಕೇಳಿದೆ. ಅವಳಿಗೆ ಹಿಮವತ್ಪರ್ವತ ವನ್ನು ನೋಡಬೇಕೆಂದು ಬಹಳ ದಿನದಿಂದ ಆಸೆಯಿತ್ತು. ಆದರೆ ಅವಳು ಬರಲೊಪ್ಪಲಿಲ್ಲ....ದೇಶದ ಹಿತಕ್ಕಾಗಿರಬೇಕು! ಎಂದು ಕೊಂಡೆ.

ನನ್ನ ನಂಬಿಕೆಯನ್ನು ಕಳೆದುಕೊಳ್ಳದೆ, ಕಾದಿರಬೇಕು. ಸಂಕುಚಿತ ಪ್ರಪಂಚದಿಂದ ವಿಶಾಲ ಜಗತ್ತಿಗೆ ಹೋಗುವ ದಾರಿ ಶಾಂತವಾದುದಲ್ಲ. ಅವಳಿಗೆ ಸ್ವಾತಂತ್ರ್ಯ ಅಭ್ಯಾಸವಾದ

ಮೇಲೆ ನಾನು ನನ್ನ ಸ್ಥಾನವನ್ನರಿಯಬೇಕು. ಬಾಹ್ಯ ಜಗತ್ತಿನ ಏರ್ಪಾಟಿನಲ್ಲಿ ನನಗೆ ಸ್ಥಳವಿಲ್ಲದಿದ್ದರೆ, ಅದೃಷ್ಟದೊಡನೆ ಹೋರಾಡದೆ, ನಿಶ್ಶಬ್ದವಾಗಿ ಸರಿದು ಹೋಗುತ್ತೇನೆ. ಸತ್ಯವನ್ನು ಬಲಪ್ರಯೋಗ ಎದುರಿಸಬಲ್ಲುದೆ?

# ಸಂದೀಪನ ಕಥೆ

## ೧

ಕೈಲಾಗದವನು "ಪಾಲಿಗೆ ಬಂದದ್ದು ಪರಮಾನ್ನ," ಎನ್ನುತ್ತಾನೆ. ಬಲಹೀನನು ಆಮಾತನ್ನೊಪ್ಪುತ್ತಾನೆ. ಜಗತ್ತಿನ ಅನುಭವ, "ಸೆಳೆದುಕೊಂಡುದು ತನ್ನದು," ಎನ್ನುವುದು. ಹುಟ್ಟಿನಿಂದ ಮಾತ್ರ ದೇಶ ನನ್ನದಾಗಲಾರದು. ಸಾಮರ್ಥ್ಯದಿಂದ ಗೆದ್ದುಕೊಳ್ಳಲು ಶಕ್ತನಾದಾಗ ಮಾತ್ರ ಅದು ನನ್ನದು.

ಪ್ರತಿಯೊಬ್ಬನಿಗೂ ಅನುಭವಿಸುವ ಹಕ್ಕಿರುವುದರಿಂದ ಸ್ವಾರ್ಥತೆ ಸ್ವಾಭಾವಿಕವಾದುದೇ. ಕಳೆದುಕೊಂಡು ತೃಪ್ತರಾಗಿರುವುದು ಸ್ವಭಾವ ವಿರುದ್ಧ. ಮನಸ್ಸಿನ ಬಯಕೆಗಳನ್ನು ಹೊರ ಪ್ರಪಂಚ ತೀರಿಸಬೇಕು. ಇದೇ ಒಳಗಿನ, ಹೊರಗಿನ ಜಗತ್ತುಗಳ ಸಂಬಂಧ. ಕೈಲಾಗದ ಹೇಡಿಗಳು ನೀತಿಯ ಆದರ್ಶಗಳನ್ನಿಟ್ಟುಕೊಳ್ಳಲಿ. ಹೃದಯಾಂತರಾಳದಿಂದ ಬಯಸಿ, ಮನಃಪೂರ್ತಿ ಅನುಭವಿಸಿ, ಅನುಮಾನ ಭಯಗಳಿಲ್ಲದವರೇ ಭಗವಂತನ ವರ ಪ್ರಸಾದದಿಂದ ಹುಟ್ಟಿದವರು. ಅವರಿಗೋಸ್ಕರ ಪ್ರಕೃತಿ ಮಾತೆ ತನ್ನ ಸಂಪತ್ತುಗಳನ್ನು ಹರಡುವಳು. ಬಯಸಿದುದನ್ನು ಪಡೆಯಲು ಅವರು ನದಿಗಳನ್ನು ಈಜುವರು, ಗೋಡೆಗಳನ್ನು ಧುಮುಕುವರು, ಬಾಗಿಲುಗಳನ್ನೊಡೆಯುವರು. ಹಾಗೆ ಪಡೆಯುವುದರಲ್ಲಿ ಆನಂದವಿದೆ. ಆ ಹೋರಾಟದಿಂದ ಪಡೆದ ವಸ್ತುವಿನ ಬೆಲೆ ಹೆಚ್ಚುತ್ತದೆ.

ಕಳ್ಳನಿಗೆ ಮಾತ್ರ ಪ್ರಕೃತಿ ವಶಳಾಗುವಳು. ಈ ಒತ್ತಾಯದ ಬಯಕೆಯಲ್ಲಿ ಆಕೆಗೆ ಸಂತೋಷವಿದೆ. ಆಕೆಯ ಮೆಚ್ಚಿನ ಮಾಲೆ ತ್ಯಾಗಿಯ ಒಣಗಿದ ಕಂಠಕ್ಕಲ್ಲ. ಮದುವೆಯ ಮಂಗಳ ನಿನಾದ ಕೇಳಿ ಬರುತ್ತಿದೆ. ನಾನು ಹೊತ್ತು ಮಾಡ ಕೂಡದು. ನನ್ನ ಹೃದಯ ಕಾತರ ಗೊಂಡಿದೆ. ನಾನೇ ಮದು ವಣಿಗ. ಸಮಯಕ್ಕೆ ಸರಿಯಾಗಿ, ಕೈಯಲ್ಲಿ ಜ್ಯೋತಿಯನ್ನು ಹಿಡಿದು ಬರುವವನಿಗೇ ಮದುವೆ. ಪ್ರಕೃತಿಯ ಮದುವೆಯ ಮಂಟಪಕ್ಕೆ ಬರುವ ಮದುವಣಿಗ, ಕರೆಯದೆಯೇ, ನಿರೀಕ್ಷಿ ಸದೆಯೇ ಬರುತ್ತಾನೆ.

ನಾಚಿಕೆಯೆ? ನನಗೆ ಸಂಕೋಚವಿಲ್ಲ. ಬೇಕಾದುದ ನ್ನೆಲ್ಲಾ ಕೇಳುತ್ತೇನೆ, ಕೇಳದೆಯೂ ತೆಗೆದುಕೊಳ್ಳುತ್ತೇನೆ. ಕಳೆದು ಕೊಂಡವರು, ತಮ್ಮ ನಷ್ಟಕ್ಕೆ ಸಂಕೋಚವೆನ್ನುತ್ತಾರೆ. ನಾವಿರುವ ಪ್ರಪಂಚ ವಾಸ್ತವಿಕ. ಇಲ್ಲಿಂದ ಬರಿಗೈ, ಬರಿ ಹೊಟ್ಟೆಗಳಿಂದ ಹಿಂದಿರುಗುವವನು, ದೊಡ್ಡ ಮಾತುಗಳಿಂದ ಚೀಲವನ್ನು ತುಂಬಿಸಿ ಕೊಳ್ಳುವವನು ಈ ಕಠಿಣ ಪ್ರಪಂಚಕ್ಕೆ ಬರಲು ಕಾರಣವೇನು ? ವೇದಾಂತಿಗಳ ಶೂನ್ಯ ಸಂಗೀತ ಹಾಡಲು ಅವರು ಬಂದರೆ? ನನಗೆ ಆ ಸಂಗೀತದಿಂದ ತೃಪ್ತಿಯೂ ಇಲ್ಲ, ಸಂತೋಷವೂ ಇಲ್ಲ.

ನನ್ನ ಆಸೆಗಳು ತೀವ್ರವಾದುವು. ಕೈಕಾಲುಗಳಿಂದ ಒತ್ತಿ, ದೇಹಕ್ಕೆಲ್ಲಾ ಬಳಿದುಕೊಂಡು ಕಂಠ ಪೂರ್ತಿ ಅನುಭವಿಸಬೇಕು. ನೈತಿಕ ಉಪವಾಸಗಳಿಂದ ಬತ್ತಿ ಬರಡಾದ ಜೀವಿಗಳ ಬರಡು ಸಂಗೀತ ನನ್ನ ಕಿವಿಗಳನ್ನು ತಾಗುವುದಿಲ್ಲ.

ಮರೆಮಾಚುವುದು ಹೇಡಿತನ. ಆವಶ್ಯಕವಾದಾಗ ಗುಪ್ತವಾಗಿರದಿರುವುದೂ ಹೇಡಿತನವೇ. ಸ್ವಾರ್ಥತೆ ಗೋಡೆಗಳ ನ್ನೆಬ್ಬಿಸುತ್ತದೆ. ಸ್ವಾರ್ಥತೆಯಿರುವುದರಿಂದಲೇ ನಾನು ಗೋಡೆ ಗಳನ್ನು ಮುರಿಯುತ್ತೇನೆ. ನೀವು ಶಕ್ತಿಯನ್ನುಪಯೋಗಿಸಿದರೆ

ನಾನು ಯುಕ್ತಿಯನ್ನುಪಯೋಗಿಸುತ್ತೇನೆ. ಇವೇ ಜೀವನ ಸತ್ಯಗಳು. ಇವುಗಳ ಮೇಲೆಯೇ, ರಾಜ್ಯಗಳು, ಚಕ್ರಾಧಿಪತ್ಯಗಳು, ಮಾನವನ ಸರ್ವ ಪ್ರಯತ್ನಗಳೂ ನಿಂತಿರುವುದು.

ಸ್ವರ್ಗದಿಂದ ಇಳಿದು ಬಂದು ಉಪದೇಶಿಸುವ ಅವತಾರಗಳ ಮಾತು ನಿಜವಲ್ಲ. ಎಲ್ಲರೂ ಸ್ತೋತ್ರಮಾಡಿದರೂ, ಆ ಮಾತುಗಳ ಮನೆ ನಿರ್ಬಲರ ಹೃದಯದಲ್ಲಿ ಮಾತ್ರ. ಬಲಿಷ್ಠರು, ಭೂಮಿಯನ್ನಾಳುವ ಶಕ್ತರು, ಅವುಗಳನ್ನು ಮನ್ನಿಸುವುದಿಲ್ಲ. ಇದನ್ನು ತಿಳಿದ ಶೂರರೇ ವಿಜಯಿಗಳು; ಅವತಾರಗಳೊಂದು ಕಡೆ, ಪ್ರಕೃತಿಯೊಂದುಕಡೆ ಎಳೆದಾಡುವ ಅವಿವೇಕಿಗಳು ಸತ್ಯದ ದೋಣಿಯಲ್ಲೊಂದು ಕಾಲನ್ನೂ, ಮಾಯಾದೋಣಿಯಲ್ಲೊಂದು ಕಾಲನ್ನೂ ಇಟ್ಟು ಮುಂದುವರಿಯಲಾರದೆ, ಇದ್ದ ಕಡೆ ನಿಲ್ಲಲಾರದೆ ತೊಳಲಾಡುವರು.

ಸಾಯಬೇಕೆಂಬ ಆಸೆಯಿಂದಲೇ ಜನಿಸಿದ ಕೆಲವು ಜನರಿದ್ದಾರೆ. ಬಹುಶಃ, ಬದುಕಿನಲ್ಲಿ ಅವರು ಕಾಣುವ ಈ ನಿಧಾನವಾದ ಸಾವು, ಸೂರ್ಯಾಸ್ತದಂತೆ, ಅವರನ್ನಾಕರ್ಷಿಸುವ ಸೌಂದರ್ಯವನ್ನು ಹೊಂದಿರಬಹುದು. ಇದು ಜೀವನವೆನ್ನಿಸಿದರೆ ಇದೇ ನಿಖಿಲನ ಜೀವನ. ಅನೇಕ ವರ್ಷಗಳ ಕೆಳಗೆ ಈ ವಿಚಾರವಾಗಿ ಅವನೊಡನೆ ಚರ್ಚಿಸಿದ್ದೆ. ಅವನು, "ನಿಜ; ಶಕ್ತಿಯನ್ನು ತೋರದೆ ಏನನ್ನೂ ಸಂಪಾದಿಸಲಾಗುವುದಿಲ್ಲ. ಆದರೆ ಈ ಶಕ್ತಿ ಎಂತಹುದು? ಸಂಪಾದನೆ ಎಂದರೇನು? ತ್ಯಾಗ ಶಕ್ತಿಯೇ ಶಕ್ತಿಯೆಂದು ನನ್ನ ಅಭಿಪ್ರಾಯ" ಎಂದನು.

"ಅಂದರೆ ಭಿಕಾರಿಯ ಜೀವನವನ್ನೇ ಮೆಚ್ಚುತ್ತೀಯೆ?" ಎಂದೆ.

ಅದಕ್ಕವನು—"ಕೋಳಿ ಪಿಳ್ಳೆ ಮೊಟ್ಟೆಯ ಬಡತನಕ್ಕಾಶಿಸಿದಂತೆ. ಮೊಟ್ಟೆ ನಿಜವಾದುದು. ಅದನ್ನು ಬಿಟ್ಟು, ಕಣ್ಣಿಗೆ ಕಾಣದ ಗಾಳಿ ಕೈಗೆ ಸಿಗದ ಬೆಳಕಿಗಾಶಿಸುವುದಿಲ್ಲವೆ? ಈ ಬದಲಾವಣೆ

ಲಾಭದಾಯಕವಾದುದೆ—ಎಂದು ನೀನು ಕೇಳುತ್ತೀಯೇನೊ ? ”
—ಅಂದ.

ನಿಖಿಲ ಉಪಮಾನಗಳಿಗಾರಂಭಿಸಿದರೆ ಮಾತುಗಳ ಮೋಹದಿಂದ ಅವನನ್ನೆಳೆಯಲು ಸಾಧ್ಯವಿಲ್ಲ. ಅವನಿಂದ ವಾಸ್ತವ ಪ್ರಪಂಚ ದೂರ. ಅವನಷ್ಟಕ್ಕೆ ಅವನು ಸುಖಿಯಾಗಿರಲಿ—ಕಲ್ಪನಾ ಪ್ರಪಂಚದಲ್ಲಿ. ನಾವು ಲೋಕದ ಮಾಂಸ ಭಕ್ಷಕರು. ನಮಗೆ ಹಲ್ಲು ಉಗುರುಗಳಿವೆ. ನಾವು ಹಿಡಿದು, ಹರಿದು ತಿನ್ನುತ್ತೇವೆ. ಬೆಳಗ್ಗೆ ತಿಂದ ಹುಲ್ಲನ್ನು ಸಂಜೆ ಮೆಲಕು ಹಾಕುವುದರಲ್ಲಿ ನಮಗೆ ಸಂತೋಷವಿಲ್ಲ. ಉಪಮಾನ ಪ್ರವೀಣರು ನಮ್ಮ ಆಹಾರಕ್ಕೆ ಅಡ್ಡಿಯಾಗಲು ಸಾಧ್ಯವಿಲ್ಲ. ಹಾಗಾದರೆ ನಾವು ಕದ್ದಾದರೂ ಜೀವಿಸುವವರೇ.

ಜನರ ನಡವಳಿಕೆ ಹೀಗೇ ಇದ್ದರೂ ಯಾರೂ ಒಪ್ಪಿಕೊಳ್ಳುವುದಿಲ್ಲ. ಇದೇ ನೀತಿಯೆಂದು ಅರ್ಥಮಾಡಿಕೊಳ್ಳುವುದಿಲ್ಲ. ನಾನು ಹೇಳುವುದು ಬರಿ ಮಾತಲ್ಲ ; ಸತ್ಯ ಪ್ರಪಂಚದಲ್ಲಿ ದಿನವಹಿ ನಡೆಯುವ ಮಾತು. ಸ್ತ್ರೀಯರು ಕಲ್ಪನಾ ಪ್ರಪಂಚದಲ್ಲಿ ಗಂಡಸರಂತೆ ತೇಲಾಡದೆ ವಾಸ್ತವ ಪ್ರಪಂಚದಲ್ಲಿರುವುದರಿಂದ ಅವರ ಹೃದಯ ನನ್ನನ್ನು ಮೆಚ್ಚುತ್ತದೆ.

ಸ್ತ್ರೀಯರು ನನ್ನ ಮುಖ, ಭಾವ, ನಡತೆ ಮಾತುಗಳಲ್ಲಿ ಉತ್ಕಟೇಚ್ಛೆಯನ್ನು ಕಾಣುತ್ತಾರೆ—ಯೋಗದ ಕಾವಿನಿಂದ ಬೆಂದ ಆಸೆಯಲ್ಲ, ಹೆಜ್ಜೆ ಹೆಜ್ಜೆಗೆ ಅನುಮಾನ ಚರ್ಚೆಗಳಿಂದ ಮುಖ ತಿರುಗಿಸುವ ಮೋಹವಲ್ಲ—ತುಂಬಿ ಹರಿಯುವ ಪ್ರೇಮ. ಅದು ಪ್ರವಾಹದಂತೆ, “ ನನಗೆ ಬೇಕು, ನನಗೆ ಬೇಕು”, ಎಂದು ಅರಚುತ್ತಾ ನುಗ್ಗುತ್ತದೆ. “ ಈ ಆಸೆ—ಲೋಕದ ಜೀವಾಳ ; ಇದಕ್ಕೆ ಕಟ್ಟು ಕಟ್ಟಲೆಗಳಿಲ್ಲ ; ಇದಕ್ಕೆಂದಿಗೂ ಜಯ ” ಎಂದು ಹೆಂಗಸರು ಹೃದಯಾಂತರಾಳದಲ್ಲಿ ಒಪ್ಪುತ್ತಾರೆ. ಇದರಿಂದಲ್ಲೇ ಜೀವ ಸಾವುಗಳಿಗೆ ಹೆದರದೆ ನನ್ನ ಆಸೆಗೆ ಸಂತೋಷವಾಗಿ ಬಲಿ

ಯಾಗಿದ್ದಾರೆ. ಸ್ತ್ರೀಯರನ್ನು ಗೆಲ್ಲುವ ಈ ಶಕ್ತಿಯೇ ಲೋಕ ವನ್ನು ಗೆಲ್ಲುವ ಪೌರುಷ.

ಪರಲೋಕಕ್ಕಾಶಿಸುವವರು ಜಗತ್ತಿನಿಂದ ಆಕಾಶಕ್ಕೆ ಆಸೆ ಯನ್ನು ಸರಿಸುತ್ತಾರೆ. ಅವರ ಆಸೆಯ ಚಿಲುಮೆ ಎಷ್ಟು ಎತ್ತರ ಹಾರಬಲ್ಲುದೋ, ಎಷ್ಟು ಕಾಲ ಇರಬಲ್ಲುದೋ ನೋಡಬೇಕು. ಆದರೆ ಇದು ಮಾತ್ರ ನಿಜ; ಈ ಸ್ವಪ್ನಜೀವಿಗಳಿಗಾಗಿ ಭಗವಂತ ಹೆಂಗಸರನ್ನು ಸೃಷ್ಟಿಸಲಿಲ್ಲ.

" ಸಾದೃಶ್ಯ! ಸಂಬಂಧ!" ನನಗೆ ಅನುಕೂಲ ಕಂಡಾಗ ನಾನೇ, "ಭಗವಂತನು ಹೆಂಗಸರು ಗಂಡಸರನ್ನು ವಿಶೇಷ ಜೊತೆ ಗಳನ್ನಾಗಿ ನಿರ್ಮಿಸಿರುವನೆಂದೂ ಆ ಜೊತೆಗಳೇ ದೈವಿಕವಾದು ವೆಂದೂ" ಹೇಳಿದ್ದೇನೆ. ಇದಕ್ಕೆ ಕಾರಣವೇನೆಂದರೆ, ಮನುಷ್ಯ ಸ್ವಭಾವಕ್ಕನುಸಾರವಾಗಿ ನಡೆದರೂ ಯಾವುದೋ ಮಾತಿನ ಮಾಯೆಯ ಹಿಂದೆ ಅವಿತುಕೊಳ್ಳಲು ಹವಣಿಸುತ್ತಾನೆ. ಅದ ರಿಂದಲೇ ಜಗತ್ತು ಸುಳ್ಳಿನಿಂದ ತುಂಬಿರುವುದು. " ಸಾದೃಶ್ಯ!"– ಒಂದೇ ಒಂದಿರಬೇಕೆ? ಸಾವಿರಾರು ಜನರಿಗೆ ಸಾದೃಶ್ಯವಿರ ಬಹುದು. ಒಬ್ಬರಿಗಾಗಿ ಸಾವಿರಾರು ಜನರನ್ನು ದೂರ ಮಾಡು ವುದು ನನ್ನ ಪ್ರಕೃತಿಗೆ ಒಗ್ಗದ ಮಾತು. ನಾನೇ ಎಷ್ಟೋ ಜನ ರನ್ನು ಕಂಡಿದ್ದೇನೆ. ಅದರಿಂದ ಇನ್ನೊಬ್ಬರನ್ನು ಹೊರಗೆ ಹಾಕ ಲಾರೆ; ಅದೂ ಎದುರಿಗೆ ಪ್ರತ್ಯಕ್ಷವಾಗಿರುವ ವ್ಯಕ್ತಿಯನ್ನು! ಆಕೆಗೂ ನನ್ನ ಸ್ನೇಹದ ಅರಿವಾಗಿದೆ. ಆಮೇಲೆ!

ಆಮೇಲೆ–ಗೆಲ್ಲದಿದ್ದರೆ ನಾನು ಹೇಡಿಯೇ!

---

# ಅಧ್ಯಾಯ ೩

## ವಿಮಲೆಯ ಕಥೆ

೬

ನನ್ನ ನಾಚಿಕೆಯಲ್ಲಿ ಹೋಯಿತು! ನನಗೆ ಯೋಚಿಸಲೂ ಬಿಡುವಿಲ್ಲ; ದೇಹದ ಪರಿವೆಯೋ ಇರಲಿಲ್ಲ. ಹಗಲು ರಾತ್ರಿಗಳು ಒಂದು ದೊಡ್ಡ ನೀರಿನ ಸುಳಿಯಂತೆ ನನ್ನನ್ನು ಎಳೆದು ಸುತ್ತು ತ್ತಿದ್ದುವು. ನಾಚಿಕೆಗಾಗಲಿ ಸಂದೇಹಕ್ಕಾಗಲಿ ಸ್ಥಳವೇ ಇರಲಿಲ್ಲ.

ಒಂದು ದಿನ ನನ್ನ ಓರಗಿತ್ತಿ ನನ್ನ ಪತಿಯೊಡನೆ "ಇದು ವರೆಗೂ ಈ ಮನೆಯ ಹೆಂಗಸರು ಅಳುತ್ತಿದ್ದರು. ಈಗ ಗಂಡಸರ ಸರದಿ" ಎಂದಳು. ನನ್ನ ಕಡೆ ತಿರುಗಿ—"ಅವರು ತಪ್ಪಿಸಿಕೊಳ್ಳ ದಂತೆ ನಾವು ನೋಡಿಕೊಳ್ಳೋಣ, ಚಿಕ್ಕ ರಾಣಿ! ನೀನು ಯುದ್ಧಕ್ಕೆ ಸಿದ್ಧಳಾಗಿದ್ದೀ; ಅವರ ಹೃದಯಕ್ಕೆ ಸರಿಯಾಗಿ ಬಾಣ ಗಳನ್ನು ಬಿಡು," ಎಂದಳು.

ತೀಕ್ಷ್ಣವಾದ ಅವಳ ಕಣ್ಣುಗಳಿಂದ ನನ್ನ ಅಲಂಕಾರ, ಮಾತು, ರೀತಿ, ಯಾವುದನ್ನೂ ಮರೆಸಲಾಗಲಿಲ್ಲ. ಈಗ ಆ ವಿಚಾರಗಳು ನಾಚಿಕೆಯನ್ನುಂಟು ಮಾಡಿದರೂ ಆಗ ನನಗೇನೂ ನಾಚಿಕೆಯಿರಲಿಲ್ಲ. ನನಗೇ ತಿಳಿಯದೆ ನನ್ನಲ್ಲಿ ತುಮುಲ ಯುದ್ಧ ನಡೆದಿತ್ತು. ನಾನು ಹೆಚ್ಚು ಅಲಂಕಾರ ಮಾಡಿ ಕೊಳ್ಳುತ್ತಿದ್ದುದೂ ಯಾವೊಂದು ಗುರಿಯಿಂದಲ್ಲ; ಯಂತ್ರದಂತೆ. ಸಂದೀಪ ಬಾಬುವಿಗೆ ಯಾವ ಅಲಂಕಾರ ಪ್ರಿಯವೆಂಬುದು ನನಗೆ ತಿಳಿ ದಿತ್ತು. ಅದಕ್ಕೆ ಪ್ರಯತ್ನ ಬೇಕಾಗಿರಲಿಲ್ಲ. ಎಲ್ಲರೆದುರಿಗೆ ಆತನು ಆ ವಿಚಾರವಾಗಿ ಚರ್ಚಿಸುತ್ತಿದ್ದನು.

ಒಂದು ದಿನ ನನ್ನ ಪತಿಯೊಡನೆ, "ನಿಖಿಲ, ನಾನು ಮೊದಲು ರಾಣಿಯನ್ನು ನೋಡಿದಾಗ ಸರಿಗೆಯಂಚಿನ ಸೀರೆಯ ನ್ನುಟ್ಟು ಆಕೆ ತಲೆ ತಗ್ಗಿಸಿ ಕುಳಿತಿದ್ದಳು. ದಾರಿಯನ್ನು ಕಳೆದು

ಕೊಂಡ ನಕ್ಷತ್ರಗಳಂತೆ ಆಕೆಯ ದೃಷ್ಟಿ ದಿಗಂತವನ್ನರಸುತ್ತಿತ್ತು. ಆಕೆ ಯುಗಾಂತರಗಳು ಕತ್ತಲೆಯ ಅಂಚಿನಲ್ಲಿ ನಿಂತು ಏನನ್ನೋ ಹುಡುಕುತ್ತಿರುವಂತೆ ತೋರುತ್ತಿತ್ತು. ಆಕೆಯನ್ನು ನೋಡಿದಾಗ ನನ್ನ ಮೈಯಲ್ಲಿ ರೋಮಾಂಚವುಂಟಾಯಿತು. ಆಕೆಯ ಸೀರೆಯ ಅಂಚು ಆಕೆಯನ್ನು ಸುತ್ತುವರಿದಿರುವ ಜ್ಯೋತಿಯಂತೆ ಕಂಡಿತು. ನಮಗೆ ಬೇಕಾಗಿರುವುದು ಆ ಪ್ರತ್ಯಕ್ಷ ಜ್ಯೋತಿ! ಇಲ್ಲಿ ನೋಡಿ, ರಾಣಿ, ನೀವು ಪುನಃ ನಮಗಾಗಿ ಪ್ರತ್ಯಕ್ಷ ಜ್ಯೋತಿಯಂತೆ ಅಲಂಕಾರ ಮಾಡಿಕೊಳ್ಳಬೇಕು."

ಇದುವರೆಗೆ ನಾನು ಹಳ್ಳಿಯ ಸಣ್ಣ ಹೊಳೆಯಾಗಿದ್ದೆ. ನನ್ನ ಭಾಷೆ, ರೀತಿಗಳು ಈಗಿನ ಹಾಗಿರಲಿಲ್ಲ. ಆದರೆ ಸಮುದ್ರ ಪ್ರವಾಹದಿಂದ ನನ್ನ ಎದೆ ಉಬ್ಬಿತು. ನನ್ನ ದಡಗಳು ಕುಸಿದು ಸಮುದ್ರದ ಅಲೆಗಳ ಬಡಿತ ನನ್ನ ಹುಚ್ಚು ಪ್ರವಾಹಕ್ಕೆ ಮಾರ್ನುಡಿಯಿತು. ನನ್ನ ರಕ್ತದ ಬಡಿತ ನನಗೆ ಅರ್ಥವಾಗಲಿಲ್ಲ. ಮೊದಲಿನ ವಿಮಲೆ ಎಲ್ಲಿ?

ಈ ಆನಂದದ ಉಬ್ಬರವೆಲ್ಲಿಂದ ನನ್ನೊಳಗೆ ತೇಲಿ ಬಂತು? ಸಂದೀಪನ ಕಣ್ಣುಗಳು ಭಕ್ತಿಯ ದೀಪಗಳಂತೆ ಬೆಳಗಿದುವು. ನಾನು ಸುಂದರಿಯೆಂದೂ ಶಕ್ತಿಯೆಂದೂ ಅವನ ದೃಷ್ಟಿ ಸಾರಿತು. ನನ್ನ ಪ್ರಪಂಚದಲ್ಲಿನ ಎಲ್ಲಾ ಧ್ವನಿಗಳನ್ನೂ ಆತನ ಹೊಗಳಿಕೆ ಮುಳುಗಿಸಿತು. ಭಗವಂತನು ನನ್ನನ್ನು ಪುನರ್ನಿರ್ಮಾಣ ಮಾಡಿದನೆ! ಇದುವರೆಗೆ ಮರೆತಿದ್ದು ಈಗ ಅದನ್ನೆಲ್ಲಾ ತುಂಬಿ ಕೊಡುತ್ತಿದ್ದನೆ? ಕುರೂಪಿಯಾಗಿದ್ದ ನಾನು ಇದ್ದಕ್ಕಿದ್ದಂತೆ ಸುಂದರಿಯಾದೆ. ಕೆಲಸಕ್ಕೆ ಬಾರದವಳು ಬಂಗಾಳದ ವೈಭವದ ಗುರುತಾದೆ!

ಸಂದೀಪ ಬಾಬು ಬರೀ ವ್ಯಕ್ತಿಯಲ್ಲ, ಈ ದೇಶದ ಲಕ್ಷಾಂತರ ಜನರ ಪ್ರತೀಕವವನು! ಆತನು ನನ್ನನ್ನು ರಾಣಿ ಜೀನೆಂದಾಗ ದೇಶ ಭಕ್ತರೆಲ್ಲಾ ನನ್ನನ್ನು ಹೊಗಳಿದರು. ನನ್ನ

ಓರಗಿತ್ತಿಯ ಕಟು ಹಾಸ್ಯ ನನ್ನನ್ನು ತಾಗಬೇ ಇಲ್ಲ. ನನ್ನ ಜೀವನ ಸಂಬಂಧವೇ ಬದಲಾಯಿತು. ದೇಶಕ್ಕೆ ನಾನು ಆವಶ್ಯಕ ವೆಂದು ಸಂದೀಪ ಬಾಬು ತೋರಿಸಿ ಕೊಟ್ಟರು. ಆಗ ಅಪರಿಮಿತ ಶಕ್ತಿಯನ್ನು ನನ್ನಲ್ಲಿ ಕಂಡು ಕೊಂಡುದರಿಂದ ಆತನ ಮಾತುಗಳು ತಪ್ಪೆನಿಸಲಿಲ್ಲ. ದೈವಿಕ ಶಕ್ತಿಯನ್ನು ಹೊಂದಿದ್ದೆ. ನನ್ನನ್ನೇ ಮೀರಿದ ಎಂದೂ ಅನುಭವಿಸದ ಶಕ್ತಿ! ಅದರ ಸ್ವಭಾವ ವೆಂತಹುದೆಂದು ನಾನು ಪರೀಕ್ಷಿಸಲಿಲ್ಲ. ನನ್ನ ಸ್ವಂತವೇ ಆವರೂ ಆ ಶಕ್ತಿ ನನ್ನನ್ನು ಮೀರಿತ್ತು; ಬಂಗಾಳವನ್ನೆಲ್ಲಾ ಆವರಿಸಿತ್ತು.

ಸಂದೀಪ ಬಾಬು ಸ್ವಾತಂತ್ರ್ಯ ಸಾಧನೆಯ ಪ್ರತಿ ಸಣ್ಣ ವಿಚಾರದಲ್ಲೂ ನನ್ನ ಅಭಿಪ್ರಾಯವನ್ನು ಕೇಳುತ್ತಿದ್ದರು. ಮೊದ ಮೊದಲು ನಾನು ನಾಚಿಕೊಂಡರೂ, ಕ್ರಮೇಣ ನಾಚಿಕೆ ಮರೆ ಯಾಯಿತು. ನಾನು ಯಾವ ಸಲಹೆ ಕೊಟ್ಟರೂ ಆತನಿಗೆ ಆಶ್ಚರ್ಯ! ಸಂಭ್ರಮದಿಂದ, "ಗಂಡಸರು ಆಲೋಚಿಸಬಲ್ಲರು. ಹೆಂಗಸರು ಆಲೋಚಿಸದೆಯೇ ಅರ್ಥಮಾಡಿಕೊಳ್ಳಬಲ್ಲರು. ದೇವದೇವನು ತನ್ನ ಕಲ್ಪನಾ ವಿಲಾಸದಿಂದಲೇ ಸ್ತ್ರೀಯನ್ನು ಸೃಷ್ಟಿಸಿದನು. ಪುರುಷನನ್ನಾದರೊ ಹೊಡೆದು, ಬಡಿದು, ತಯಾ ರಿಸ ಬೇಕಾಯಿತು" ಎನ್ನುವನು.

ದೇಶದ ನಾನಾ ಕಡೆಗಳಿಂದ ಬಂದ ಕಾಗದಗಳನ್ನು ಸಂದೀಪ ನನ್ನ ಅಭಿಪ್ರಾಯ ಪಡೆಯಲು ತೋರಿಸುತ್ತಿದ್ದನು. ಆಗಾಗ ಆತನು ನನ್ನ ಅಭಿಪ್ರಾಯಗಳನ್ನು ಒಪ್ಪುತ್ತಿರಲಿಲ್ಲ. ಆದರೆ ನಾನು ಚರ್ಚಿಸುತ್ತಿರಲಿಲ್ಲ. ಒಂದೆರಡು ದಿನಗಳಾದಮೇಲೆ, ತಟ್ಟನೆ ಜ್ಞಾನೋದಯವಾದಂತೆ—ನನಗೆ ಹೇಳಿ ಕಳುಹಿಸಿ, "ತಪ್ಪು ನನ್ನದು. ನಿಮ್ಮ ಅಭಿಪ್ರಾಯವೇ ಸರಿ," ಎನ್ನುವನು. ನನ್ನ ಅಭಿಪ್ರಾಯಕ್ಕೆ ವಿರೋಧವಾಗಿ ನಡೆದಾಗಲೆಲ್ಲಾ ತಪ್ಪಾಗು ತ್ತೆಂದು ಒಪ್ಪಿಕೊಳ್ಳುತ್ತಿದ್ದನು. ಎಲ್ಲಾ ಕಾರ್ಯದ ಹಿಂದೆ

ಸಂದೀಪ ಬಾಬುವಿನ ಕೈವಾಡವಿತ್ತೆಂದೂ ಆತನ ಹಿಂದೆ ಸ್ತ್ರೀಯ ವಿವೇಚನೆಯಿತ್ತೆಂದೂ ನಾನು ದೃಢವಾಗಿ ನಂಬಿದೆನು. ದೊಡ್ಡ ಹೊಣೆ ಹೊತ್ತ ಆನಂದ ನನ್ನ ಹೃದಯವನ್ನು ತುಂಬಿತು.

ನಮ್ಮ ಚರ್ಚೆಗಳಲ್ಲಿ ನನ್ನ ಪತಿಗೆ ಸ್ಥಾನವಿರಲಿಲ್ಲ. ಪ್ರೀತಿ ಪಾತ್ರನಾದ, ಆದರೆ ಆಲೋಚನಾವಿಚಾರದಲ್ಲಿ ಅಪ್ರಯೋಜಕ ನಾದ, ತಮ್ಮನಂತೆ ಆತನನ್ನು ಸಂದೀಪ ಬಾಬು ಕಾಣುತ್ತಿದ್ದರು. ನನ್ನ ಪತಿಯ ಸರಳತೆಯನ್ನು ನೋಡಿ ಆತನಿಗೆ ಪ್ರೀತಿಯಿಂದೊಡ ಗೂಡಿದ ಹಾಸ್ಯ! ಆತನ ಅನೇಕ ವಿಚಿತ್ರ ಸಿದ್ಧಾಂತಗಳನ್ನು ನೋಡಿ ವಿನೋದಪಡುವನು. ದೇಶದ ಭಾರವಾದ ಸಮಸ್ಯೆಯನ್ನು ಆತನ ಮೇಲೆ ಹೊರಿಸದಿರಲು ಈ ಅಭಿಮಾನವೇ ಕಾರಣವಾಗಿತ್ತು.

ನಿಕಟ ಸಂಬಂಧಗಳು ಅರಿವಿಲ್ಲದೆ ಬಿರಿಯುತ್ತಿರುವಾಗ, ಅದು ಯಾರಿಗೂ ಗೋಚರವಾಗದಂತೆ ಪ್ರಕೃತಿ, ರಹಸ್ಯವಾದ ಅಂಜನಗಳನ್ನು ಸವರುತ್ತಾಳೆ. ಕಡೆಯಲ್ಲಿ, ಎಂಥ ದೊಡ್ಡ ಬಿರುಕಾಯಿತೆಂದು ತಟ್ಟನೆ ಎಚ್ಚರವಾಗುತ್ತದೆ. ನನ್ನ ಜೀವನದ ಅತ್ಯಂತ ನಿಕಟ ಸಂಬಂಧವನ್ನು ಕತ್ತಿ ಕುಯ್ಯುತ್ತಿದ್ದಾಗ ಅದರ ಅರಿವೇ ಇಲ್ಲದಂತೆ ನನ್ನ ಮನಸ್ಸನ್ನೊಂದು ಮಾದಕ ಹೊಗೆ ಮುಸುಕಿತ್ತು. ಇದು ಹೆಂಗಸಿನ ಸ್ವಭಾವವಿರಬಹುದು. ಮನೋ ವಿಕಾರದಲ್ಲಿ ಬಾಹ್ಯ ಪ್ರಪಂಚದ ಅರಿವಿರುವುದಿಲ್ಲ. ನದಿಯಂತೆ ದಡಗಳಿಂದ ಬಂಧಿಸಲ್ಪಟ್ಟಿರುವಾಗ ಸಕಲ ಲೋಕವನ್ನೂ ಪೋಷಿ ಸುತ್ತೇವೆ; ದಡಮೀರಿ ಹರಿದಾಗ ಸರ್ವನಾಶ ಮಾಡುತ್ತೇವೆ.

## ಸಂದೀಪನ ಕಥೆ

### ೨

ಏನೋ ಕೆಡುಕಾಗಿದೆಯೆಂದು ನನಗೆ ತಿಳಿಯಿತು.

ನಾನು ಬಂದಾಗಿನಿಂದ ನಿಖಿಲನ ಕೋಣೆ ಅರ್ಧ ಹೆಂಗಸ ರದು ಅರ್ಧ ಗಂಡಸರದಾಗಿದೆ; ವಿಮಲೆಗೆ ಒಳಗಿನಿಂದಲೂ,

ನನಗೆ ಹೊರಗಿನಿಂದಲೂ ಪ್ರವೇಶವಿತ್ತು. ನಾವು ಸ್ವಲ್ಪ ನಿಧಾನ ದಿಂದ, ಸಂಯಮದಿಂದ ನಡೆದಿದ್ದರೆ ಬೇರೆಯವರ ಕಣ್ಣಿಗೆ ತಪ್ಪು ತೋರುತ್ತಿರಲಿಲ್ಲ. ಆದರೆ ನಮ್ಮ ಆವೇಶದಲ್ಲಿ ಪರಿಣಾಮ ಹೊಳೆಯಲಿಲ್ಲ.

ವಿಮಲೆ ನಿಖಿಲನ ಕೊಠಡಿಗೆ ಬಂದಾಗಲೆಲ್ಲಾ ನನಗದು ತಿಳಿಯುತ್ತದೆ. ಗಾಜಿನ ಬಳೆಗಳ ಸದ್ದುಗಳು, ಬೇರೆ ಸಣ್ಣ ಸದ್ದುಗಳು; ಅಗತ್ಯವಿಲ್ಲದ ರಭಸದಿಂದ ಮುಚ್ಚಿದ ಬಾಗಿಲು; ಪುಸ್ತಕದ ಬೀರುವಿನ ಬಾಗಿಲನ್ನೆಳೆದಾಗ ಆಗುವ ಸದ್ದು: ನಾನು ಬಂದಾಗ ವಿಮಲೆ ಅಲ್ಲಿ ಬಾಗಿಲಿಗೆ ಬೆನ್ನು ಮಾಡಿ ಯಾವುದೋ ಪುಸ್ತಕವನ್ನು ಹುಡುಕುತ್ತಿರುತ್ತಾಳೆ. ನಾನು ಸಹಾಯ ಮಾಡುವೆ ನೆಂದರೆ ಬೇಡವೆಂದು, ಬೇರೆ ವಿಚಾರಗಳನ್ನೆತ್ತುತ್ತಾಳೆ.

ಒಂದು ಅಶುಭ ಗುರುವಾರ ಇಂತಹ ಸದ್ದುಗಳನ್ನು ಕೇಳಿ ನಾನು ನನ್ನ ಕೊಠಡಿಯಿಂದ ಹೊರಟೆ. ಬಾಗಿಲಲ್ಲಿ ಇದ್ದ ಸೇವಕನನ್ನು ಲಕ್ಷಿಸದೆ ಮುಂದೆ ಹೋಗಲು, ಅವನು ಅಡ್ಡ ಬಂದು, "ಅಲ್ಲಿ ಹೋಗಬೇಡಿ," ಎಂದನು.

"ಏಕೆ?"

"ರಾಣಿ ತಾಯಿಯವರಿದ್ದಾರೆ."

"ಸರಿ. ಸಂದೀಪಬಾಬು ನೋಡಬೇಕೆಂದು ಅವರಿಗೆ ತಿಳಿಸು."

"ಅಪ್ಪಣೆಯಿಲ್ಲ."

ನನಗೆ ಕೋಪ ಬಂದು ಗಟ್ಟಿಯಾಗಿ, "ನನ್ನ ಅಪ್ಪಣೆಯಿದೆ. ಹೋಗಿ ಹೇಳು," ಎಂದೆ.

ಆಳಿಗೆ ಗಾಬರಿಯಾಯಿತು. ನನ್ನ ಕೈಹಿಡಿದು "ಬೇಡಿ ಸ್ವಾಮಿ," ಎಂದನು.

ಕೋಪದಿಂದ ಕೈಯನ್ನು ಕಿತ್ತುಕೊಂಡು ಒಂದೇಟುಕೊಟ್ಟೆ. ಅಷ್ಟರಲ್ಲಿ ವಿಮಲೆ ಬಂದಳು.

ಅವಳ ಕೋಪದ ಚಿತ್ರವನ್ನು ನಾನೆಂದಿಗೂ ಮರೆಯಲಾರೆನು. ಅವಳ ಸೌಂದರ್ಯವನ್ನು ಮೊದಲು ಗುರುತಿಸಿದವನು ನಾನೇ. ಅನೇಕರಿಗೆ ಅವಳಲ್ಲಿ ಸೌಂದರ್ಯ ಕಾಣುವುದಿಲ್ಲ. ಆಕೆಯ ಎತ್ತರದ ನಿಲುವು ಕಡ್ಡಿಯಂತೆ ತೋರಬಹುದು.

ನನಗೆ ಈ ಆಕೃತಿಯಲ್ಲಿ ಬಹಳ ಮೆಚ್ಚುಗೆ; ಆಕೆ ಬ್ರಹ್ಮನ ಹೃದಯದಿಂದ ಚಿಮ್ಮುವ ಜೀವರಸದ ಬುಗ್ಗೆಯಂತೆ ತೋರುತ್ತಿದ್ದಳು. ಆಕೆಯ ಬಣ್ಣ ಕಪ್ಪಾದರೂ, ಅದು ಕತ್ತಿಯ ಮೊನೆಯ ಹೊಳೆಯುವ ಕಪ್ಪು.

ಬಾಗಿಲಲ್ಲಿ ನಿಂತು, ಬೆರಳುಮಾಡಿ, " ನಂಕು, ಹೋಗು," ಎಂದು ಅಪ್ಪಣೆ ಮಾಡಿದಳು.

" ಅವನ ಮೇಲೆ ಕೋಪಿಸಿಕೊಳ್ಳಬೇಡಿ. ತಪ್ಪು ನನ್ನದಾದರೆ ಹೋಗುತ್ತೇನೆ."—ಎಂದೆ.

ನಡುಗುವ ದನಿಯಲ್ಲಿ ವಿಮಲೆ, " ಹೋಗಬೇಡಿ, ಬನ್ನಿ," ಎಂದಳು.

ಅದು ಬೇಡಿಕೆಯಲ್ಲ; ಅಪ್ಪಣೆ. ನಾನು ಒಳಗೆ ಹೋಗಿ ಕುಳಿತು ಬೀಸಣಿಗೆಯಿಂದ ಬೀಸಿಕೊಳ್ಳಲಾರಂಭಿಸಿದೆ. ವಿಮಲೆ ಕಾಗದದಲ್ಲಿ ಏನನ್ನೋ ಬರೆದು ಆಳಿಗಿತ್ತು, " ಇದನ್ನು ರಾಜರಿಗೆ ಕೊಡು," ಎಂದಳು.

ನಾನು, " ಕ್ಷಮಿಸಿ, ಸಂಯಮ ತಪ್ಪಿ ಆಳನ್ನು ಹೊಡೆದೆ" ಎಂದೆ.

" ಅವನಿಗಾಗಬೇಕಾದುದೇ."

" ಪಾಪ! ಅವನೇನು ಮಾಡಿದ? ಅಪ್ಪಣೆ ಪಾಲಿಸಿದ".

ನಿಖಿಲ ಬರಲು, ನಾನು ಸರ್ರನೆ ಎದ್ದು ಕಿಟಕಿಯ ಬಳಿ ನಿಂತೆ.

" ನಂಕು ಸಂದೀಪ ಬಾಬುವಿಗೆ ಅವಮಾನ ಮಾಡಿದ್ದಾನೆ." ವಿಮಲೆ ಹೇಳಿದಳು.

ನಿಖಿಲನ ಆಶ್ಚರ್ಯದಲ್ಲಿ ಕೃತ್ರಿಮವಿರಲಿಲ್ಲ. ಹೆಂಡತಿ ಯೆದುರಿಗೆ ಒಳ್ಳೆಯವನೂ ಕೂಡ ಸತ್ಯದ ಹೆಮ್ಮೆಯನ್ನು ಪ್ರಕಟಿಸ ಲಾರನು.

"ಸಂದೀಪಬಾಬು ಇಲ್ಲಿಗೆ ಬರುತ್ತಿದ್ದಾಗ ಅಡ್ಡಗಟ್ಟೆ ಅಪ್ಪಣೆ ಯಿಲ್ಲವೆಂದನು."

" ಯಾರಪ್ಪಣೆ ? " ನಿಖಿಲ ಕೇಳಿದನು.

ಅವಮಾನದಿಂದ ಕಣ್ಣೀರು ತುಂಬಿ ವಿಮಲೆ, " ನನಗೇನು ಗೊತ್ತು?" ಎಂದಳು.

ನಿಖಿಲ ಆಳನ್ನೇ ವಿಚಾರಿಸಲು, ಅವನು " ನನ್ನ ತಪ್ಪಲ್ಲ, ಅಪ್ಪಣೆಯಾಗಿತ್ತು," ಎಂದನು.

" ಯಾರಪ್ಪಣೆ ? "

" ದೊಡ್ಡಮ್ಮಾವರು. "

ಯಾರೂ ಕೆಲ ಹೊತ್ತು ಮಾತಾಡಲಿಲ್ಲ. ಆಳು ಹೋದ ಮೇಲೆ ವಿಮಲೆ, " ನಂಕೂನ ಕಳಿಸಿ ಬಿಡಿ," ಎಂದಳು.

ನಿಖಿಲನ ನ್ಯಾಯದೃಷ್ಟಿ ಇದನ್ನೊಪ್ಪಲಿಲ್ಲ. ಅವನಿ ಗೆಷ್ಟೋ ಚಿಂತೆ. ಆದರೆ ಈಗ ವಿಮಲೆ ಸುಮ್ಮನಿರುವ ವ್ಯಕ್ತಿ ಯಲ್ಲ. ಆಳನ್ನು ಶಿಕ್ಷಿಸಿ ಓರಗಿತ್ತಿಗೆ ಅವಮಾನ ಮಾಡಬೇಕು. ನಿಖಿಲ ಸುಮ್ಮನಿರಲು, ಗಂಡನ ನಿಸ್ಸಹಾಯಕತೆಗೆ ತಿರಸ್ಕಾರ ದಿಂದ ಅವಳ ಕಣ್ಣುಗಳು ಬೆಂಕಿ ಕಾರಿದುವು. ನಿಖಿಲ ಮಾತನಾ ಡದೆ ಹೊರಗೆ ಹೋದನು.

ಮಾರನೆಯ ದಿನ ನಂಕು ಕಾಣಲಿಲ್ಲ. ಅವನನ್ನು ಜಮೀನ್ದಾರಿಯ ಬೇರೊಂದೆಡೆಗೆ ಕೆಲಸಕ್ಕೆ ಕಳುಹಿಸಿರುವುದಾಗಿ ತಿಳಿಯಿತು. ಅವನ ಸಂಬಳ ಕಡಮೆ ಮಾಡಿರಲಿಲ್ಲ.

ಇದರ ವಿಚಾರವಾಗಿ ತೆರೆಯ ಹಿಂದೆ ಬೀಸುತ್ತಿದ್ದ ಬಿರು ಗಾಳಿಯ ಅರಿವು ನನಗೂ ಉಂಟಾಗುತ್ತಿತ್ತು. ನಿಖಿಲ ಎಲ್ಲ ರಂತಲ್ಲ ; ವಿಚಿತ್ರ ವ್ಯಕ್ತಿ—ಎಂದುಕೊಂಡೆ.

ಫಲಿತಾಂಶವಾಗಿ, ವಿಮಲೆ ಯಾವ ಮುಚ್ಚು ಮರೆಯೂ ಇಲ್ಲದೆ ನನಗೆ ಹೇಳಿ ಕಳುಹಿಸುತ್ತಿದ್ದಳು. ಬರಿಯ ಸಂಕೇತ ದಿಂದ ಸೂಚನೆಗೇರಿದೆವು. ಆಲೋಚಿಸುತ್ತಿದ್ದುದನ್ನು ಆಡಲಾ ರಂಭಿಸಿದೆವು. ರಾಜಮನೆತನದ ಸೊಸೆ ವಾಸಿಸುವ ತಾರಾ ಲೋಕಕ್ಕೆ ಸಾಧಾರಣ ಮನುಷ್ಯನಿಗೆ ಯಾವ ದಾರಿಯೂ ಇಲ್ಲ. ಸತ್ಯದ ಮುನ್ನಡೆಯಲ್ಲಿ, ನಿಧಾನವಾದರೂ ಖಂಡಿತವಾಗಿ, ಪದ್ಧ ತಿಯ ತೆರೆಗಳು ಒಂದೊಂದಾಗಿ ಕಳಚಿ, ಪ್ರಕೃತಿ ಬರಿದಾಗಿ ಗೋಚರಿಸುತ್ತಿತ್ತು.

ಸತ್ಯ! ಸತ್ಯವಲ್ಲದೆ ಮತ್ತೇನು? ಸ್ತ್ರೀಪುರುಷರ ಆಕರ್ಷಣೆ ಸತ್ಯನಾದುದು. ಸ್ಥೂಲ ಜಗತ್ತೆಲ್ಲಾ ಈ ಮಾತಿಗೆ ನಿದರ್ಶನ. ಮನುಷ್ಯರು ಮಾತಿನ ಪರದೆಯ ಹಿಂದೆ ಈ ಸತ್ಯವನ್ನು ಮರೆ ಮಾಡುತ್ತಾರೆ. ಪದ್ಧತಿ, ನಿಷೇಧಗಳಿಂದ ಅದನ್ನು ಮನೆಯ ಮಡಕೆ ಮಾಡುತ್ತಾರೆ. ಸೌರವ್ಯೂಹವನ್ನು ಕರಗಿಸಿ ಅಳಿಯನ ಗಡಿಯಾರದ ಸರಪಣಿ ಮಾಡಲು ಸಾಧ್ಯವೇ?

ಸತ್ಯದ ಕೂಗಿಗೆ ವಾಸ್ತವಿಕತೆ ಎಚ್ಚತ್ತರೆ ಎಷ್ಟು ಆರ್ತ ನಾದಗಳು! ಬಿರುಗಾಳಿಯೊಂದಿಗೆ ಹೆಣಗಾಡಲು ಸಾಧ್ಯವೆ? ಅದು ಉತ್ತರ ಕೊಡುವುದಿಲ್ಲ, ಅಲುಗಾಡಿಸಿ ಬಿಡುತ್ತದೆ.

ಈ ಸತ್ಯದ ನೋಟ ನನಗೆ ಸಂತೋಷ. ಹೆಜ್ಜೆಯ ನಡುಕ, ಮುಖತಿರುಗುವುದು, ಎಲ್ಲಾ ಸವಿ. ತನ್ನನ್ನೇ ವಂಚಿಸಿ ಕೊಳ್ಳುವ ವಿಮಲೆಯ ಮೋಸಗಳು ತುಂಬಾ ಸವಿ. ವಾಸ್ತವಿಕತೆ ಅವಾಸ್ತವದೊಡನೆ ಹೋರಾಡುವಾಗ ಮೋಸವೇ ಅದರ ಆಯುಧ. ವಾಸ್ತವಿಕತೆ ಒರಟೆಂದು ಅದರ ಶತ್ರುಗಳು ಕರೆ ಯುವುದರಿಂದ ಅದು ವೇಷ ಮರೆಸಿಕೊಳ್ಳಲೇ ಬೇಕು. ಅದು ಧೈರ್ಯವಾಗಿ, "ನಾನು ನಿಜ, ಅದರಿಂದ ಒರಟು. ನಾನು ದೇಹ; ನಾನು ರಾಗ; ನಾಚಿಕೆ ಬಿಟ್ಟ, ಕ್ರೂರಿಯಾದ ಹಸಿವು ನಾನು," ಎಂದು ಹೇಳುವ ಪರಿಸ್ಥಿತಿಯಲ್ಲಿಲ್ಲ.

ಈಗ ನನಗೆಲ್ಲಾ ಸ್ಪಷ್ಟವಾಗಿದೆ. ತೆರೆಯ ಹಿಂದೆ ಅನಾ ಹುತದ ಸೂಚನೆ ಕಾಣುತ್ತಿದೆ. ಅವಳ ಕುರುಳುಗಳ ನಡುವೆ ಬಯಕೆಯ ರಕ್ತರಂಜಿತವಾದ ದಾರ; ಬಿರುಗಾಳಿಯ ಕೆನ್ನಾಲಗೆ. ಅವಳ ಸೀರೆಯ ಪ್ರತಿಯೊಂದು ನಿರಿಯ ಕಾವು, ಅವಳ ಅಲಂಕಾರದ ಸೂಚನೆ, ಎಲ್ಲದರ ಅರಿವು ನನಗಿದೆ; ಅವಳಿಗೇ ಅರಿವಿಲ್ಲ.

ವಿಮಲೆಗೆ ವಾಸ್ತವವನ್ನೆದುರಿಸಲು ನಾಚಿಕೆ; ಆ ವಾಸ್ತವಕ್ಕೆ ಲೋಕ ಕೆಟ್ಟ ಹೆಸರು ಕೊಟ್ಟಿದೆ. ಅದರಿಂದಲೇ ಸ್ವರ್ಗಕ್ಕೆ ಸರ್ಪದಂತೆ ಸರಿದು ಸ್ತ್ರೀಯ ಕಿವಿಯಲ್ಲಿ ಪಿಸುಗುಟ್ಟಿ ಆಕೆಯಲ್ಲಿ ಅಸಮಾಧಾನದ ಮೊಳಕೆಯನ್ನು ಬಿತ್ತಬೇಕಾಯಿತು. ಆಮೇಲೆ ಸುಖವಿಲ್ಲ ; ಸಾವನ್ನು ಸ್ವಾಗತಿಸಬೇಕು.

ವಿಮಲೆ ಸ್ವಪ್ನರಾಜ್ಯದಲ್ಲಿದ್ದಾಳೆ. ಎಲ್ಲಿಗೆ ನಡೆಯುತ್ತಿದ್ದಾಳೆಂಬ ಅರಿವು ಅವಳಿಗಿಲ್ಲ. ಸಮಯ ಬರುವವರೆಗೆ ಅವಳನ್ನೆಚ್ಚರಗೊಳಿಸುವುದು ಕ್ಷೇಮವಲ್ಲ. ನಾನೂ ತಿಳಿಯದವನಂತಿರುವುದೇ ಲೇಸು.

ದೃಷ್ಟಿಯ ಅರ್ಥವನ್ನರಿಯದೆ, ಆದಿನ, ಊಟಮಾಡುತ್ತಿದ್ದಾಗ, ಅವಳು ನನ್ನನ್ನೇ ದೃಷ್ಟಿಸಿ ನೋಡುತ್ತಿದ್ದಳು. ನನ್ನ ದೃಷ್ಟಿಯನ್ನು ಸಂಧಿಸಿದಾಗ ನಾಚಿಕೆಯಿಂದ ತಲೆತಗ್ಗಿಸಿದಳು. ನಾನು, "ನನ್ನ ಹಸಿವನ್ನು ನೋಡಿ ನಿಮಗೆ ಆಶ್ಚರ್ಯವೇ ? ನಾನು ಹೊಟ್ಟೆ ಬಾಕ, ನನಗೆ ನಾಚಿಕೆಯೇ ಇಲ್ಲ," ಎಂದೆ.

ಅವಳು ಇನ್ನೂ ಹೆಚ್ಚು ನಾಚಿಕೆಯಿಂದ. "ಇಲ್ಲ, ಇಲ್ಲ" ಎಂದಳು.

"ಪರವಾ ಇಲ್ಲ. ಹೊಟ್ಟೆಬಾಕರನ್ನು ಕಂಡರೆ, ತಮ್ಮ ಕೈಗೆ ಸಿಕ್ಕಿದರೆಂದು ಹೆಂಗಸರಿಗೆ ಸಂತೋಷ. ಅದರಿಂದಲೇ ನನಗೆ ನಾಚಿಕೆಯೇ ಇಲ್ಲ. ನೀವೆಷ್ಟು ದೃಷ್ಟಿಸಿ ನೋಡಿದರೂ ನಾನು ಎಲ್ಲಾ ಪದಾರ್ಥಗಳನ್ನೂ ನುಂಗಿಯೇ ತೀರುತ್ತೇನೆ."

ಮತ್ತೊಂದು ದಿನ ಲೈಂಗಿಕ ವಿಚಾರವನ್ನೊಳಗೊಂಡ

ಪುಸ್ತಕವೊಂದನ್ನು ಕೋಣೆಯಲ್ಲಿ ಬಿಟ್ಟಿದ್ದೆ. ಮೂರನೆಯ ದಿನ ಅಲ್ಲಿಗೆ ಹೋದಾಗ ವಿಮಲೆ ಅದನ್ನು ಹಿಡಿದು ಕುಳಿತಿದ್ದಳು. ನನ್ನ ಸದ್ದನ್ನು ಕೇಳಿ ಕವನದ ಪುಸ್ತಕವೊಂದರ ಕೆಳಗೆ ಅದನ್ನು ಮರೆಸಿದಳು.

ನಾನು, "ಕವನಗಳನ್ನೋದುವುದಕ್ಕೆ ಹೆಂಗಸರಿಗೇಕೆ ನಾಚಿಕೆ? ನಾವು, ಪುರುಷರು — ವಕೀಲರು, ಕೆಲಸಗಾರರು, ಯಾರೇ ಆಗಲಿ, ಕವನ ಓದಲು ನಾಚಿಕೊಂಡರೆ ಸರಿ, ಬಾಗಿಲನ್ನು ಮುಚ್ಚಿ ಮಧ್ಯರಾತ್ರಿಯಲ್ಲಿ ಓದಬೇಕು. ಹೆಂಗಸರಿಗೂ ಪದ್ಯಕ್ಕೂ ನಿಕಟ ಸಂಬಂಧವಿದೆ. ಬ್ರಹ್ಮನೇ ಕವಿ; ಜಯದೇವ ಕವಿ ಆತನ ಪಾದಗಳ ಬಳಿ ಈ ದಿವ್ಯಕಲೆಯನ್ನು ಅಭ್ಯಾಸ ಮಾಡಿರಬೇಕು."

ವಿಮಲೆ ಉತ್ತರ ಕೊಡದೆ ಎದ್ದಳು.

"ಬೇಡ, ಬೇಡ. ಓದಿ. ನಾನಿಲ್ಲೊಂದು ಪುಸ್ತಕ ಬಿಟ್ಟಿದ್ದೆ. ತೆಗೆದುಕೊಂಡು ಹೋಗುತ್ತೇನೆ." ಎಂದು ಪುಸ್ತಕ ತೆಗೆದುಕೊಂಡು "ಸಧ್ಯ, ನೀವಿದನ್ನು ಓದಲಿಲ್ಲವಲ್ಲಾ. ಓದಿದ್ದರೆ ಬಯ್ಯುತ್ತಿದ್ದಿರಿ," ಎಂದೆ.

ವಿಮಲೆ "ಏಕೆ?" ಎಂದಳು.

"ಅದು ಪದ್ಯವಲ್ಲ. ಮುಚ್ಚುಮರೆಯಿಲ್ಲದ ವಾಸ್ತವಾಂಶಗಳು. ನಿಖಿಲ ಓದಿದ್ದರೆ ಚೆನ್ನಾಗಿತ್ತು."

ವಿಮಲೆ ಹುಬ್ಬು ಗಂಟಿಕ್ಕಿ "ಅದೇಕೆ ಹಾಗೆ ಆಶಿಸುತ್ತೀರಿ," ಎಂದಳು.

"ಅವನೂ ನಮ್ಮ ಹಾಗೆ ಗಂಡಸು. ಆದರೂ ಕನಸಿನ ಪ್ರಪಂಚದಲ್ಲಿರುತ್ತಾನೆ. ಸ್ವದೇಶಿಯನ್ನು ಕೂಡ ಛಂದೋಬದ್ಧವಾಗಿಡಲು ಹವಣಿಸುತ್ತಾನೆ. ನಾವು ಗದ್ಯದ ದೊಣ್ಣೆಯಿಂದ ಛಂದಸ್ಸನ್ನು ಕೊಲೆಮಾಡುವವರು."

"ಸ್ವದೇಶಿಗೂ ನಿಮ್ಮ ಪುಸ್ತಕಕ್ಕೂ ಏನು ಸಂಬಂಧ?"

" ಓದಿದ್ದರೆ ತಿಳಿಯುತ್ತಿತ್ತು. ನಿಖಿಲ ಸ್ವದೇಶಿಯ ವಿಚಾರದಲ್ಲೂ ಸೂಕ್ತಿಗಳನ್ನನುಸರಿಸಲು ಪ್ರಯತ್ನಿಸುತ್ತಾನೆ. ಮಾನವ ಸ್ವಭಾವವನ್ನು ಎಡವಿ ಬಯ್ಯಲಾರಂಭಿಸುತ್ತಾನೆ. ಮಾತುಗಳಿಗಿಂತ ಮೊದಲು ಮನುಷ್ಯ ಸ್ವಭಾವ ನಿರ್ಮಿತವಾಯಿ ತೆಂದೂ, ಅವು ನಾಶವಾದ ಮೇಲೂ ಇದು ಸ್ಥಿರವಾಗಿರುವು ದೆಂದೂ ಅವನು ತಿಳಿದುಕೊಳ್ಳುವುದಿಲ್ಲ." ವಿಮಲೆ ಗಂಭೀರ ವಾಗಿ, " ಮೇಲ್ಮಟ್ಟಕ್ಕೇರಲು ಪ್ರಯತ್ನಿಸುವುದೂ ಮಾನವ ಸ್ವಭಾವವಲ್ಲವೆ ? " ಎಂದಳು.

ನಾನು ಮನಸ್ಸಿನಲ್ಲಿಯೇ ನಕ್ಕು " ಇವು ನಿನ್ನ ಮಾತು ಗಳಲ್ಲ. ನಿಖಿಲನಿಂದ ಕಲಿತಿದ್ದೀ. ನೀನು ಸಹಜಳಾದ ಹೆಂಗಸು. ವಾಸ್ತವದ ಕರೆಗೆ ನಿನ್ನ ರಕ್ತ ಮಾಂಸಗಳು ಓಗೊಟ್ಟಿವೆ. ನೀನು ನಾಳ ನಾಳದಲ್ಲಿಯೂ ಜೀವ ಜ್ಯೋತಿಯಿಂದ ಉರಿಯುತ್ತಿದ್ದೀ ಯೆಂದು ನಾನರಿಯೆನೆ ? ನೀತಿ ಬೋಧೆಗಳೆಂಬ ಒದ್ದೆಬಟ್ಟೆಗಳಿಂದ ನಿನ್ನನ್ನು ಎಷ್ಟು ಕಾಲ ಶಾಂತಳಾಗಿರಿಸಬಲ್ಲರು," ಎಂದುಕೊಂಡೆ. ಗಟ್ಟಿಯಾಗಿ—" ಲೋಕದಲ್ಲಿ ಬಲಹೀನರ ಸಂಖ್ಯೆ ಹೆಚ್ಚು. ಅವರು ಈ ನೀತಿ ಬೋಧೆಗಳೆಂಬ ವಿಷವನ್ನು ಜನರ ಕಿವಿಯಲ್ಲಿ ತುಂಬುತ್ತಾರೆ. ಪ್ರಕೃತಿ ತಮಗೆ ಶಕ್ತಿಯನ್ನು ನಿರಾಕರಿಸಿದುದ ರಿಂದ ಬೇರೆಯವರನ್ನೂ ಶಕ್ತಿಹೀನರಾಗಿಸಲು ಪ್ರಯತ್ನಿಸುತ್ತಾರೆ."

ವಿಮಲೆ—" ಹೆಂಗಸರು ಅಬಲೆಯರು. ನಾವೂ ಶಕ್ತಿ ಹೀನರ ಗುಂಪಿಗೇ ಸೇರಬೇಕಲ್ಲವೆ ? " ಎಂದಳು.

ನಾನು ನಕ್ಕು, " ಹೆಂಗಸರು ಅಬಲೆಯರೇ ? ಗಂಡಸರು ನಿಮ್ಮನ್ನು ಮೋಸಗೊಳಿಸಲು ಹಾಗೆ ಹೇಳುತ್ತಾರೆ. ಹೆಂಗಸರೇ ಶಕ್ತರು. ಸ್ವತಂತ್ರರೆಂದು ಹೆಮ್ಮೆ ತೋರುವ ಗಂಡಸರು, ತಮ್ಮ ಪರಾಧೀನತೆಯನ್ನರಿತೇ ಇದ್ದಾರೆ. ತಮ್ಮ ಕಟ್ಟುಗಳನ್ನು ಪುರಾಣಗಳೆಂಬ ಹೆಸರಿನಿಂದ, ತಾವೇ ನಿರ್ಮಿಸಿಕೊಂಡಿದ್ದಾರೆ. ಆದರ್ಶವಾದದಿಂದ ಹೆಂಗಸರನ್ನು ಚಿನ್ನದ ಸಂಕಲೆಗಳನ್ನಾಗಿ

ಮಾಡಿ ತಮ್ಮ ದೇಹ ಮನಸ್ಸುಗಳನ್ನು ಬಂಧಿಸಿಕೊಂಡಿದ್ದಾರೆ. ತಾವೇ ನಿರ್ಮಿಸಕೊಳ್ಳದಿದ್ದರೆ ಮನುಷ್ಯರಿಗೆ ಕಟ್ಟುಗಳೆಲ್ಲಿತ್ತು ? ನೀವು, ಹೆಂಗಸರು, ವಾಸ್ತವವನ್ನು ಸೃಷ್ಟಿಸಿದ್ದೀರಿ. ನಿಮ್ಮ ಸ್ತನ್ಯಪಾನದಿಂದಲೇ ವಾಸ್ತವಿಕತೆ ಮೈದುಂಬಿದೆ."

ವಿಮಲೆ ಓದಿದವಳಾದುದರಿಂದ ನನ್ನ ಸಿದ್ಧಾಂತಗಳನ್ನು ತಕ್ಷಣ ಒಪ್ಪಲಿಲ್ಲ. "ಅದು ನಿಜವಾಗಿದ್ದರೆ ಹೆಂಗಸರು ಗಂಡಸರ ನ್ನಾಕರ್ಷಿಸುತ್ತಿರಲಿಲ್ಲ," ಎಂದಳು.

"ಹೆಂಗಸರಿಗೆ ಆ ಅಪಾಯ ಗೊತ್ತು. ಗಂಡಸರ ಮಾಯಾ ವಾದಗಳನ್ನೇ ಅವರಿಗೆ ಹಿಂದಕ್ಕೊಪ್ಪಿಸಿ ಮೋಸಗೊಳಿಸುತ್ತಾರೆ. ಊಟಕ್ಕಿಂತ ಹೆಚ್ಚಾಗಿ ಮದ್ಯವನ್ನೇ ಅಪೇಕ್ಷಿಸುವ ಗಂಡಸಿಗೆ ತಾವೇ ಮಾದಕ ಪದಾರ್ಥವಾಗುತ್ತಾರೆ. ಗಂಡಸಿಗಾಗಲ್ಲದಿದ್ದರೆ ಹೆಂಗಸಿಗೆ ನಟನೆಯ ಆವಶ್ಯಕತೆಯೇ ಇರಲಿಲ್ಲ."

"ನೀವೇಕೆ ಆ ಕಲ್ಪನೆಯನ್ನು ನಾಶಗೊಳಿಸಲು ತೊಂದರೆ ಪಡುತ್ತಿದ್ದೀರಿ ?"

"ಸ್ವಾತಂತ್ರ್ಯಕ್ಕಾಗಿ. ದೇಶ ಸ್ವತಂತ್ರವಾಗಬೇಕು. ಮಾನವ ಸಂಬಂಧಗಳೂ ಸ್ವತಂತ್ರವಾಗಬೇಕು."

೩

ನಿದ್ರೆಯಲ್ಲಿ ಸಂಚರಿಸುವವರನ್ನು ತಟ್ಟನೆ ಎಬ್ಬಿಸಬಾರದು. ಆದರೆ ನಿಧಾನ ಸಾಧ್ಯವಿಲ್ಲ. ಆ ದಿನ ಅತಿ ಧೈರ್ಯಮಾಡಿದೆ. ಆ ಅಭಿಪ್ರಾಯಗಳ ಮೊದಲ ಅನುಭವ ಸಹಿಸಲಸಾಧ್ಯವಾಗುವು ದೆಂದು ನಾನು ಬಲ್ಲೆ. ಆದರೆ ಹೆಂಗಸರ ವಿಚಾರದಲ್ಲಿ ದಿಟ್ಟತನ ಅಗತ್ಯ.

ನಾವು ಮಾತನಾಡುತ್ತಿದ್ದಾಗ ನಿಖಿಲನ ಮುದಿಗುರು ಚಂದ್ರನಾಥಬಾಬು ಅಲ್ಲಿ ಬಂದರು. ಈ ಸ್ಕೂಲು ಮೇಷ್ಟ್ರುಗಳಿಂದ ಲೋಕವಾಸವೇ ದುಸ್ಸಹ. ನಿಖಿಲನಂತಹವರಿಗೆ ಪ್ರಪಂಚ ಸದಾ

ಶಾಲೆಯೇ. ಈ ಶಾಲೆಯ ಅವತಾರ ಆ ದಿನ ಸಮಯಕ್ಕೆ ಸರಿಯಾಗಿ ಅಲ್ಲಿ ಬಂದ.

ಹುಡುಗತನ ಹೃದಯದ ಮೂಲೆಯಲ್ಲೇ ಹುದುಗಿರುತ್ತೆ. ನನಗೂ ಗಾಬರಿಯಾಯಿತು. ವಿಮಲೆಯಂತೂ ತರಗತಿಯ ಮೊದಲ ಹುಡುಗಿಯಂತೆ ಗಂಭೀರವಾಗಿ ಕುಳಿತಳು. ಇದ್ದಕ್ಕಿದ್ದಂತೆ ಅವಳಿಗೆ ಪರೀಕ್ಷೆಯ ನೆನಪುಂಟಾದ ಹಾಗಿತ್ತು. ಕೆಲವರು ಆಲೋಚನಾ ತರಂಗಗಳನ್ನು ಬದಲಾಯಿಸಲು ಕಾದಿರುತ್ತಾರೆ.

ಚಂದ್ರನಾಥ ಬಾಬು ಒಳಗೆ ಬಂದ ತಕ್ಷಣ ಹೊರಗೆ ಹೋಗಲು ಹವಣಿಸಿ, "ಕ್ಷಮಿಸಿ, ನಾನು—" ಎಂದು ಪ್ರಾರಂಭಿಸಿದರು. ಆತನ ಮಾತು ಮುಗಿಯುವುದರೊಳಗೆ ವಿಮಲೆ ಹತ್ತಿರ ಹೋಗಿ ನಮಸ್ಕರಿಸಿ, "ಹೋಗಬೇಡಿ ಕುಳಿತುಕೊಳ್ಳಿ," ಎಂದಳು. ಹೇಡಿ, ಮುಳುಗುವವಳಂತೆ ಆತನ ಸಹಾಯ ಕೋರಿದಳು.

ನನ್ನದೇ ತಪ್ಪಿರಬಹುದು. ಅದೂ ಹೆಂಗಸಿನ ಯುಕ್ತಿ ಇರಬಹುದು. ತನ್ನ ಬೆಲೆಯನ್ನು ಹೆಚ್ಚಿಸಿಕೊಳ್ಳಲು, "ನೀನು ನನ್ನ ಮೇಲೇನೂ ಪರಿಣಾಮ ಮಾಡಿಲ್ಲ. ಚಂದ್ರನಾಥಬಾಬುವಿನಲ್ಲಿ ಮರ್ಯಾದೆ ನನಗಿದೆ," ಎಂದು ಹೇಳಿದಂತಿತ್ತು. ಅಗತ್ಯವಾಗಿ ಮರ್ಯಾದೆ ಮಾಡು. ಮೇಷ್ಟ್ರುಗಳಿಗೆ ಅದರಲ್ಲಿ ತುಂಬಾ ಸಂತೋಷ. ನನಗೆ ಆ ಬರಿ ಮರ್ಯಾದೆಯಲ್ಲಿ ಸಂತೋಷವಿಲ್ಲ.

ಚಂದ್ರನಾಥಬಾಬು ಸ್ವ ದೇ ಶಿ ಯ ವಿಚಾರ ಪ್ರಾರಂಭಿಸಿದರು. ಮಾತನಾಡಲೆಂದು ಕೊಂಡೆ. ಮುದುಕ ಮಾತನಾಡಿ ಸುಮ್ಮನಾಗಬಹುದೆಂದು ಕೊಂಡೆ. ಸತ್ಯ ಪ್ರಪಂಚ ತನ್ನ ಹರಕು ನಾಲಗೆಯಿಂದ ದೂರವಿದೆಯೆಂಬುದನ್ನರಿಯದೆ, ತಾನೇ ಲೋಕ ಕರ್ತನೆಂದು ಕೊಳ್ಳುತ್ತಾನೆ ಮುದುಕ.

ಆದರೆ ನನಗೆ ತಾಳ್ಮೆಯಿಲ್ಲ. ಚಂದ್ರನಾಥಬಾಬು, "ಬೀಜ ಬಿತ್ತದೆ ನಾವು ಫಲವನ್ನಪೇಕ್ಷಿಸಿದರೆ," ಎಂದಾಗ ನಾನು "ಫಲ

ಯಾರಿಗೆ ಬೇಕು. ಗೀತಾಚಾರ್ಯನ ಅಪ್ಪಣೆಯಂತೆ ನಾವು ಕರ್ಮಾಧಿಕಾರಿಗಳೇ ಹೊರತು ಫಲಾಧಿಕಾರಿಗಳಲ್ಲ" ಎಂದೆ.

ಆತ "ಆದರೆ ನಿಮಗೇನು ಬೇಕು," ಎಂದರು.

"ಬಿತ್ತುವ ತೊಂದರೆಯಿಲ್ಲದ ಮುಳ್ಳು," ಎಂದೆ.

"ಮುಳ್ಳಿನಿಂದ ಬೇರೆಯವರಿಗೆ ಮಾತ್ರ ತೊಂದರೆಯಲ್ಲ. ನಮ್ಮ ಕಾಲಿಗೂ ಚುಚ್ಚಬಹುದು."

"ಅದೆಲ್ಲಾ ಬರಿ ಮಾತು. ಆದರೆ ನಮ್ಮ ಹೃದಯ ಸುಡುತ್ತಿದೆ. ಬೇರೆಯವರ ಕಾಲಿಗೆಂದು ಮುಳ್ಳು ಬಿತ್ತಬೇಕು. ನಮ್ಮ ಕಾಲಿಗೆ ಚುಚ್ಚಿದಾಗ ಪಶ್ಚಾತ್ತಾಪ ಪಡೋಣ. ಭಯ ವೇನು? ಸಾಯುವ ವೇಳೆಗೆ ತಣ್ಣಗಾಗಲು ಸಮಯವಿದೆ. ಚಂದ್ರನಾಥಬಾಬು ನಕ್ಕರು. "ಕುದಿಯಿರಿ. ಆದರೆ ಅದು ಒಂದು ಕಾರ್ಯ, ದಿಟ್ಟತನ ಎಂದುಕೊಳ್ಳಬೇಡಿ. ಜನಾಂಗಗಳು ಮುಂದು ವರಿದಿರುವುದು ಕೆಲಸದಿಂದ, ಉದ್ರೇಕದಿಂದಲ್ಲ. ಕೆಲಸ ಮಾಡ ದವರು, ತಟ್ಟನೆ ಎಚ್ಚತ್ತಾಗ, ಅಡ್ಡದಾರಿ ಹುಡುಕುತ್ತಾರೆ."

ನಾನು ತಕ್ಕ ಪ್ರತ್ಯುತ್ತರ ಸಿದ್ಧಪಡಿಸಿಕೊಳ್ಳುತ್ತಿದ್ದಾಗ ನಿಖಿಲ ಬಂದನು. ಚಂದ್ರನಾಥಬಾಬು ಎದ್ದು ವಿಮಲೆಯೊಡನೆ, "ನಾನು ಹೋಗುತ್ತೇನೆ, ತಾಯಿ, ಕೆಲಸವಿದೆ," ಎಂದರು.

ನಿಖಿಲನಿಗೆ ನನ್ನ ಕೈಲಿದ್ದ ಪುಸ್ತಕ ತೋರಿಸಿ "ಇದನ್ನು ವಿಮಲೆಗೆ ತಿಳಿಸುತ್ತಿದ್ದೆ," ಎಂದೆ.

ಶೇಕಡ ತೊಂಬತ್ತೊಂಬತ್ತು ಮಂದಿಯನ್ನು ಸುಳ್ಳಿನಿಂದ ಮೋಸಗೊಳಿಸಬೇಕು. ಆದರೆ ಈ ಹುಡುಗುತನವನ್ನು ದಾಟದವ ನನ್ನು ಮೋಸಗೊಳಿಸಲು ನಿಜವೇ ಬೇಕು. ನಿಖಿಲ ಪುಸ್ತಕದ ಹೆಸರನ್ನು ಸುಮ್ಮನೆ ಓದಿದನು. "ಈ ಬರೆಹಗಾರರು ಪ್ರಪಂಚ ವನ್ನು ಮುಸುಕಿರುವ ಮಾತಿನ ಮಾಯೆಯ ಧೂಳನ್ನು ಗುಡಿಸಿ ಹಾಕುತ್ತಿದ್ದಾರೆ. ನೀನೂ ಓದಿದರೆ ವಾಸಿ,"—ಎಂದೆ.

ನಿಖಿಲ "ನಾನು ಓದಿದ್ದೇನೆ," ಎಂದನು.

" ನಿನ್ನ ಅಭಿಪ್ರಾಯವೇನು ? "

" ಆಲೋಚನಾ ಪರರಿಗೆ ಪರವಾ ಇಲ್ಲ. ಅದಲ್ಲದವರಿಗೆ ವಿಷ."

" ಹಾಗೆಂದರೇನು ? "

" ಸಮಾನತೆಯನ್ನು ಉಪದೇಶಿಸುವವರು ಕಳ್ಳರಾಗ ಬಾರದು. ಆಗ ಸುಳ್ಳು ಹೇಳಿದಂತಾಗುತ್ತೆ. ಉದ್ರೇಕ ಸ್ಥಿತಿಯಲ್ಲಿ ಈ ಪುಸ್ತಕ ಸರಿಯಾಗಿ ಅರ್ಥವಾಗುವುದಿಲ್ಲ."

" ಉದ್ರೇಕ ದಾರಿ ತೋರುವ ದೀಪ ಅದು ಸುಳ್ಳೆಂದರೆ, ಕಣ್ಣನ್ನು ಕಿತ್ತರೆ ಚೆನ್ನಾಗಿ ಕಾಣುವುದೆಂದ ಹಾಗೆ ! "

ನಿಖಿಲನಿಗೆ ಕೋಪವೇರುತ್ತಿತ್ತು. " ನಿಗ್ರಹವಿದ್ದರೆ ಮಾತ್ರ ಉದ್ರೇಕ ಸತ್ಯ. ನೋಡಬೇಕಾದುದನ್ನು ಕಣ್ಣಿನೊಳಕ್ಕೆ ಒತ್ತಿದರೆ ನೋವುಂಟಾಗುತ್ತದೆ ; ಕಾಣುವುದಿಲ್ಲ. ಹಾಗೆಯೇ ಇಂದ್ರಿಯ ಗಳ ಉದ್ರೇಕ ಮನಸ್ಸಿಗೂ, ಅಪೇಕ್ಷಿಸಿದ ವಸ್ತುವಿಗೂ ಅಂತರ ಬಿಡದೆ ನಾಶವಾಗುತ್ತದೆ."

" ಸತ್ಯವನ್ನರಿಯದೆ ಬಣ್ಣದ ಮಾತನ್ನಾಡುತ್ತೀ. ಇದರಿಂದ ನಿನ್ನ ಮನಸ್ಸನ್ನು ಮಾಯೆ ಮುಸುಕಿ ಕೆಲಸಕ್ಕೆ ಶಕ್ತಿಯಿಲ್ಲ ದಂತಾಗುತ್ತದೆ."

" ಆವಶ್ಯಕವಿಲ್ಲದ ಶಕ್ತಿಯಿಂದ ಕೆಲಸವಾಗುವುದಿಲ್ಲ. ಈ ಚರ್ಚೆಯಿಂದ ಏನು ಪ್ರಯೋಜನ ? ಸತ್ಯ ಮರೆಯಾಗುತ್ತದೆ."—

ವಿಮಲೆ ಒಂದು ಮಾತನ್ನೂ ಆಡಲಿಲ್ಲ. ನನ್ನ ವರ್ತನೆ ಯಿಂದ ಬೆದರಿ, ಅನುಮಾನಗಳನ್ನು ಪರಿಹರಿಸಲು ಮೇಷ್ಟ್ರನ್ನೇ ಆಶ್ರಯಿಸುತ್ತಿದ್ದಳೆ ? ಆದರೆ ಇಂತಹ ಎಚ್ಚರಿಕೆ ಅಗತ್ಯ. ಸ್ಥಿರ ವೆಂದಿರುವ ವಸ್ತುಗಳನ್ನು ಅಲುಗಾಡಿಸಲು ಸಾಧ್ಯವೆಂಬ ತಿಳಿವಳಿಕೆ ಬರಬೇಕು. ನಿಖಿಲನೊಡನೆ, " ನಾವು ಈ ವಿಚಾರ ಚರ್ಚಿಸಿ ದುದು ಒಳ್ಳೆಯದಾಯಿತು. ಇಲ್ಲದಿದ್ದರೆ ವಿಮಲೆಗೆ ಈ ಪುಸ್ತಕ ಕೊಡುತ್ತಿದ್ದೆ." ಎಂದೆ.

ನಿಖಿಲ :— "ತಪ್ಪೇನು ? ನಾನು ಓದಬಹುದಾದರೆ ವಿಮಲೆ ಏಕೆ ಓದಕೂಡದು ? ನನ್ನ ವಾದವೇನೆಂದರೆ ಪಾಶ್ಚಾತ್ಯರು ಎಲ್ಲವನ್ನೂ ವಿಜ್ಞಾನ ದೃಷ್ಟಿಯಿಂದ ನೋಡುತ್ತಾರೆ. ಆದರೆ ಮನುಷ್ಯ ಆರೋಗ್ಯ ಶಾಸ್ತ್ರ, ಪ್ರಾಣಿಶಾಸ್ತ್ರ, ಮನಶ್ಶಾಸ್ತ್ರ ಸಮಾಜ ಶಾಸ್ತ್ರ, ಯಾವುದೂ ಅಲ್ಲ. ಆದನ್ನು ಮರೆಯಬೇಡ. ಮನುಷ್ಯನು ಈ ಎಲ್ಲ ಶಾಸ್ತ್ರಗಳನ್ನು ಮೀರಿದ ವ್ಯಕ್ತಿ. ನನ್ನನ್ನು ಶಾಲೆಯ ಹುಡುಗನೆಂದು ನಗುವ ನೀನೇ ಆ ಸ್ಥಿತಿಯನ್ನು ದಾಟಿಲ್ಲ. ಮನುಷ್ಯನ ನಿಜಸ್ಥಿತಿಯನ್ನು ವಿಜ್ಞಾನೋಪಾಧ್ಯಾಯರಿಂದ ತಿಳಿಯಲು ಪ್ರಯತ್ನಿಸುತ್ತೀ."

ನಾನು :—ಇಷ್ಟು ಉದ್ವೇಗಕ್ಕೇನು ಕಾರಣ ?

ನಿಖಿಲ :—ನೀನು ಮನುಷ್ಯನನ್ನು ಅವಮಾನ ಪಡಿಸುತ್ತಿರುವುದರಿಂದ.

ನಾನು :—ಹಾಗೆಂದು ಕೊಳ್ಳಲು ಕಾರಣವೇನು ?

ನಿಖಿಲ :— ನನ್ನ ಭಾವನೆಗಳಿಗಾದ ಅವಮಾನದಿಂದ ನೀನು ಮಾನವನಲ್ಲಿರುವ ಮಹತ್ವ, ನಿಃಸ್ವಾರ್ಥ ಬುದ್ಧಿ, ಸೌಂದರ್ಯ, ಇವುಗಳನ್ನು ನಾಶ ಪಡಿಸುತ್ತಿದ್ದೀ.

ನಾನು :—ನಿನಗೆ ಹುಚ್ಚು.

ನಿಖಿಲ ಎದ್ದು ನಿಂತು, "ಸಂದೀಪ್, ನಾನು ಸ್ಪಷ್ಟವಾಗಿ ಹೇಳುತ್ತೇನೆ. ಮನುಷ್ಯ ಸಾಯುವಷ್ಟು ನೋವನ್ನು ಸಾಯದೆ ಅನುಭವಿಸಬಲ್ಲ. ಆದರಿಂದಲೇ ಎಲ್ಲವನ್ನೂ ಅರಿತಿದ್ದರೂ, ಅನುಭವಿಸಲು ಸಿದ್ಧನಾಗಿದ್ದಾನೆ," ಎಂದು ಹೇಳಿ ಅವಸರದಿಂದ ಹೊರಗೆ ಹೋದನು.

ಅವನು ಹೋದ ದಾರಿಯನ್ನೇ ನಾನು ನೋಡುತ್ತಿರಲು ಪುಸ್ತಕ ಬಿದ್ದ ಸದ್ದಾಯಿತು. ವಿಮಲೆ ಅವನನ್ನು ಹಿಂಬಾಲಿಸುತ್ತಿದ್ದಳು.

ಈ ನಿಖಿಲ ಒಬ್ಬ ವಿಚಿತ್ರವ್ಯಕ್ತಿ. ಮನೆ ನಾಶವಾಗುತ್ತಿದೆ

ಯೆಂದು ತಿಳಿದೂ ನನ್ನನ್ನೇಕೆ ಸಾಗಿಸುವುದಿಲ್ಲ? ವಿಮಲೆಯ ಸೂಚನೆಗೆ ಕಾದಿದ್ದಾನೆ. ವಿಮಲೆ ತಮ್ಮ ಮದುವೆ ತಪ್ಪೆಂದು ಹೇಳಿದ್ದರೆ ಒಪ್ಪಿಕೊಳ್ಳುತ್ತಾನೆ. ತಪ್ಪನ್ನೊಪ್ಪಿಕೊಳ್ಳುವುದು ಮಹಾ ತಪ್ಪೆಂದು ತಿಳಿಯುವ ಶಕ್ತಿ ಅವನಿಗಿಲ್ಲ. ಆಲೋಚನೆಗಳು ದೌರ್ಬಲ್ಯಕ್ಕೆ ಅವಕಾಶಕೊಡುವುವೆಂಬುದಕ್ಕೆ ಅವನು ಸಾಕ್ಷಿ. ನಾನು ಅಂತಹ ಭ್ರಾಂತಿಯ ಮನುಷ್ಯನನ್ನೆಲ್ಲೂ ನೋಡಿಲ್ಲ. ಅವನು ಸತ್ಯ ಪ್ರಪಂಚದ ವ್ಯಕ್ತಿಯಂತೆ ಇರುವುದು ಹಾಗಿರಲಿ—ಕತೆಯ ಪಾತ್ರದಂತೆ ಕೂಡ ಇಲ್ಲ.

ಇನ್ನು ವಿಮಲೆ? ಆಕೆಯ ಸ್ವಪ್ನಪ್ರಪಂಚ ಇಂದಿಗೆ ಕೊನೆಗೊಂಡಿತೆಂದು ಕಾಣುತ್ತದೆ. ತಾನು ತೇಲಿಹೋಗುತ್ತಿರುವ ಪ್ರವಾಹವೆಂತಹುದೆಂಬ ಅರಿವುಂಟಾಗಿದೆ. ಈಗ ಮುಂದ ವರಿಯಬೇಕು, ಇಲ್ಲ ಹಿಂದೆಗೆಯಬೇಕು. ಒಂದು ಹೆಜ್ಜೆ ಮುಂದಕ್ಕಿಟ್ಟು, ಒಂದು ಹೆಜ್ಜೆ ಹಿಂದಕ್ಕೆ ಸರಿಯುವಳೇನೋ. ನನಗೆ ಅದರಿಂದ ಗಾಬರಿಯಿಲ್ಲ. ಉರಿಯೆದ್ದಿರುವಾಗ ಈ ಓಡಾಟ ಜ್ವಾಲೆಯನ್ನು ಹೆಚ್ಚಿಸುತ್ತದೆ. ಈಗ ಆಗಿರುವ ಹೆದರಿಕೆ ಉದ್ರೇಕವನ್ನು ಹೆಚ್ಚಿಸುತ್ತದೆ.

ನಾನೂ ಹೆಚ್ಚು ಮಾತನಾಡದೆ ಓದುವುದಕ್ಕೆ ಕೆಲವು ಆಧುನಿಕ ಪುಸ್ತಕಗಳನ್ನು ಕೊಡುತ್ತೇನೆ. ಉದ್ರೇಕವನ್ನೊಪ್ಪಿಕೊಂಡು ಪೂಜಿಸುವುದೇ ನವೀನತೆಯ ಲಕ್ಷಣವೆಂದು ಅವಳು ನಂಬಿದರೆ ಸರಿ. ಅದು ಅವಮಾನವಲ್ಲವೆಂದೂ, ಸಂಯಮ ಗೌರವಾರ್ಹವಲ್ಲವೆಂದೂ ತಿಳಿದರೆ ಸರಿ. ನವೀನತೆಯಲ್ಲಿ ಅವಳು ಶಕ್ತಿ ಕಾಣುವಳು.

ಹೇಗಾದರೂ ಆಗಲಿ, ಈ ನಾಟಕವನ್ನು ಕಡೆಯತನಕ ಆಡಿಬಿಡಬೇಕು. ನಾನು ಚಪ್ಪಾಳೆ ಬಡಿಯುವ ಬರಿಯ ಪ್ರೇಕ್ಷಕನಲ್ಲ. ನನ್ನ ಹೃದಯ ಕಿತ್ತುಬರುತ್ತಿದೆ, ನರನರಗಳೂ ಮಿಡಿಯುತ್ತಿವೆ. ದೀಪವಾರಿಸಿ ಮಲಗಿದಾಗ ಸ್ಪರ್ಶ, ನೋಟ, ಮಾತು

ಗಳು ಕತ್ತಲನ್ನು ತುಂಬುತ್ತವೆ. ಪ್ರಾತಃಕಾಲದಲ್ಲಿ ಎದ್ದಾಗ ಆಸೆಯಿಂದ ಹೃದಯ ನರ್ತಿಸುತ್ತದೆ. ರಕ್ತ ಸಂಗೀತಧ್ವನಿಗೆ ಚಲಿಸುತ್ತದೆ....

ಚಿತ್ರದ ಕಟ್ಟಿನಲ್ಲಿ ನಿಖಿಲನ ಚಿತ್ರದೊಡನೆ ವಿಮಲೆಯ ಚಿತ್ರವಿದ್ದಿತು. ನಾನು ವಿಮಲೆಯ ಚಿತ್ರವನ್ನು ತೆಗೆದುಕೊಂಡು ಅವಳೊಡನೆ "ನಿನ್ನ ಲೋಭಿತನದಿಂದ ನಾನು ಕದಿಯಬೇಕಾಯಿತು. ಆದುದರಿಂದ ನೀನೂ ನನ್ನ ಪಾಪದಲ್ಲಿ ಭಾಗಿಯಾಗಬೇಕು," ಎಂದೆ.

ಅವಳು ಸ್ವಲ್ಪ ನಕ್ಕು "ಆ ಚಿತ್ರ ಚನ್ನಾಗಿರಲಿಲ್ಲ," ಎಂದಳು.

"ಏನುಮಾಡುವುದು ? ಅದು ಬರಿಯ ಚಿತ್ರ. ಅದರಿಂದಲೇ ನಾನು ತೃಪ್ತನಾಗಬೇಕು."

ವಿಮಲೆ ಒಂದು ಪುಸ್ತಕದ ಪುಟಗಳನ್ನು ತಿರುವಿ ಹಾಕತೊಡಗಿದಳು.

ನಾನು :—"ನಿನಗೆ ಅಸಮಾಧಾನವಾದರೆ ಆ ಬರಿಯ ಜಾಗವನ್ನು ನಾನು ತುಂಬಬೇಕು," ಎಂದೆ.

ಈ ದಿನ ನನ್ನ ಚಿಕ್ಕಂದಿನ ಚಿತ್ರವನ್ನಲ್ಲಿಟ್ಟೆ. ಆಗ ನನ್ನ ಮುಖ ಇನ್ನೂ ಎಳೆಯದಾಗಿತ್ತು. ಅಂತೆಯೇ ನನ್ನ ಮನಸ್ಸು. ಆಗ ಈ ಪ್ರಪಂಚದ, ಮುಂದಿನ ಲೋಕದ ವಿಚಾರಗಳಲ್ಲಿ ಭ್ರಾಂತಿಗಳಿದ್ದುವು. ನಂಬಿಕೆ ಮೋಸಗೊಳಿಸಿದರೂ ನಂಬಿದ ವ್ಯಕ್ತಿಯ ಮುಖಕ್ಕೆ ಕಳೆ ಕೊಡುತ್ತದೆ.

ನನ್ನ ಚಿತ್ರ ನಿಖಿಲನ ಚಿತ್ರದ ಪಕ್ಕದಲ್ಲಿ! ನಾವಿಬ್ಬರೂ ಬಾಲ್ಯ ಸ್ನೇಹಿತರಲ್ಲವೆ ?

---

## ಅಧ್ಯಾಯ ೪

# ನಿಖಿಲನ ಕಥೆ

೧

ನಾನು ಎಂದೂ ಆತ್ಮ ಪರೀಕ್ಷೆ ಮಾಡಿಕೊಂಡವನಲ್ಲ. ಆದರೆ ಈಗೀಗ ವಿಮಲೆಯ ದೃಷ್ಟಿಯಲ್ಲಿ ನಾನೆಂತಹವನಿರ ಬಹುದೆಂದು ಆಲೋಚಿಸುತ್ತೇನೆ. ನಾನು ಎಲ್ಲಾ ವಿಚಾರ ಗಳನ್ನೂ ಗಂಭೀರವಾಗಿ ದೃಷ್ಟಿಸುವುದರಿಂದ ಬಹು ಬೇಸರಿಕೆಯ ವ್ಯಕ್ತಿಯಾಗಿ ಕಾಣಬಹುದು.

ಪ್ರಪಂಚವನ್ನು ಕಣ್ಣೀರಿನಿಂದ ಮುಳುಗಿಸುವುದಕ್ಕಿಂತ ನಗುವಿನಲ್ಲಿ ತೇಲಿಸುವುದು ಒಳ್ಳೆಯದು. ಪ್ರಪಂಚ ಮುಂದುವರಿ ಯುವುದು ಹಾಗೆ. ಮನೆಯಲ್ಲಿ, ಹೊರಗೆ, ಹರಡಿರುವ ಗೋಳನ್ನು ಭ್ರಾಂತಿಯೆಂದು ಮರೆಯುವುದರಿಂದಲೇ ನಮಗೆ ಊಟದಲ್ಲಿ ರುಚಿ, ನಿದ್ರೆಯಲ್ಲಿ ಶಾಂತಿ. ಅವುಗಳನ್ನು ಕ್ಷಣಮಾತ್ರ ನಿಜವೆಂದು ತಿಳಿದರೆ ಊಟವೆಲ್ಲಿಯದು, ನಿದ್ರೆಯೆಲ್ಲಿಯದು ?

ನಾನು ಒಂದು ನೆರಳೆಂಬ ಭಾವನೆಯಿಲ್ಲದುದರಿಂದಲೇ ನನ್ನ ಹೃದಯ ಸದಾ ದುಃಖಭಾರದಿಂದ ಕುಗ್ಗಿರುವುದು.

ನೀನೂ ಜಗತ್ತಿನ ಒಂದು ಭಾಗವೆಂದು ಭಾವಿಸಿಕೊಳ್ಳ ಕೂಡದೆ ? ವಿಶಾಲವಾದ, ಅನಂತವಾದ ಜೀವನದಲ್ಲಿ ವಿಮಲೆ ನಿನಗೇನಾಗಬೇಕು ? ಹೆಂಡತಿಯೆ ? ಹಾಗೆಂದರೇನು ? ನೀನೇ ಉಸಿರುತುಂಬಿ ದೊಡ್ಡದಾಗಿ ಮಾಡಿ, ಹಗಲು ರಾತ್ರಿ ಕಾದು ಕೊಂಡಿದ್ದರೂ, ಮುಟ್ಟಿದರೆ ಒಡೆಯುವ ಒಂದು ನೀರ್ಗುಳ್ಳೆ !

ನನ್ನ, ನನ್ನ ಸ್ವಂತ, ಹೆಂಡತಿ ! ಆಕೆ—“ ಇಲ್ಲ, ನಾನು ನನ್ನವಳು ” ಎಂದರೆ ನಾನೇನೆಂದು ಉತ್ತರ ಕೊಡಬೇಕು ? ” “ ಅದು ಹೇಗೆ ? ನೀನು ನನ್ನವಳಲ್ಲವೆ ? ” ಎಂದಲ್ಲವೆ !

‘ ನನ್ನ ಹೆಂಡತಿ ’—ಅದೆಂತಹ ವಾದ, ಎಂತಹ ಸತ್ಯ ! ಒಂದು ವ್ಯಕ್ತಿತ್ವವನ್ನು ಆ ಹೆಸರಿನಲ್ಲಡಗಿಸಲಾದೀತೆ ?

ನನ್ನ ಹೆಂಡತಿ !—ಹೃದಯದಿಂದ ಜಾರಿ ಧೂಳಿನಲ್ಲಿ ಬೀಳ ದಂತೆ ಹಿಡಿದು, ಜೀವನದಲ್ಲಿ ಪವಿತ್ರವಾದುದು, ಪ್ರಿಯವಾದುದು ಎಲ್ಲವನ್ನೂ ಆ ಸಣ್ಣ ಮಾತಿನಲ್ಲಿ ತುಂಬಿಕೊಳ್ಳಲಿಲ್ಲವೆ? ಆ ಗುಡಿಯಲ್ಲಿ ಎಷ್ಟು ಪೂಜೆಯ ಧೂಪ, ಪ್ರೀತಿಯ ಸಂಗೀತ, ಯೌವನದ ಪುಷ್ಪಗಳನ್ನು ನಾನು ಸಲ್ಲಿಸಿಲ್ಲ? ಕಾಗದದ ದೋಣಿಯಂತೆ ಅವಳು ಬಚ್ಚಲು ನೀರಿಗೆ ತೇಲಿ ಹೋದರೆ— ನಾನು ಕೂಡ........?

ಪುನಃ ನನ್ನ ಗಾಂಭೀರ್ಯ !....' ಬಚ್ಚಲು ! ', ' ಚರಂಡಿ,' —ಇವೆಲ್ಲ ಏನು? —ಅಸೂಯೆಯ ಮಾತುಗಳು—ವಾಸ್ತವ ಜಗತ್ತನ್ನು ಬದಲಾಯಿಸಲಾರವು. ವಿಮಲೆ ನನ್ನವಳಾಗದಿದ್ದರೆ, —ಅಲ್ಲ ! ರೇಗಿ, ಕೂಗಿ, ಚರ್ಚಿಸಿದರೆ ನನ್ನವಳೆಂದು ಸಿದ್ಧಾಂತ ಮಾಡಲಾಗುವುದೆ? ನನ್ನ ಹೃದಯ ಸೀಳಿದರೆ ಹೋಗಲಿ ! ಅದ ರಿಂದ ಜಗತ್ತಾಗಲಿ, ನಾನಾಗಲಿ, ನಾಶವಾಗುವುದಿಲ್ಲ. ಜಗತ್ತಿನಲ್ಲಿ ತಾನು ಕಳೆದುಕೊಳ್ಳುವ ವಸ್ತುಗಳಿಗಿಂತ ಹೆಚ್ಚಿನ ವ್ಯಕ್ತಿ ಮನುಷ್ಯ. ಕಣ್ಣೀರಿನ ಸಾಗರಕ್ಕೂ ಎಲ್ಲೆಯಿದೆ, ಇರದಿದ್ದರೆ ಯಾರೂ ಅಳುತ್ತಿರಲಿಲ್ಲ.

ಸಮಾಜ. ಅದರ ವಿಚಾರ ಅದಕ್ಕೇ ಇರಲಿ. ನಾನು ಅಳುವುದು ನನಗಾಗಿ, ಸಮಾಜಕ್ಕಾಗಿ ಅಲ್ಲ. ವಿಮಲೆ ನನ್ನವ ಳಾಗದಿದ್ದರೆ, ಸಮಾಜದಲ್ಲಿ ನನ್ನ ಹೆಂಡತಿ ಇಲ್ಲದಿದ್ದರೇನು?

ಅನುಭವಿಸಬೇಕು. ಆದರೆ ಒಂದು ವಿಧವಾದ ಆತ್ಮ ಶಿಕ್ಷೆಯಿಂದ ತಪ್ಪಿಸಿಕೊಳ್ಳಬೇಕು. ಯಾರ ಅಲಕ್ಷ್ಯದಿಂದಲೂ ನನ್ನ ಜೀವನ ಬೆಲೆಯನ್ನು ಕಳೆದುಕೊಳ್ಳಬಾರದು. ಸಂಸಾರದ ಸಂಕುಚಿತ ಪ್ರಪಂಚವನ್ನು ಕೊಳ್ಳುವ ಸಣ್ಣ ಬೆಲೆ, ನನ್ನ ಜೀವನ ವಲ್ಲ. ಸ್ವಂತ ಸುಖ ಸಂತೋಷಗಳ ಆಗು ಹೋಗುಗಳಲ್ಲಿ ಅದರ ವಿಸ್ತಾರ ವ್ಯಾಪಾರ ಮುಗಿಯುವುದಿಲ್ಲ.

ನಾನು ವಿಮಲೆಗೆ ತೊಡಿಸಿದ ಆದರ್ಶ ಅಲಂಕಾರಗಳನ್ನು

ತೆಗೆಯುವ ಕಾಲ ಬಂದಿದೆ. ಆ ವಿಗ್ರಹಾರಾಧನೆ ನನ್ನ ದೌರ್ಬ ಲ್ಯದ ಚಿಹ್ನೆ. ದುರಾಸೆಯಿಂದ, ನನ್ನ ಆನಂದವನ್ನು ಹೆಚ್ಚಿಸಿ ಕೊಳ್ಳಲು ವಿಮಲೆಯನ್ನು ದೇವತೆಯಾಗಿ ಮಾಡಿವೆ. ಆದರೆ ಅವಳು ವಿಮಲೆ. ನನ್ನ ಸಂತೋಷಕ್ಕಾಗಿ ಅವಳು ದೇವತೆಯಾಗ ಬೇಕೆಂದಿಚ್ಛಿಸುವುದು ಹುಚ್ಚುತನ. ನನ್ನ ಕಲ್ಪನಾದರ್ಶವನ್ನು ತೃಪ್ತಿಪಡಿಸಲು ಭಗವಂತ ದೇವತೆಗಳನ್ನು ಸೃಷ್ಟಿಸಲಾದೀತೆ ?

ನಾನು ವಿಮಲೆಯ ಜೀವನದಲ್ಲಿ ಒಂದು ಆಕಸ್ಮಿಕ ಘಟನೆ. ಆಕೆಯ ಸ್ವಭಾವ ಸಂದೀಪನಂತಹವರಿಂದಲೇ ತೃಪ್ತಿಗೊಳ್ಳ ಬಹುದು. ಆದರೆ ನಾನು ಅವಳಿಗೆ ತಕ್ಕವನಲ್ಲವೆಂದು ಒಪ್ಪಿ ಕೊಳ್ಳಲಾರೆ. ಸಂದೀಪನ ಗುಣಗಳಿಂದ ನಾನೂ ಮೋಹಿತ ನಾಗಿದ್ದೆ; ಆದರೆ ಅವನು ನನಗಿಂತ ಹಿರಿಯ ವ್ಯಕ್ತಿಯಲ್ಲವೆಂದು ಖಂಡಿತವಾಗಿ ತಿಳಿದಿದ್ದೇನೆ. ಈದಿನ ವಿಜಯಮಾಲಿಕೆ ಅವನಿಗೆ ಸಿಕ್ಕಿದ್ದರೆ, ವಿಧಾತ ಟೀಕೆಗೆ ಸಿಕ್ಕಲೇಬೇಕು.

ಇದು ಒಣ ಜಂಭವಲ್ಲ. ನಿರಾಸೆಯಲ್ಲಿ ಮುಳುಗದಿರ ಬೇಕಾದರೆ ನನ್ನ ಬೆಲೆಯನ್ನು ನಾನರಿಯಬೇಕು. ಈ ಭಯಂಕರ ದುಃಖಾನುಭವದಿಂದ ನನ್ನಲ್ಲಿರುವ ಅಪನಂಬಿಕೆ ನನ್ನಿಂದ ದೂರ ವಾಗಲಿ.

ನನ್ನ ಸತ್ಯ ಸ್ಥಿತಿಗೂ, ಕಲ್ಪನೆಗೂ ಇರುವ ವ್ಯತ್ಯಾಸ ನನಗೆ ಈಗ ತಿಳಿದಿದೆ. ಲಾಭ ನಷ್ಟಗಳ ಲೆಖ್ಖ ಮುಗಿದು ಮಿಕ್ಕಿರುವ ನಾನು—ಹರಕು ಬಟ್ಟೆಗಳನ್ನುಟ್ಟ ಹೆಳವನಲ್ಲ; ಪಥ್ಯವಾಗಿರ ಬೇಕಾದ ರೋಗಿಯಲ್ಲ; ಕಷ್ಟ ಪರಂಪರೆಗಳನ್ನು ದಾಟಿ ಬಂದ ಆತ್ಮಶಕ್ತಿ.

ನನ್ನ ಗುರು ಸ್ವಲ್ಪಹೊತ್ತಿನ ಮುಂಚೆ ಬಂದು, "ನಿಖಿಲ, ಮಲಗು, ಹೊತ್ತಾಯಿತಲ್ಲವೆ ? " ಎಂದರು.

ವಿಮಲೆ ನಿದ್ದೆಹೋಗುವವರೆಗೂ ನಾನೂ ಮಲಗಲು ಹೋಗಲಾರೆ. ಬೆಳಗ್ಗೆ ಸಂಧಿಸಬಹುದು, ಮಾತನಾಡಬಹುದು;

ಆದರೆ ರಾತ್ರಿಯ ಏಕಾಂತದಲ್ಲಿ ನಾನು ಹೇಳುವುದೇನಿದೆ? ಮನಸ್ಸು, ದೇಹ, ನಾಚಿಕೆಯಿಂದ ಮುದುರುತ್ತವೆ.

ನಾನು ನನ್ನ ಗುರುವನ್ನು, "ನೀವೇಕೆ ಮಲಗಲಿಲ್ಲ?" ಎಂದು ಕೇಳಿದೆ. ಆತನು ನಕ್ಕು. "ನನ್ನ ನಿದ್ದೆಯ ದಿನಗಳು ಕಳೆದುಹೋದುವು. ಈಗ ಎಚ್ಚರದ ದಿನಗಳು," ಎಂದು ಹೇಳಿ ಹೊರಟು ಹೋದರು.

ಇಷ್ಟು ಬರೆದು ಏಳಬೇಕೆಂದು ಕೊಳ್ಳುವ ವೇಳೆಗೆ ಮೋಡ ಗಳ ನಡುವೆ ಒಂದು ದೊಡ್ಡ ನಕ್ಷತ್ರ ಮಿನುಗಿತು. ಅದು, "ಕನಸಿನ ಕಟ್ಟುಗಳು ಇರಲಿ, ಸಡಿಲವಾಗಲಿ, ವಿವಾಹದ ಜ್ಯೋತಿ ನಾನಿದ್ದೇ ಇರುತ್ತೇನೆ," ಎಂದು ಹೇಳಿದಂತಿತ್ತು. ನನ್ನ ನಿತ್ಯ ಪ್ರೇಮ, ಶತಮಾನಗಳ ಆಚೆ, ಪ್ರಕೃತಿಯ ತೆರೆಯ ಹಿಂದೆ, ನನ ಗಾಗಿ ಕಾದಿದೆಯೆಂದು ಹೃದಯ ಉಸುರಿತು. ಎಷ್ಟೋ ಜನ್ಮ ಗಳಲ್ಲಿ ಅನೇಕ ಕನ್ನಡಿಗಳಲ್ಲಿ—ಮುರಿದ, ಸೊಟ್ಟ, ಧೂಳಿನಿಂದ ತುಂಬಿದ ಕನ್ನಡಿಗಳಲ್ಲಿ—ಅದರ ನೆರಳನ್ನು ಕಂಡಿದ್ದೇನೆ. ಆ ಕನ್ನಡಿಯನ್ನುಹಿಡಿದು ನನ್ನ ಪೆಟ್ಟಿಗೆಯಲ್ಲಿ ತುಂಬಲು ಪ್ರಯತ್ನಿಸಿ ದಾಗ ಮಾತ್ರ ಆ ನೆರಳು ಮರೆಯಾಗಿದೆ. ಆದರೇನು? ಕನ್ನಡಿ ಯಿಂದಾಗಲಿ, ನೆರಳಿನಿಂದಾಗಲಿ ನನಗೇನು ಪ್ರಯೋಜನ?

ಪ್ರಿಯೆ, ನಿನ್ನ ಮಂದಹಾಸ ಮರೆಯಾಗುವುದಿಲ್ಲ. ಪ್ರತಿ ಪ್ರಾತಃಕಾಲ ನಿನ್ನ ಬೈತಲೆಯಲ್ಲಿ ರಂಜಿಸುವ ಕುಂಕುಮ ನನಗೆ ನೂತನವಾಗಿಯೇ ಕಾಣುತ್ತದೆ.

ಮನಸ್ಸಿನ ಒಂದು ಕೆಟ್ಟ ಮೂಲೆಯಲ್ಲಿ, "ಇದೆಂತಹ ಆತ್ಮವಂಚನೆ? ಮಕ್ಕಳನ್ನು ಸುಮ್ಮನಾಗಿಸುವ ಅರ್ಥವಿಲ್ಲದ ಮಾತು," ಎಂಬ ಧ್ವನಿ ಕೇಳಿಸುತ್ತದೆ.

ಇರಬಹುದು. ಲಕ್ಷಾಂತರ ಮಕ್ಕಳ ಲಕ್ಷಾಂತರ ಕೂಗನ್ನು ಸುಮ್ಮನಾಗಿಸಬೇಕು. ಇದೆಲ್ಲಾ ಸುಳ್ಳಿನಿಂದಲೇ ಸಾಧ್ಯವೆ? ಇಲ್ಲ, ನನ್ನ ನಿತ್ಯ ಪ್ರೇಮ ಸತ್ಯವಾದುದು, ಮೋಸ

ಮಾಡಲಾರದು.

ಅದು ಸತ್ಯ ; ಅದರಿಂದಲೇ ತಪ್ಪುಗಳಲ್ಲಿಯೂ, ಕಣ್ಣೀರಿನಲ್ಲಿಯೂ ಅದನ್ನು ಕಂಡಿದ್ದೇನೆ, ಕಾಣುತ್ತೇನೆ. ಜೀವನದ ತುಂಬಿದ ಸಂತೆಯಲ್ಲಿ ಕಂಡಿದ್ದೇನೆ, ಕಳೆದುಕೊಂಡಿದ್ದೇನೆ, ಪುನಃ ಕಂಡಿದ್ದೇನೆ. ಸಾವಿನ ಕುಣಿಕೆಯಿಂದ ತಪ್ಪಿಸಿಕೊಂಡಾಗ ಪುನಃ ಕಾಣುತ್ತೇನೆ.

ನಿರ್ದಯಿ, ನನ್ನೊಡನೆ ಆಟವಾಡಬೇಡ. ನಿನ್ನ ಹೆಜ್ಜೆಗಳಿಂದ, ಗಾಳಿಯಲ್ಲಿ ತುಂಬಿರುವ ನಿನ್ನ ಕೂದಲಿನ ಸುವಾಸನೆಯಿಂದ ನಿನ್ನನ್ನು ಗುರುತಿಸಲಾರೆನಾದರೆ, ಅದಕ್ಕೋಸ್ಕರ ಎಂದೆಂದಿಗೂ ನಾನು ಮರುಗುನಂತೆ ಮಾಡಬೇಡ. ಬೆಳಗುತ್ತಿರುವ ನಕ್ಷತ್ರ ನನ್ನಲ್ಲಿ ಧೈರ್ಯ ತುಂಬುತ್ತಿದೆ. ನಿತ್ಯವಾದುದು ನಾಶವಾಗಲಾರದು.

ಈಗ ವಿಮಲೆಯನ್ನು ನೋಡಲು ಹೋಗುತ್ತೇನೆ. ಮನಸ್ಸಿನ ಹೋರಾಟದ ಆಯಾಸದಿಂದ ಮಲಗಿರಬಹುದು. ಎಚ್ಚರಿಸದೆ ಹಣೆಗೆ ಮುತ್ತಿಡುತ್ತೇನೆ. ಅದೇ ನನ್ನ ಅರ್ಚನೆಯ ಕುಸುಮ. ಸಾವಿನ ಅನಂತರ ಎಲ್ಲಾ ಮರೆಯುಬಹುದು. ತಪ್ಪುಗಳು, ತೊಂದರೆಗಳು—ಆದರೆ ಆ ಮುತ್ತಿನ ಕಂಪನ ಸ್ಥಿರವಾಗಿರುತ್ತದೆ. ಅನೇಕ ಜನ್ಮಗಳ ಮುತ್ತುಗಳ ಮಾಲೆ ನಿತ್ಯ ಪ್ರಿಯೆಯ ಹಣೆಯನ್ನಲಂಕರಿಸಬೇಕು.

ಗಡಿಯಾರ ಎರಡು ಘಂಟೆ ಬಡಿದಾಗ ನನ್ನ ಅತ್ತಿಗೆ ಬಂದು, "ಏನು ಮಾಡುತ್ತೀ, ತಮ್ಮಾ, ದಯೆಯಿಟ್ಟು ಹೋಗಿ ಮಲಗು. ನಿನ್ನ ಮುಖದಲ್ಲಿ ಕಾಣುವ ದುಃಖಚ್ಛಾಯೆಯನ್ನು ನಾನು ಸಹಿಸಲಾರೆ," ಎಂದಳು. ಆಕೆಯ ಕಣ್ಣು ತುಂಬಿ, ನೀರು ಉದುರುತ್ತಿತ್ತು.

ನಾನು ಮೌನವಾಗಿ ಆಕೆಗೆ ನಮಸ್ಕರಿಸಿ ಮಲಗಲು ಹೋದೆ.

# ವಿಮಲೆಯ ಕಥೆ

## ೭

ಮೊದಲು ನನಗೆ ಅನುಮಾನ ತೋರಲಿಲ್ಲ; ಭಯವಾಗ ಲಿಲ್ಲ. ದೇಶಕ್ಕೆ ನನ್ನನ್ನು ಮೀಸಲಾಗಿಟ್ಟ ಆ ಬಲಿದಾನದಲ್ಲಿ ಏನು ಸಂತೋಷವಿತ್ತು. ತನ್ನ ನಾಶದಿಂದ ಮನುಷ್ಯನಿಗೆ ಎಂತಹ ಆನಂದ ದೊರಕಬಹುದೆಂಬುದನ್ನು ಕಂಡುಕೊಂಡಿದ್ದೆ.

ಈ ಹುಚ್ಚು ನಿಧಾನವಾಗಿ ಕೊನೆ ಮುಟ್ಟಬಹುದಾಗಿತ್ತು. ಸಂದೀಪ ಬಾಬು ಅದಕ್ಕೆಡೆಕೊಡದೆ ತನ್ನನ್ನು ಪ್ರಕಟಪಡಿಸಿದನು. ಆತನ ಧ್ವನಿ ಸ್ಪರ್ಶದಷ್ಟು ಆತ್ಮೀಯವಾಯಿತು; ಪ್ರತಿಯೊಂದು ದೃಷ್ಟಿ ಮೊಣಕಾಲೂರಿ ಬೇಡುವಂತಿತ್ತು. ನನ್ನನ್ನು ಬೇರು ಸಹಿತ ಕಿತ್ತು, ಕೂದಲು ಹಿಡಿದು ಎಳೆದುಕೊಂಡು ಹೋಗು ವಂತಹ, ಉಗ್ರವಾದ ಉದ್ವೇಗ ಉರಿಯುತ್ತಿತ್ತು.

ನಿಜಹೇಳಲು ಹಿಂಜರಿಯುವುದಿಲ್ಲ. ಈ ಪ್ರಳಯ ಪ್ರಣಯ ಹಗಲು ರಾತ್ರಿ ನನ್ನನ್ನಾಕರ್ಷಿಸಿತು. ಆ ಆಕರ್ಷಣೆ ನನ್ನನ್ನು ನಾಶಮಾಡುತ್ತಿತ್ತು. ಆ ಭಯಂಕರ ಅವಮಾನ ಎಷ್ಟು ಪ್ರಿಯ ವಾಗಿತ್ತು! ನನ್ನ ಕುತೂಹಲಕ್ಕೆ ಮಿತಿಯೇ ಇರಲಿಲ್ಲ. ಅಪರಿ ಚಿತನಾದ, ಎಂದಿಗೂ ನನ್ನವನಾಗಲಾರದ, ಇವನ ಯೌವನ ನೂರಾರು ಕಿರಣಗಳಂತೆ ಹೊಳೆಯುತ್ತಿತ್ತು. ಆ ಭಯಂಕರ, ಅನಂತ, ತುಮುಲ ಪ್ರಣಯ!

ಸಂದೀಪನ ಆರಾಧನೆಯಲ್ಲಿ ಪ್ರಾರಂಭವಾದ ಭಾವ ಈಗ ಮರ್ಯಾದೆ ಕೂಡ ಕಳೆದುಕೊಂಡಿದೆ; ಈಗ ಅವನಲ್ಲಿ ಅಸಡ್ಡೆಯೇ. ಆದರೆ ಭಾವನೆ ಕಲ್ಪನೆಗಳಿಂದ ಸೃಷ್ಟಿಯಾದ ಈ ರಕ್ತ ಮಾಂಸ ಗಳ ವೇಣುವನ್ನು ನುಡಿಸುವ ಪ್ರಾವೀಣ್ಯ ಅವನಿಗಿದೆ. ಅವನ ಸ್ಪರ್ಶದಿಂದ ನಾನು ದೂರವಾದರೇನು? ನನ್ನ ದೇಹ ಕೂಡ ನನಗೇ ಬೇಸರವಾದರೇನು? ಅದರ ಸಂಗೀತ ನಿಲ್ಲಲಿಲ್ಲ.

ನನ್ನ ಜೀವನದಲ್ಲಿ ನನಗೇ ಬೇಸರ.

ಚಂದ್ರನಾಥ ಬಾಬು ಬಿಡುವಾದಾಗ ಬಂದು, ಮಾತ ನಾಡುತ್ತಾರೆ. ನನ್ನ ಮನಸ್ಸನ್ನು ಮೇಲಕ್ಕೆತ್ತಿ ನನ್ನ ಜೀವನದ ಗಡಿಗಳು ಕಲ್ಪನೆಯೆಂಬುದನ್ನು ತೋರಿಸಿಕೊಡುವ ಶಕ್ತಿ ಆತನಿಗಿದೆ.

ಆದರೆ ಅದರಿಂದೇನು ಪ್ರಯೋಜನ? ನನಗೆ ಬಿಡುಗಡೆಯಲ್ಲಿ ಸಂತೋಷವಿದೆಯೆ ? ನಮ್ಮ ಮನೆಯನ್ನು ದುಃಖ ಮುಸುಕಲಿ; ನನ್ನಲ್ಲಿರುವ ಒಳ್ಳೆಯದೆಲ್ಲಾ ಮುರುಟಿ ಹೋಗಲಿ. ಆದರೆ ಈ ಹುಚ್ಚು ನನ್ನನ್ನು ಬಿಡದಿರಲಿ ಎಂಬುದೇ ನನ್ನ ಪ್ರಾರ್ಥನೆಯಿದ್ದ ಹಾಗಿದೆ.

ನನ್ನ ಮದುವೆಯ ಹೊಸದರಲ್ಲಿ ಒಬ್ಬ ಭಾವ ಕುಡಿದು ಹೆಂಡತಿಯನ್ನು ಬಡಿದು, ಆಮೇಲೆ ಪಶ್ಚಾತ್ತಾಪದಿಂದ ಬಿಕ್ಕಿ ಅಳುತ್ತಾ ಇನ್ನೆಂದಿಗೂ ಸುರೆಯನ್ನು ಮುಟ್ಟುವುದಿಲ್ಲವೆಂದು ಪ್ರಮಾಣಮಾಡಿ, ಸಂಜೆ ಕುಡಿಯಲು ಪ್ರಾರಂಭಿಸುವುದನ್ನು ನೋಡಿ ಹೇಸಿದ್ದೆ. ಆದರೆ ನನ್ನ ಹುಚ್ಚು ಇನ್ನೂ ಭಯಂಕರವಾದುದು. ಸುರೆಯನ್ನು ತಂದು ಸುರಿಯಬೇಕಾಗಿಲ್ಲ; ಅದು ನನ್ನ ರಕ್ತನಾಳಗಳಲ್ಲೇ ಉದ್ಭವಿಸುತ್ತಿದೆ. ಅದನ್ನು ತಡೆಯುವ ಶಕ್ತಿ ನನಗಿಲ್ಲ.

ನನ್ನ ಜೀವಮಾನವೆಲ್ಲಾ ಹೀಗೇ ಕಳೆಯಬೇಕೇ ? ಒಂದೊಂದು ಸಲ ಎಚ್ಚತ್ತು ನನ್ನ ಜೀವನ ಒಂದು ಕೆಟ್ಟ ಕನಸಿನಂತೆ ಮಾಯವಾಗಬಹುದೆಂದು ಆಲೋಚಿಸುತ್ತೇನೆ. ಅದಕ್ಕೆ ಅರ್ಥವೇ ಇಲ್ಲವಾಗಿದೆ. ನನ್ನ ಹಿಂದಿನ ಜೀವನಕ್ಕೂ ಇದಕ್ಕೂ ಸಂಬಂಧವೇ ಇಲ್ಲ. ಇದು ಹೀಗೇಕಾಯಿತೋ ನಾನರಿಯೆ.

ನನ್ನ ಓರಗಿತ್ತಿ ತಿರಸ್ಕಾರದಿಂದ ನಕ್ಕು "ನೀನೆಷ್ಟು ಉದಾರಿಯಾಗಿ ಬಿಟ್ಟೆ. ನಿನ್ನ ಅತಿಥಿ ಜರುಗುವ ಹಾಗೇ ಇಲ್ಲ. ನಮ್ಮ ಕಾಲದಲ್ಲೂ ಅತಿಥಿಗಳಿರುತ್ತಿದ್ದರು. ಆದರೆ ನಮ್ಮ ಗಂಡಂದಿರ ಸೇವೆಯಲ್ಲಿ ಅತಿಥಿಗಳನ್ನಿಷ್ಟು ಉಪಚರಿಸಲು ಸಮಯ

ಸಿಕ್ಕುತ್ತಿರಲಿಲ್ಲ. ನಿಖಿಲನ ಹೊಸ ಸಂಪ್ರದಾಯಗಳಿಂದ ಅವನಿಗೇ ತಕ್ಕ ಶಿಕ್ಷೆಯಾಯಿತು. ಅವನೂ ಅತಿಥಿಯಾಗಿ ಬಂದಿದ್ದರೆ ಉಪಚಾರ ಸಿಕ್ಕುತ್ತಿತ್ತು. ಆದರೆ ಈಗ ಅವನಿಗೆ ಹೊರಡುವ ಕಾಲ ಬಂದಿದೆ. ಪಿಶಾಚಿ, ಅವನ ದುಃಖ ನಿನಗೆ ಅರ್ಥವೇ ಆಗುವುದಿಲ್ಲವೆ ? " ಎಂದಳು.

ಇದರಿಂದ ನನಗೆ ಅವಮಾನವಾಗಲಿಲ್ಲ. ನನ್ನ ಆರಾಧನೆಯ ಅರ್ಥ ತಿಳಿಯುವ ಯೋಗ್ಯತೆ ಈ ಹೆಂಗಸರಿಗಿಲ್ಲವೆಂದು ನನಗೆ ತಿಳಿದಿತ್ತು. ಬಲಿದಾನದ ಕವಚ ತೊಟ್ಟಿದ್ದ ನನಗೆ ಈ ಬಾಣಗಳು ತಾಗುವಂತಿರಲಿಲ್ಲ.

## ೮

ಕೆಲವು ದಿನದಿಂದ ದೇಶೋದ್ಧಾರದ ಮಾತು ನಿಂತಿತ್ತು. ಲೈಂಗಿಕ ವಿಚಾರಗಳೂ, ಕವಿತೆಗಳೂ, ಅಧಿಕಾರ ವಾಣಿಯಲ್ಲಿ ಕೇಳ ಬರುತ್ತಿದ್ದವು.

ಈಗ ಮುಚ್ಚು ಮರೆಯಿರಲಿಲ್ಲ. ಸಂದೀಪ ನಿಲ್ಲುವುದಕ್ಕಾಗಲಿ, ಅವನೊಡನೆ ನಾನು ಮಾತನಾಡುವುದಕ್ಕಾಗಲಿ ಕಾರಣಗಳನ್ನು ಹುಡುಕುತ್ತಿರಲಿಲ್ಲ. ನನಗೆ ನನ್ನಲ್ಲಿಯೂ ನನ್ನ ಓರಗಿತ್ತಿಯಲ್ಲೂ ಲೋಕದ ರೀತಿಯಲ್ಲೂ ಬೇಸರವಾಗಿ ಪುನಃ ಸತ್ತರೂ ಹೊರಗಿನ ಕೊಠಡಿಗೆ ಹೋಗುವುದಿಲ್ಲವೆಂದು ಶಪಥ ಮಾಡಿದೆ.

ಎರಡು ದಿನ ಕದಲಲಿಲ್ಲ. ಆಗ ನಾನು ಎಷ್ಟು ದೂರ ಸಾಗಿದ್ದೆನೆಂಬ ಅರಿವುಂಟಾಯಿತು. ಜೀವನ ನಿಸ್ಸಾರವಾಯಿತು. ಯಾವುದರಲ್ಲೂ ಸಂತೋಷವಿರಲಿಲ್ಲ. ನಖ ಶಿಖಾಂತ ಯಾರಿಗಾಗಿಯೋ ಏತಕ್ಕಾಗಿಯೋ ಕಾದಿದ್ದೆ. ನನ್ನ ರಕ್ತ ನಿರೀಕ್ಷೆಯಿಂದ ಜುಮ್ಮೆನ್ನುತ್ತಿತ್ತು.

ಕೆಲಸದಲ್ಲಿ ಮರೆಯಲು ಪ್ರಯತ್ನಿಸಿದೆ. ಮಲಗುವ ಕೋಣೆ ಶುದ್ಧವಾಗಿದ್ದರೂ ಪುನಃ ಪುನಃ ಗುಡಿಸಿಸಿದೆ. ಬೀರುವಿನಲ್ಲಿದ್ದ

ಪದಾರ್ಥಗಳನ್ನೆಲ್ಲಾ ಎಳೆದು ಹಾಕಿ ಪುನಃ ಜೋಡಿಸಿದೆ. ಆ ದಿನ ತಲೆ ಬಾಚಲು ಕೂಡ ಸಮಯವಿರಲಿಲ್ಲ. ಗಂಟು ಹಾಕಿಕೊಂಡು ಉಗ್ರಾಣದ ವಿಚಾರಣೆ ಮಾಡಿದೆ. ಸಾಮಾನು ಯಾರೋ ಕದ್ದು ಕಡಮೆಯಾದ ಹಾಗಿದ್ದರೂ—ಯಾರನ್ನೂ ಕೇಳುವ ಧೈರ್ಯವಾಗಲಿಲ್ಲ "ಇಷ್ಟು ದಿನ ನಿನ್ನ ಕಣ್ಣೆಲ್ಲಿ ಹೋಗಿತ್ತು ?" ಎಂದು ಕೇಳಿದರೆ ಏನು ಉತ್ತರ ಕೊಡುವುದು ?

ಆ ದಿನ, ದೆವ್ವ ಬಡಿದವಳಂತಿದ್ದೆ. ಮಾರನೆಯ ದಿನ ಓದಲು ಪ್ರಯತ್ನ ಮಾಡಿದೆ. ಏನು ಓದಿದೆನೋ ತಿಳಿಯದು—ಪುಸ್ತಕವನ್ನು ಕೈಯಲ್ಲೇ ಹಿಡಿದು ಹೊರಗಿನ ಕಿಟಕಿಯ ಬಳಿ ನಿಂತು ಎದುರಿನ ಕೊಠಡಿಗಳ ಕಡೆ ನೋಡುತ್ತಿದ್ದೆ. ಅದರಲ್ಲಿದ್ದ ಒಂದು ಕೊಠಡಿ ಅಂಬಿಗನಿಲ್ಲದ ನದಿಯಾಚೆ ಇದ್ದಂತೆ ತೋರಿತು. ನಾನು ದೆವ್ವದಂತೆ ಅಲ್ಲಿ ನಿಂತು ಅನಂತ ಕಾಲ ಹಾಗೆಯೇ ದೃಷ್ಟಿಸುತ್ತಿರಬೇಕೆಂದು ತೋರಿತು.

ಅಲ್ಲಿ ನಿಂತಿದ್ದಾಗ ಸಂದೀಪ ಒಂದು ವೃತ್ತಪತ್ರಿಕೆ ಹಿಡಿದು ಬಂದ. ಅವನಿಗೇನೋ ಅಸಮಾಧಾನವಾಗಿತ್ತು. ಕೋಪದಿಂದ ಪತ್ರಿಕೆಯನ್ನೆಸೆದ. ಪ್ರತಿಜ್ಞೆಯನ್ನುಳಿಸಿಕೊಳ್ಳಲು ನನಗೆ ಸಾಧ್ಯವಾಗಲಿಲ್ಲ. ಕೊಠಡಿಯೊಳಕ್ಕೆ ಹೊರಡಬೇಕೆಂದು ತಿರುಗಿದಾಗ ಹಿಂದೆ ನಿಂತಿದ್ದ ನನ್ನ ಓರಗಿತ್ತಿ, "ಸರಿಯಾಯಿತು !" ಎಂದು ಅಲ್ಲಿಂದ ಜಾರಿದಳು. ನನಗೆ ಕೊಠಡಿಯೊಳಗೆ ಹೋಗಲು ಸಾಧ್ಯವಾಗಲಿಲ್ಲ.

ಮಾರನೆಯ ದಿನ ದಾದಿ, "ಅಡಿಗೆಯ ಸಾಮಾನು ಕೊಡಿ." ಎಂದು ಬಂದಾಗ ಬೀಗದ ಕೈ ಎಸೆದು, "ಹರಿಮತಿಗೆ ಹೇಳು" ಎಂದೆ. ಕಿಟಕಿಯ ಬಳಿ ಕುಳಿತು ಕಸೂತಿಯನ್ನು ಮುಂದುವರಿಸಿದೆ.

ಆಳು ಸಂದೀಪ ಬಾಬುವಿನಿಂದ ಒಂದು ಕಾಗದ ತಂದನು. ಎಷ್ಟು ಧೈರ್ಯ ! ಆಳು ಏನೆಂದು ಕೊಂಡಿರಬಹುದು ? ಕಾಗದ

ವನ್ನು ತೆರೆದಾಗ ನನ್ನ ಹೃದಯ ನಡುಗುತ್ತಿತ್ತು. ಅದರ ಮೇಲೆ ವಿಳಾಸವಿರಲಿಲ್ಲ. "ಅವಸರದ ವಿಚಾರ. ಸ್ವರಾಜ್ಯದ ವಿಚಾರ–ಸಂದೀಪ," ಎಂದು ಬರೆದಿದ್ದನು. ನಾನು ಕಸೂತಿಯನ್ನೆಸೆದು ತಲೆ ಬಾಚಿಕೊಂಡೆ. ಆ ಸೀರೆಯನ್ನೇ ಉಟ್ಟುಕೊಂಡು, ಕುಪ್ಪಸ ಮಾತ್ರ ಬದಲಾಯಿಸಿದೆ.

ನನ್ನ ಓರಗಿತ್ತಿ ಎಲೆ ಅಡಕೆ ಸಿದ್ಧಪಡಿಸಿಕೊಳ್ಳುತ್ತಾ ಕುಳಿತಿದ್ದ ಹಜಾರವನ್ನು ಹಾದು ಹೋಗಬೇಕಾಗಿತ್ತು.

"ಎಲ್ಲಿಗೆ ಕಿರಿಯರಾಣಿ?" ಎಂದು ಆಕೆ ಕೂಗಿದಳು.

"ಹೊರಗಿನ ಕೋಣೆಗೆ."

"ಇಷ್ಟು ಬೇಗ! ಈ ದಿನ ಬೆಳಗಿನ ಪ್ರದರ್ಶನವೋ?" ನಾನು ಉತ್ತರ ಕೊಡದೆ ಹೋಗಲು, ಯಾವುದೋ ಗೀತೆಯನ್ನು ಗೊಣಗಿದಳು.

ಕೊಠಡಿಯೊಳಗೆ ಸಂದೀಪ ಒಂದು ಚಿತ್ರ ಪುಸ್ತಕ ಹಿಡಿದು ಬಾಗಿಲಿಗೆ ಬೆನ್ನು ಮಾಡಿ ಕುಳಿತಿದ್ದನು. ಅವನ ಮನಸ್ಸಿನಲ್ಲಿ ಅವನೊಬ್ಬ ದೊಡ್ಡ ಚಿತ್ರವಿಮರ್ಶಕ.

ಒಂದು ದಿನ ನನ್ನ ಪತಿ ಅವನೊಡನೆ "ಕಲೆಗಾರರಿಗೆ ನೀನಿರುವವರೆಗೂ ಗುರುವಿಗೆ ತೊಂದರೆಯಿಲ್ಲ," ಎಂದರು. ನನ್ನ ಪತಿ ಯಾರನ್ನೂ ನೋಯಿಸಿ ಮಾತನಾಡುವವರಲ್ಲ. ಆದರೆ ಈಚೆಗೆ ಸಂದೀಪನನ್ನು ಕಂಡರೆ ಅವರಿಗಾಗುವುದಿಲ್ಲ.

ಸಂದೀಪ:–"ಕಲೆಗಾರರಿಗೆ ಗುರುವಿನ ಆವಶ್ಯಕತೆಯಿಲ್ಲ."

ನನ್ನಪತಿ:–"ಕಲೆ ಒಂದು ಸೃಷ್ಟಿ. ಕಲೆಗಾರನ ಕಲೆಯಿಂದ ನಾವು ಅರಿವನ್ನು ಪಡೆಯಬೇಕು, ಅಷ್ಟೆ."

ಸಂದೀಪ ನಕ್ಕು "ವಿನಯ ಉಪಯೋಗಿಸಿದಷ್ಟೂ ಬೆಳೆಯುವ ಆಸ್ತಿಯೆಂದುಕೊಂಡಿದ್ದೀ. ಸ್ವಾಭಿಮಾನವಿಲ್ಲದವರು ಬೇರಿಲ್ಲದ ಜೊಂಡಿನಂತೆ ತೇಲಾಡುವರೆಂದು ನನ್ನ ನಂಬಿಕೆ," ಎಂದನು. ಅವರಿಬ್ಬರೂ ಮಾತನಾಡುತ್ತಿದ್ದರೆ ನನ್ನ ಮನಸ್ಸು

ಹೊಯ್ದಾಡುತ್ತಿತ್ತು. ನನ್ನಪತಿ ವಾದದಲ್ಲಿ ವಿಜಯಿಯಾಗ ಬೇಕೆಂದೂ, ಸಂದೀಪನಿಗೆ ಅವಮಾನವಾಗಬೇಕೆಂದೂ ಬಯಸು ತ್ತಿದ್ದೆ. ಆದರೆ ಸಂದೀಪನ ನಿಸ್ಸಂಕೋಚ ಗರ್ವ ನನ್ನನ್ನಾ ಕರ್ಷಿಸುತ್ತಿತ್ತು. ವಿನಯವನ್ನರಿಯದೆ ಸೂರ್ಯನೆದುರಿಗೇ ಹೊಳೆಯುವ ಬೆಲೆಯುಳ್ಳ ವಜ್ರದಂತೆ ಅದು ಬೆಳಗುತ್ತಿತ್ತು.

ನಾನು ಕೊಠಡಿಯೊಳ ಹೊಕ್ಕೆ. ಸಂದೀಪ ನನ್ನ ಹೆಜ್ಜೆಯ ಸದ್ದು ಕೇಳದಂತೆ ಪುಸ್ತಕದಲ್ಲೇ ದೃಷ್ಟಿಯಿಟ್ಟು ಕುಳಿತಿದ್ದನು.

ಅವನು ತೋರಿದ ಚಿತ್ರಗಳನ್ನು ನೋಡಿ, ಅವನ ಮಾತು ಗಳನ್ನು ಕೇಳಿ ಉಂಟಾಗುತ್ತಿದ್ದ ಸಂಕೋಚವನ್ನು ಮರೆಮಾಚಲು ನಾನು ಬಹಳ ಪ್ರಯತ್ನಪಡಬೇಕಾಗಿದ್ದುದರಿಂದ, ಕಲೆಯ ಚರ್ಚೆಯೆಂದರೆ ನನಗೆ ದಿಗಿಲು. ಹೊರಟು ಹೋಗಬೇಕೆಂದು ಕೊಳ್ಳುವಷ್ಟರಲ್ಲಿ ಸಂದೀಪ ನಿಟ್ಟುಸಿರಿನೊಡನೆ ತಲೆಯೆತ್ತಿ, ನನ್ನನ್ನು ನೋಡಿ, ಗಾಬರಿಯಾದಂತೆ ನಟಿಸಿ, "ಕಡೆಗೂ ಬಂದೆ!" ಎಂದನು.

ಈ ಎರಡು ಮೂರು ದಿನ ತಪ್ಪಿಸಿಕೊಂಡದ್ದೇ ತನ್ನ ಅಧಿಕಾ ರಕ್ಕೆ ಭಂಗವನ್ನುಂಟು ಮಾಡಿತೆಂಬ ಆಕ್ಷೇಪಣೆ ಅವನ ಮಾತು ಗಳಲ್ಲಿ ಧ್ವನಿಯಲ್ಲಿ ಕಣ್ಣುಗಳಲ್ಲಿ ಅಡಗಿತ್ತು. ಇದು ನನಗೆ ಅವ ಮಾನವೆಂದು ತಿಳಿದರೂ, ಆಕ್ಷೇಪಿಸುವ ಧೈರ್ಯವಿರಲಿಲ್ಲ.

ಉತ್ತರ ಕೊಡದೆ, ಬೇರೆ ಕಡೆ ನೋಡುತ್ತಿದ್ದರೂ, ಸಂದೀಪನ ಕರುಣೆಯ ನೋಟ ನನ್ನ ಮುಖದಲ್ಲಿ ನೆಟ್ಟಿತ್ತೆಂದೂ ನಕಾರಕ್ಕೆ ಒಪ್ಪಿಕೊಳ್ಳುವುದಿಲ್ಲವೆಂದೂ ನನಗೆ ತಿಳಿದಿತ್ತು. ಅವನೇ ನಾದರೂ ಮಾತನಾಡಿದರೆ, ಮಾತುಗಳ ಹಿಂದೆ ಅಡಗ ಬಹು ದೆಂದು ಕೊಂಡೆ. ಕಡೆಗೆ ತಡೆಯಲಾರದೆ, "ನನಗೆ ಹೇಳ ಬೇಕಾದ ವಿಚಾರವೇನಿದೆ ?" ಎಂದೆ.

ಸಂದೀಪ ಆಶ್ಚರ್ಯವನ್ನು ನಟಿಸಿ, "ವಿಚಾರವಿದ್ದೇ ತೀರ ಬೇಕೆ ? ಸ್ನೇಹ ಅಪರಾಧವೆ ? ಅಂತಹ ಉತ್ಕೃಷ್ಟ ಪದಾರ್ಥವನ್ನು

ಅಸಡ್ಡೆ ಮಾಡುವೆಯಲ್ಲಾ ! ಹೃದಯಾರಾಧನೆಯನ್ನು ಬೀದಿಯ ನಾಯಿಯಂತೆ ನೂಕಬೇಕೆ ? " ಎಂದನು.

ನನ್ನ ಹೃದಯ ನಡುಗಿತು. ಸಂದಿಗ್ಧ ಪರಿಸ್ಥಿತಿಯನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆಂದು ತೋರಿತು. ಸಂತೋಷ ಭಯಗಳ ಹೊಯ್ದಾಟ ನಡೆಯುತ್ತಿತ್ತು. ನನಗೆ ಅದನ್ನು ತಡೆಯುವ ಶಕ್ತಿ ಇದೆಯೇ ? ಅಥವಾ ಬಿದ್ದು ಮುಖ ಮಣ್ಣಾಗುವುದೆ?

ನಡುಕವನ್ನು ಪ್ರಯತ್ನ ಪೂರ್ವಕವಾಗಿ ತಡೆದು, " ಸ್ವಾತಂತ್ರ್ಯದ ವಿಚಾರ ಮಾತನಾಡಬೇಕೆಂದು ಹೇಳಿ ಕಳುಹಿಸಿದಿರಿ. ಮನೆಗೆಲಸಗಳನ್ನು ಬಿಟ್ಟು ಬಂದೆ."

ಸಂದೀಪ ನಕ್ಕು, " ಅದನ್ನೇ ವಿವರಿಸ ಬೇಕೆಂದಿದ್ದೆ. ನಾನು ಆರಾಧಕನೆಂಬುದನ್ನು ನೀನರಿಯೆಯಾ ? ನಿನ್ನಲ್ಲಿ ದೇಶದ ಶಕ್ತಿ ನನಗೆ ಪ್ರತ್ಯಕ್ಷಳಾಗಿದ್ದಾಳೆಂದು ನಾನು ಹೇಳಿಲ್ಲವೆ ? ದೇಶದ ಭೂವಿವರಣೆ ಮುಖ್ಯವಲ್ಲ. ಒಂದು ಭೂಪಠಕ್ಕಾಗಿ ಜೀವ ತೆರಲು ಸಾಧ್ಯವಿಲ್ಲ. ನೀನು ಎದುರಿಗೆ ನಿಂತಾಗ ದೇಶದ ಸೌಂದರ್ಯದ ಅರಿವು ನನಗುಂಟಾಗುತ್ತದೆ. ನೀನು ಅಭಿಷೇಕದಿಂದ ನನ್ನನ್ನು ಶುದ್ಧಿಗೊಳಿಸಿದರೆ ದೇಶ ನನ್ನ ಸೇವೆಯನ್ನು ಸ್ವೀಕರಿಸುವುದೆಂದು ನನಗೆ ಭರವಸೆಯಿದೆ. ಹೀಗೆ ನಾನು ದೇಶಕ್ಕಾಗಿ ಹೋರಾಡುತ್ತಾ ಸತ್ತರೆ, ಮಣ್ಣಿನ ಭೂಪಠದ ಮೇಲಲ್ಲ—ಪ್ರೇಮದಿಂದ ಹರಡಿದ ಸೀರೆಯ ನಿರಿಯ ಮೇಲೆ.–ಎಂತಹ ಸೀರೆ ಗೊತ್ತೆ? ನೀನು ಆ ದಿನ ಉಟ್ಟಿದ್ದ ರಕ್ತದಂಚಿನ ಮಣ್ಣಿನ ಬಣ್ಣದ ಸೀರೆ! ಮರೆಯಲು ಸಾಧ್ಯವೆ ?—ಇಂತಹ ಸ್ವಪ್ನಗಳು ಬದುಕಿಗೆ ಶಕ್ತಿ ಕೊಡುತ್ತವೆ, ಸಾವಿನಲ್ಲಿ ಸುಖ ಕೊಡುತ್ತವೆ ! "

ಮಾತನಾಡುತ್ತ ಆಡುತ್ತ ಅವನ ಕಣ್ಣು ಉರಿಯಲಾರಂಭಿಸಿದುವು—ಆರಾಧನೆಯ ಬೆಳಕೋ, ಪ್ರೇಮದ ಉದ್ವೇಗವೋ ತಿಳಿಯಲಿಲ್ಲ. ಮೊದಲನೆಯ ದಿನ ಆತನು ಭಾಷಣಮಾಡಿದಾಗ ಬರಿಯ ಮನುಷ್ಯನೋ ಜೀವಜ್ಯೋತಿಯೋ ನಿರ್ಧರಿಸಲಾರದೆ

ಹೋಗಿದ್ದೆ.

ಮಾತನಾಡಲು ಶಕ್ತಿಯಿರಲಿಲ್ಲ. ಲೋಭಿಯ ಸಂಪತ್ತನ್ನು ಬೆಂಕಿ ನಗುತ್ತಾ ನಾಶಮಾಡುತ್ತಿರುವಾಗ ಶಿಷ್ಟಾಚಾರದ ಗೋಡೆಗಳ ಹಿಂದೆ ಅಡಗಲು ಸಾಧ್ಯವಿಲ್ಲ. ಮೈಮರೆತು ನನ್ನ ಕೈಯನ್ನು ಅವನು ಹಿಡಿಯಬಹುದೆಂದು ಹೆದರಿದೆ. ಬೆಂಕಿಯ ನಾಲಗೆಯಂತೆ ನಡುಗುತ್ತಿದ್ದ ಆತನ ಕಣ್ಣುಗಳಿಂದ ಉದುರುತ್ತಿದ್ದ ಕಿಡಿಗಳು ನನ್ನನ್ನು ದಹಿಸುತ್ತಿದ್ದುವು.

ಸ್ವಲ್ಪ ಹೊತ್ತು ಸುಮ್ಮನಿದ್ದು,—"ಮನೆಗೆಲಸಗಳನ್ನೇ ಧ್ಯೇಯವಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿರುವೆಯಾ ?—ನೀನು ಇಷ್ಟಪಟ್ಟರೆ ಬದುಕಿನ ದಾರಿಯನ್ನೇ ನಮಗೆ ತೋರಬಲ್ಲೆ—ಸಾವಿನ ಬಾಯಿಗೆ ಕಳುಹಬಲ್ಲೆ ! ಇಂತಹ ಶಕ್ತಿ ಪರದೆಯ ಹಿಂದೆ ಅಡಗಿರಬೇಕೆ ? ಈ ಕೃತಕ ನಾಚಿಕೆಯನ್ನು ಬಿಡು; ಜನರ ಮಾತಿಗೆ ಹೆದರ ಬೇಡ. ಹೊರಗಿನ ಪ್ರಪಂಚದ ಸ್ವತಂತ್ರ ವಾತಾವರಣದಲ್ಲಿ ಧುಮುಕು."

ಸಂದೀಪನ ಪ್ರಾರ್ಥನೆಗಳಲ್ಲಿ ದೇಶದ ಆರಾಧನೆ, ನನ್ನ ಪೂಜೆಯೊಡನೆ ಬೆರೆತಗೆ, ನನ್ನ ರಕ್ತ ಕುಣಿದು, ಅನುಮಾನ ಮಾಯವಾಗುವುದು. ಕಲೆ, ಸತ್ಯ. ಅಸತ್ಯಗಳ ಮಾತುಗಳು ನನಗೆ ಹೇಸಿಕೆಯನ್ನುಂಟುಮಾಡುತ್ತಿದ್ದುವು. ಈ ಮಾತುಗಳು ಅದನ್ನು ಮರೆಸಿ ನನ್ನ ಜಿಗುಪ್ಸೆಯನ್ನು ಕರಗಿಸಿದುವು. ನನ್ನ ಬೆಳಗುವ ಸ್ತ್ರೀತ್ವ ನನ್ನನ್ನು ದೇವಿಯಾಗಿ ಮಾಡಿತೆಂದೇ ಭಾವಿಸಿದೆ. ಅದರ ಜ್ಯೋತಿ ಎಲ್ಲರ ದೃಷ್ಟಿಗೂ ನನ್ನ ಮುಖದಲ್ಲಿ ಬೆಳಗಬಾರದೇಕೆ ? ದೇಶದ ಅಗ್ನಿಪರೀಕ್ಷೆಗಾಗಿ, ಪವಿತ್ರವಾದ ಮಂತ್ರವನ್ನುಸುರಲು ನನ್ನ ಧ್ವನಿ ಏಳದೇಕೆ ?

ಇದ್ದಕ್ಕಿದ್ದಂತೆ ನನ್ನ ದಾದಿ ಕ್ಷೇಮ ತಲೆ ಕೆದರಿಕೊಂಡು ಬಂದು, "ನನ್ನ ಸಂಬಳ ಕೊಟ್ಟುಕಳುಹಿಸಿ. ನನ್ನ ಜನ್ಮದಲ್ಲಿ ಹೀಗೆ...." ಎಂದು ಬಿಕ್ಕಿ ಅಳಲಾರಂಭಿಸಿದಳು.

" ಏನಾಯಿತು ? "

ದೊಡ್ಡ ರಾಣಿಯ ದಾದಿ ಥಾಕೊ ಕಾರಣವಿಲ್ಲದೆ ಸಿಕ್ಕಿ ದಂತೆ ಬಯ್ದು ಳಂತೆ. ಆಮೇಲೆ ವಿಚಾರಿಸುತ್ತೇನೆಂದರೆ ಒಪ್ಪುವ ಸ್ಥಿತಿಯಲ್ಲಿ ಅವಳಿರಲಿಲ್ಲ.

ಸ್ತ್ರೀತ್ವದ ತಾವರೆಯಂಚಿನ ಕೆಳಗೆ ಕೊಳೆಯುತ್ತಿದ್ದ ಸಂಸಾರದ ಪಾಚಿ ಮೇಲಕ್ಕೆ ತೇಲಿಬಂದಿತ್ತು. ಸಂದೀಪ ಅದ ರಿಂದ ಬೇಸಗ ಪಡಬಹುದೆಂದು ಹೆದರಿ ಬೇಗ ಒಳಕ್ಕೆ ಹೋದೆ.

## ೧೦

ಏನೂ ಅರಿಯದಂತೆ ಮುಸಿನಗುತ್ತಾ ನನ್ನ ಓರಗಿತ್ತಿ ವೀಳ್ಯದೆಲೆ ಮೆಲ್ಲುತ್ತಿದ್ದಳು. ಅದೇ ಹಾಡನ್ನೇ ಗೊಣಗುತ್ತಿದ್ದಳು.

ನಾನು ಕೋಪದಿಂದ, " ನಿನ್ನದಾಸಿ ಕ್ಷೇಮಳನ್ನು ಬಯ್ದು ದೇಕೆ ? " ಎಂದೆ.

" ಬಯ್ದುಳೆ ! ಪೊರಕೆಯಿಂದ ಹೊಡೆದೋಡಿಸುತ್ತೇನೆ. ನಿನ್ನ ಆನಂದಕ್ಕೆ ಭಂಗತಂದಳಲ್ಲಾ ! ನೀನು ಕೆಲಸದಲ್ಲಿದ್ದಾಗ ಕ್ಷೇಮ ತೊಂದರೆಕೊಟ್ಟಳೆ ? ಈ ಸಂಸಾರ ತಾಪತ್ರಯಗಳ ನ್ನೆಲ್ಲಾ ಹಚ್ಚಿಕೊಳ್ಳಬೇಡಮ್ಮಾ. ನಾನು ನೋಡಿಕೊಳ್ಳುತ್ತೇನೆ. ನಿನ್ನ ಗೆಳೆಯನನ್ನು ವಿಚಾರಿಸಿಕೋ."

ಮನಸ್ಸು ಹೇಗೆ ಬದಲಾಯಿಸುತ್ತದೆ ! ಸಂದೀಪನನ್ನು ಕಾಣುವುದೇ ಅಸಭ್ಯತನವಾಗಿ ತೋರಿ ಒಳಗಿನ ಕೊಠಡಿಗೆ ಹೋದೆ. ಈ ದಾಸಿಯರ ಜಗಳ ಕೂಡ ನನ್ನ ಓರಗಿತ್ತಿಯ ಏರ್ಪಾಟೆಂದೇ ತೋರಿತು. ಆದರೆ ಎದುರುತ್ತರ ಕೊಡುವ ಶಕ್ತಿಯನ್ನು ಕಳೆದುಕೊಂಡಿದ್ದೆ.

ನಂಕುವನ್ನು ಕೆಲಸದಿಂದ ತೆಗೆಯಬೇಕೆಂದು ನನ್ನ ಪತಿಗೆ ಹೇಳಿದಾಗಲೂ ಹಠ ಸಾಧಿಸುವ ಶಕ್ತಿಯನ್ನು ಕಳೆದುಕೊಂಡಿದ್ದೆ. ದೊಡ್ಡರಾಣಿ ಬಂದು, " ಅದೆಲ್ಲಾ ನನ್ನ ತಪ್ಪು, ತಮ್ಮಾ. ನಾನು

ಹಳೆಯ ಸಂಪ್ರದಾಯದವಳು. ಸಂದೀಪ ಬಾಬುವಿನ ವಿದ್ಯೆಗಳು ಸರಿಬೀಳಲಿಲ್ಲ. ಕಾವಲುಗಾರನಿಗೆ ಹೇಳಿದೆ. ಚಿಕ್ಕರಾಣಿ ಅದನ್ನು ಅವಮಾನವಾಗಿ ಭಾವಿಸುವಳೆಂದು ನನಗೇನು ಗೊತ್ತು? ನಾನೇ ಹುಚ್ಚಿ—" ಎಂದಾಗ ನನಗೆ ನಾಚಿಕೆಯಾಗಿತ್ತು.

ದೇಶೋದ್ಧಾರದ ಮಟ್ಟದಿಂದ ಮಹತ್ತರವಾಗಿ ಕಾಣುವ ವಿಚಾರಗಳು ಕೆಳಗಿನಿಂದ ಹೊಲಸಾಗಿ ತೋರುವುವು. ಕೋಪದಿಂದ ಪ್ರಾರಂಭವಾಗಿ ಹೇಸಿಕೆಯಲ್ಲಿ ಕೊನೆಗಾಣುವುವು.

ಕೊಠಡಿಯ ಬಾಗಿಲನ್ನು ಹಾಕಿ, ಕಿಟಕಿಯ ಬಳಿ ಕುಳಿತು, ವಾತಾವರಣದೊಂದಿಗೆ ಸಮರಸವಾಗಿ ಬೆರೆತರೆ ಜೀವನ ಎಷ್ಟು ಸುಖಮಯವಾಗುವುದೆಂದು ಆಲೋಚಿಸುತ್ತಿದ್ದೆ. ದೊಡ್ಡರಾಣಿ ಅಡಕೆ ಎಲೆ ಹಾಕುತ್ತಾ ಎಷ್ಟು ಸುಖವಾಗಿದ್ದಾಳೆ. ನನಗೆ ದಿನಚರಿಯ ಕೆಲಸ ಎಷ್ಟು ಅಹಿತವಾಗಿ ತೋರುತ್ತದೆ. ಇದಕ್ಕೆ ಕೊನೆಯೆಲ್ಲಿ? ಈ ಮಾಯೆಯಿಂದ ಎಂದಾದರೂ ಎಚ್ಚರಗೊಂಡು ಮರೆಯುವೆನೆ? ಅಥವಾ ಈ ಜನ್ಮದಲ್ಲಿ ಬಿಡುಗಡೆಯಿಲ್ಲದ ಕೂಪದಲ್ಲಿ ಬೀಳುವೆನೆ? ಅದೃಷ್ಟವನ್ನು ಬೀಳ್ಕೊಟ್ಟು ಜನ್ಮವನ್ನೇಕೆ ಹಾಳುಮಾಡಿಕೊಂಡೆ? ಒಂಭತ್ತು ವರ್ಷಗಳ ಕೆಳಗೆ ವಧುವಾಗಿ ಹೊಕ್ಕ ಈ ಕೊಠಡಿಯ ಗೋಡೆ ಗೋಡೆಗಳೂ ನನಗಾಗಿ ಪರಿತಪಿಸುತ್ತಿವೆ.

ಎಂ. ಎ. ಪರೀಕ್ಷೆ ಮುಗಿಸಿ ಬಂದ ನನ್ನಪತಿ ನನಗಾಗಿ ಹೊರದೇಶದ ಈ ಹೂಗಿಡವನ್ನು ತಂದರು. ಸೌಂದರ್ಯದ ಬಟ್ಟಲಿನಿಂದ ಚೆಲ್ಲಿದಂತೆ ಅದರಲ್ಲಿ ಜೊಂಪೆ ಜೊಂಪೆ ಹೂ ಬಿಟ್ಟುವು. ನಾವಿಬ್ಬರೂ ಕಿಟಕಿಯಲ್ಲಿ ತಗುಲಿ ಹಾಕಿದೆವು. ಅದು ಒಂದೇ ಸಲ ಹೂಬಿಟ್ಟರೂ, ಇನ್ನೂ ಬಿಡಬಹುದೆಂಬ ಆಸೆಯಿದ್ದೇ ಇದೆ. ಅಭ್ಯಾಸ ಬಲದಿಂದ ನೀರು ಹಾಕುತ್ತಿರುವುದರಿಂದ ಗಿಡ ಹಸುರಾಗಿಯೇ ಇದೆ.

ನಾಲ್ಕು ವರ್ಷದ ಕೆಳಗೆ ನನ್ನ ಪತಿಯ ಚಿತ್ರಕ್ಕೆ ದಂತದ

ದಂತದ ಕಟ್ಟು ಹಾಕಿ ಗೂಡಿನಲ್ಲಿಟ್ಟೆ. ಈಗ ಆಕಡೆ ನೋಡಿದರೆ ದೃಷ್ಟಿ ತಗ್ಗಿಸಬೇಕಾಗಿದೆ. ಹೋದ ವಾರದವರೆಗೂ ಸ್ನಾನವಾದ ಮೇಲೆ ಅಲ್ಲಿ ಹೂವಿಡುತ್ತಿದ್ದೆ. ನನ್ನ ಪತಿಯೇ ಎಷ್ಟೋಸಲ ಆಕ್ಷೇಪಿಸಿದ್ದಾರೆ.

"ನನಗೆ ಯೋಗ್ಯತೆಯಿಲ್ಲದ ಎತ್ತರದಲ್ಲಿ ಕೂಡಿಸುತ್ತೀ," ಎಂದರು.

"ಏನು ಮಾತು!"

"ನನಗೆ ನಾಚಿಕೆಯೊಂದೇ ಅಲ್ಲ. ಅಸೂಯೆ ಕೂಡ ಆಗುತ್ತದೆ."

"ಯಾರನ್ನು ಕಂಡು ಅಸೂಯೆ?"

"ಆ ನನ್ನ ಸುಳ್ಳು ವ್ಯಕ್ತಿತ್ವವನ್ನು ಕಂಡು. ನಾನು ಸಣ್ಣ ಮನುಷ್ಯ; ನಿನ್ನನ್ನು ಮರುಳುಗೊಳಿಸುವ ಹಿರಿಯ ವ್ಯಕ್ತಿ ಬೇಕಾಗಿರುವುದರಿಂದ ನೀನು ನನ್ನಲ್ಲಿಲ್ಲದ ಗುಣಗಳನ್ನು-ಕಲ್ಪನೆ ಮಾಡಿಕೊಂಡು ಬೇರೊಬ್ಬನನ್ನು ಸೃಷ್ಟಿಸಿಕೊಂಡಿದ್ದೀ."

"ಇಂತಹ ಮಾತುಗಳಿಂದ ನನಗೆ ಕೋಪಬರುತ್ತೆ."

"ನನ್ನ ಮೇಲೆ ಕೋಪ ಮಾಡಿಕೊಂಡೇನು ಪ್ರಯೋಜನ? ಕಣ್ಣು ಮುಚ್ಚಿಕೊಂಡು ನನ್ನನ್ನು ಮದುವೆ ಮಾಡಿಕೊಳ್ಳಬೇಕಾಗಿ ಮಾಡಿದ ನಿನ್ನ ವಿಧಿಯನ್ನು ಆಕ್ಷೇಪಿಸು. ವಿಧಿಯ ತಪ್ಪನ್ನು ಮುಚ್ಚಲು ನನ್ನನ್ನು ಆದರ್ಶ ವ್ಯಕ್ತಿಯನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದೀ."

ಈ ಮಾತಿನಿಂದ ಆದಿನ ನನ್ನ ಕಣ್ಣಲ್ಲಿ ನೀರು ಬಂತು. ಆ ವಿಚಾರ ನೆನಪಿಗೆ ಬಂದಾಗ ಆ ಗೂಡಿನ ಕಡೆ ನೋಡಲಾರೆ.

ಈಗ ನನ್ನ ಬಳಿ ಬೇರೊಂದು ಚಿತ್ರವಿದೆ. ಕೊಠಡಿಯನ್ನು ಸರಿಪಡಿಸುವಾಗ ನನ್ನ ಪತಿ ಮತ್ತು ಸಂದೀಪ ಇದ್ದ ಕಟ್ಟನ್ನು ತಂದು ಬಿಟ್ಟೆ. ಈ ಚಿತ್ರಕ್ಕೆ ಹೂವನ್ನು ಅರ್ಪಿಸುವಂತಿಲ್ಲ. ಅದನ್ನು ನನ್ನ ಒಡವೆಗಳ ಕೆಳಗೆ ಹುದುಗಿಸಿಟ್ಟಿದ್ದೇನೆ. ಗೂಢ

ವಾಗಿರುವುದರಿಂದ ಅದರ ಆಕರ್ಷಣೆ ಹೆಚ್ಚು. ಬಾಗಿಲನ್ನು ಮುಚ್ಚಿ ಅದನ್ನು ನೋಡುತ್ತೇನೆ. ರಾತ್ರಿ ದೀಪ ದೊಡ್ಡದು ಮಾಡಿ ಅದನ್ನೇ ನೋಡುತ್ತಿರುತ್ತೇನೆ. ಪ್ರತಿ ರಾತ್ರಿಯೂ ಸುಟ್ಟು ಬಿಡ ಬೇಕೆಂದುಕೊಳ್ಳುತ್ತೇನೆ. ನಿಟ್ಟುಸಿರು ಬಿಟ್ಟು ಮುತ್ತು ವಜ್ರಗಳ ಕೆಳಗೆ ಮರೆಸುತ್ತೇನೆ.

ಪಾಪಿ! ಪ್ರತಿಯೊಂದು ಒಡವೆಯನ್ನೂ ಎಷ್ಟು ಪ್ರೀತಿ ಆವರಿಸಿದೆ. ನಾನೇಕೆ ಸಾಯುವುದಿಲ್ಲ!

ಅನುಮಾನ ಹೆಂಗಸಿಗೆ ತಕ್ಕುದಲ್ಲವೆಂದು ಸಂದೀಪ ಪದೇ ಪದೇ ಹೇಳಿದ್ದಾನೆ. ಹೆಂಗಸಿಗೆ ಎಡಬಲಗಳಿಲ್ಲ—ಮುಂದಕ್ಕೇ ಸಾಗಬೇಕು. ನಮ್ಮ ದೇಶದ ಸ್ತ್ರೀಯರು ಎಚ್ಚತ್ತಾಗ ಆತ್ಮ ವಿಶ್ವಾಸದ "ನನಗೆ ಬೇಕು," ಎಂಬ ಕೂಗು ಕೇಳುವುದೆಂದು ಅವನು ಹೇಳಿದ್ದಾನೆ.

ಸಂದೀಪ ಒಂದು ದಿನ—'ನನಗೆ ಬೇಕು'—ಎಂಬುದೇ ಸೃಷ್ಟಿಯ ಮೊದಲ ಮಾತು. ಅದಕ್ಕೆ ನೀತಿಯ ಸೂಕ್ತಿಯಿಲ್ಲ—ಅದೇ ಬೆಂಕಿಯಾಗಿ, ಸೂರ್ಯ ತಾರೆಗಳಾಗಿ ಬೆಳಗುತ್ತದೆ. ಅದರ ಪಕ್ಷಪಾತ ಭಯಂಕರವಾದುದು. ಮನುಷ್ಯನ ಮೇಲಿನ ಆಸೆ ಯಿಂದ ಲಕ್ಷಾಂತರ ಪ್ರಾಣಿಗಳನ್ನು ಲಕ್ಷಾಂತರ ವರ್ಷಗಳು ಬಲಿ ತೆಗೆದು ಕೊಂಡಿದೆ—'ನನಗೆ ಬೇಕು' ಎಂಬ ಭಯಂಕರ ವಾಕ್ಯ ಸ್ತ್ರೀರೂಪವನ್ನು ಹೊತ್ತಿರುವುದರಿಂದ. ಹೇಡಿಗಳಾದ ಗಂಡಸರು ಮಣ್ಣು ಗೋಡೆಗಳಿಂದ ಈ ಭಯಂಕರ ಪ್ರವಾಹ ವನ್ನು ತಡೆಯಲು ಪ್ರಯತ್ನಿಸುತ್ತಾರೆ. ಅದು ನಗುತ್ತಾ ಕುಣಿ ಯುತ್ತಾ ತಮ್ಮ ಕುಂಬಳ ತೋಟದ ಬೇಲಿಯನ್ನು ಕೊಚ್ಚಿ ಕೊಂಡು ಹೋದೀತೆಂದು ಅವರಿಗೆ ಹೆದರಿಕೆ. ಯುಗಾಂತರ ಗಳಿಂದ ಪುರುಷರು ತಮ್ಮ ಅನುಕೂಲಕ್ಕೆ ಈ ಶಕ್ತಿಯನ್ನು ಕಟ್ಟಿ ಹಾಕಿದ್ದೇವೆಂದು ಹೆಮ್ಮೆ ಪಟ್ಟುಕೊಂಡರೂ ಅದು ಬೆಳೆಯು ತ್ತಲೇ ಇದೆ. ಈಗ ಆಳವಾಗಿ ಪ್ರಶಾಂತವಾಗಿದೆ. ಶಕ್ತಿ ಹೆಚ್ಚಿ

ದಂತೆ ಗೋಡೆಗಳನ್ನುರುಳಿಸಿ ' ನನಗೆ ಬೇಕು ' ಎಂದು ಅರಚುತ್ತಾ ಮುನ್ನುಗ್ಗುತ್ತದೆ."

ಸಂದೀಪನ ಈ ಮಾತುಗಳು ನನ್ನ ಹೃದಯದಲ್ಲಿ ರಣಭೇರಿಯಂತೆ ಮೊಳಗುತ್ತವೆ. ನನ್ನ ಅಂತರಾತ್ಮನ ಟೀಕೆಗಳ ಸೊಲ್ಲಡುಗುತ್ತದೆ. ಜನರ ಮಾತಿನ ಹೆದರಿಕೆ ನನಗೇಕೆ? ಆ ಹೂವಿನ ಗಿಡ, ಆ ಗೂಡಿನಲ್ಲಿರುವ ಪಠದ ಬೆಲೆಯೇನು? ನನ್ನನ್ನು ಹಂಗಿಸಲು, ಅವಮಾನಗೊಳಿಸಲು ಅವುಗಳಿಗೆ ಎಲ್ಲಿಯ ಶಕ್ತಿ? ಸೃಷ್ಟಿಯ ಆದಿಜ್ಯೋತಿ ನನ್ನಲ್ಲಿ ಉರಿಯುತ್ತಿದೆ.

ಹೂವನ್ನು ಕಿತ್ತು ಬಿಸಾಡಬೇಕೆಂದೂ ಚಿತ್ರವನ್ನು ಎಸೆಯಬೇಕೆಂದೂ, ನನ್ನಲ್ಲಿ ಸುಡುತ್ತಿದ್ದ ವಿನಾಶ ಬುದ್ಧಿಯನ್ನು ನಾಚಿಕೆ ಬಿಟ್ಟು ಪ್ರಕಟಿಸಬೇಕೆಂದೂ ಆಸೆಯಾಯಿತು. ಎತ್ತಿದ ಕೈ ಹೃದಯದ ನೋವಿನಿಂದ ನಿಂತಿತು. ಕಣ್ಣು ತುಂಬಿ ಬಂದಿತು. ಕೆಳಗೆ ಬಿದ್ದು, "ಇವಕ್ಕೆ ಕೊನೆಯೆಲ್ಲಿಯದು, ಎಲ್ಲಿಯದು," ಎಂದು ಬಿಕ್ಕಿ ಬಿಕ್ಕಿ ಅತ್ತೆ.

## ಸಂದೀಪನ ಕಥೆ

### ೪

ನನ್ನ ಕಥೆಯನ್ನೋದಿದಾಗ "ಇದೇ ಸಂದೀಪನೆ? ಬರಿಯ ಮಾತಿನ ಮೂಟೆಯೆ? ರಕ್ತಮಾಂಸದ ಹೊದಿಕೆಯ ಬರಿಯ ಪುಸ್ತಕವೆ?" ಎಂದು ಪ್ರಶ್ನಿಸಿಕೊಳ್ಳುತ್ತೇನೆ. ಭೂಮಿ ಚಂದ್ರನಂತೆ ನಿರ್ಜೀವವಸ್ತುವಲ್ಲ. ಉಸಿರಾಡುತ್ತದೆ. ನದಿ ಸಾಗರಗಳಿಂದ ಹೊರಟ ಆವಿ ಬಟ್ಟೆಯಂತೆ ಮುಚ್ಚುತ್ತದೆ. ಗಾಳಿಯಲ್ಲಿ ಹಾರುವ ಧೂಳಿನಿಂದ ಆವೃತವಾಗಿದೆ. ಹೊರಗಿನಿಂದ ಭೂಮಿಯನ್ನು ನೋಡುವವನಿಗೆ ಈ ಆವಿಧೂಳುಗಳ ಬೆಳಕಿನ ಪ್ರತಿಬಿಂಬ ಮಾತ್ರ ಕಾಣುತ್ತದೆ. ಮಹಾ ಖಂಡಗಳ ವಿಸ್ತಾರ

ಗೋಚರಿಸುವುದಿಲ್ಲ. ಬದುಕಿರುವ ಮನುಷ್ಯನೂ ಈ ಭೂಮಿಯಂತೆ, ತಾನು ಉಸುರುವ ಆಲೋಚನೆಗಳಿಂದ ಆವೃತನಾಗಿರುತ್ತಾನೆ. ಅವನಲ್ಲಿರುವ ಭೂಮಿ, ನೀರು ಕೂಡ ಮರೆಯಾಗಿ ಬೆಳಕು ನೆರಳುಗಳಿಂದ ಸೃಷ್ಟಿಯಾಗಿರುವಂತೆ ಕಾಣುತ್ತಾನೆ.

ನಾನು, ನನ್ನ ಕಥೆಯಲ್ಲಿ, ಜೀವಂತಗ್ರಹದಂತೆ, ಒಂದು ಆದರ್ಶ ಪ್ರಪಂಚವನ್ನು ತೋರುತ್ತಿದ್ದೇನೆನ್ನಿಸುತ್ತದೆ. ಆದರೆ ನಾನು—ನನಗೆ ಬೇಕಾದ ವಸ್ತು, ನಾನು ಮಾಡುವ ಆಲೋಚನೆಗಳಿಂದ ಮಾತ್ರ ಮಾಡಲ್ಪಟ್ಟಿಲ್ಲ. ನನ್ನಲ್ಲಿ, ಪ್ರೀತಿಸದ ವಸ್ತುಗಳೂ, ಇಷ್ಟವಿಲ್ಲದ,ವ್ಯಕ್ತಿತ್ವವೂ ತುಂಬಿದೆ. ನಾನು ಹುಟ್ಟುವ ಮೊದಲೆ ನನ್ನ ಸೃಷ್ಟಿಗಾರಂಭವಾಗಿತ್ತು. ವಾತಾವರಣವನ್ನು ಆರಿಸಿಕೊಳ್ಳುವಂತಿರಲಿಲ್ಲ. ಆದುದರಿಂದ ಇದ್ದುದರಲ್ಲಿ ತೃಪ್ತನಾಗಬೇಕು.

ಮಹತ್ತರವಾದುದು ಕಠಿಣವೆಂದು ನನ್ನ ಜೀವನ ಕಲ್ಪನೆ. ಸಾಧಾರಣ ಮನುಷ್ಯರು ನ್ಯಾಯವಂತರಾಗಿರಬಹುದು—ಅನ್ಯಾಯ ಮಾಡುವ ಹಕ್ಕು ಮಹಾವ್ಯಕ್ತಿಗಳಿಗೆ ಮಾತ್ರ! ಭೂಮಿಯ ಮೇಲ್ಮೈ ಸಮವಾಗಿತ್ತು. ಅಗ್ನಿಪರ್ವತ ಮೇಲಕ್ಕೆ ನುಗ್ಗಿ ಹಿರಿದಾಯಿತು. ಅದರ ನ್ಯಾಯ ತನ್ನಕಡೆಗೆ ಹೊರತು ಅಡ್ಡಿ ಬಂದ ಭೂಮಿಯ ಕಡೆಗಲ್ಲ. ವ್ಯಕ್ತಿಯಾಗಲಿ ಜನಾಂಗವಾಗಲಿ ರಾಜತ್ವಕ್ಕೆ ಬಂದುದು ಸಿದ್ಧಿಸಿದ ಅನ್ಯಾಯದಿಂದ, ಸತ್ಯವಾದ ಕ್ರೌರ್ಯದಿಂದ.

ಆದರಿಂದಲೇ ನಾನು ಅನ್ಯಾಯದ ನಿಯಮವನ್ನು ಬೋಧಿಸುವುದು. ಎಲ್ಲರಿಗೂ—"ಬಿಡುಗಡೆ ಅನ್ಯಾಯವನ್ನವಲಂಬಿಸಿದೆ. ತಾನು ಬೂದಿಯಾಗದಿರಬೇಕಾದರೆ ಅನ್ಯಾಯ ಬೇರೆ ಯಾವುದನ್ನಾದರೂ ಸುಡುತ್ತಿರಬೇಕು. ವ್ಯಕ್ತಿಯಾಗಲಿ ಜನಾಂಗವಾಗಲಿ ಅನ್ಯಾಯಮಾಡಲು ಅಶಕ್ತವಾದರೆ ಜಗತ್ತಿನ ಕಸದಬುಟ್ಟಿಗೆ ತಳ್ಳಲ್ಪಡುವುದು" ಎಂದು ಹೇಳುತ್ತೇನೆ. ಆದರೆ

ಇದು ನನ್ನ ಅಭಿಪ್ರಾಯ ಮಾತ್ರ—ವ್ಯಕ್ತಿತ್ವವಲ್ಲ. ಕವಚದ ನಡುವೆ ಮೃದುಭಾವಗಳು ಆಗಾಗ ಇಣಿಕುತ್ತವೆ. ಏಕೆಂದರೆ ನಾನು ಈ ಸ್ಥಿತಿಗೆ ಬರುವ ಮೊದಲೇ ನನ್ನ ವ್ಯಕ್ತಿತ್ವದ ಹೆಚ್ಚು ಭಾಗ ಸೃಷ್ಟಿಯಾಗಿ ಹೋಗಿತ್ತು.

ಆಗಾಗ ನನ್ನ ಶಿಷ್ಯರ ಕಾಠಿನ್ಯವನ್ನು ಪರೀಕ್ಷಿಸುತ್ತೇನೆ. ಒಂದು ದಿನ ವನ ಭೋಜನಕ್ಕೆ ಹೋದಾಗ, ಅಲ್ಲಿ ಮೇಯುತ್ತಿದ್ದ ಮೇಕೆಯನ್ನು ನೋಡಿ, "ನಿಮ್ಮಲ್ಲಿ ಯಾರು ಅದರ ಒಂದು ಕಾಲನ್ನು ಕತ್ತರಿಸಿ ತರುತ್ತೀರಿ?" ಎಂದೆ. ಎಲ್ಲರೂ ಅನುಮಾನಿಸಲು ನಾನೇ ತಂದೆ. ಒಬ್ಬ ಮೂರ್ಛೆ ಹೋದನು. ನನ್ನ ಸ್ಥೈರ್ಯವನ್ನು ನೋಡಿ ಮಾನವ ದೌರ್ಬಲ್ಯವನ್ನು ಮೀರಿದ ವ್ಯಕ್ತಿಯೆಂದು ಎಲ್ಲರೂ ನಮಸ್ಕರಿಸಿದರು. ಎಂದರೆ, ಆ ದಿನ ನನ್ನನ್ನು ಸುತ್ತುವರಿದಿದ್ದ ಕಲ್ಪನೆಯ ಮುಸುಕನ್ನು ಅವರು ಕಂಡರು. ನನ್ನ ಕರುಣೆ ಮಾರ್ದವಗಳಿಂದ ತುಂಬಿದ ಹೃದಯ ಅವರಿಗೆ ಕಾಣಲಿಲ್ಲ.

ನಿಖಿಲ ವಿಮಲೆಯರಲ್ಲಿ ಆಸಕ್ತನಾದ ನನ್ನ ಜೀವನದ ಈ ಅಧ್ಯಾಯದಲ್ಲಿ ಅಡಗಿರುವ ಭಾವನೆಗಳೆಷ್ಟೊ! ಭಾವನೆಗಳ ರೋಗ ನನ್ನ ಒಳ ಜೀವನವನ್ನು ರೂಪುಗೊಳಿಸುತ್ತಿದೆ. ಆದರೆ ನನ್ನ ಜೀವನದ ಹೆಚ್ಚು ಭಾಗ ಅವುಗಳ ಪ್ರಭಾವದ ಹೊರಗಿದೆ. ನನಗೆ ಕಾಣದಂತೆ ಹುದುಗಲು ಪ್ರಯತ್ನಿಸುತ್ತಿರುವ ನನ್ನ ಒಳ ಜೀವನಕ್ಕೂ, ಹೊರ ಜೀವನಕ್ಕೂ ಸಂಬಂಧವೇ ಇಲ್ಲ. ಇಲ್ಲದಿದ್ದರೆ ನನ್ನ ಹಂಚಿಕೆಗಳೇ ಅಲ್ಲದೆ ಜೀವವೇ ನಾಶವಾಗುವ ಸಂಭವವಿದೆ.

ಜೀವನ ಅನಿಶ್ಚಿತ—ವಿರೋಧ ಶಕ್ತಿಗಳ ಕಂತೆ. ಅದನ್ನು ಕಲ್ಪನೆಗಳಿಂದ ಒಂದು ಅಚ್ಚಿನಲ್ಲಿ ಎರಕ ಹುಯ್ಯಲು,-ಗೆಲುವಿನ ನಿಶ್ಚಯಕ್ಕೆ ತರಲು ನಾವು ಪ್ರಯತ್ನಿಸುತ್ತೇವೆ. ಅಲೆಕ್ಸಾಂಡರನಿಂದ, ಅಮೆರಿಕದ ಕೋಟ್ಯಾಧೀಶ್ವರರವರೆಗೆ ಕತ್ತಿ ಅಥವಾ

ಸಾಣ್ಯದ ಅಚ್ಚಾಗಿ ತಮ್ಮ ನಿಜ ಸ್ವರೂಪವನ್ನು ಕಂಡುಕೊಳ್ಳು ತ್ತಾರೆ—ಅದೇ ಅವರ ಸಿದ್ಧಿಯ ಕಾರಣ.

ನಿಖಿಲನಿಗೂ ನನಗೂ ಇರುವ ವಾದ-ನಾವಿಬ್ಬರೂ " ನಿನ್ನ ಸತ್ಯವನ್ನು ತಿಳಿ " ಎಂಬ ಮಾತನ್ನೇ ಹೇಳಿದರೂ ಅವನ ಅರ್ಥದ ಪ್ರಕಾರ ಆ ಅರಿವುಂಟಾಗುವುದಿಲ್ಲ.

ಒಂದು ದಿನ ನಿಖಿಲ—" ನಿನ್ನ ಜಯ ಆತ್ಮವನ್ನು ಬಲಿ ಕೊಡುವ ಜಯ. ಆತ್ಮ, ವಿಜಯಕ್ಕಿಂತ ಹೆಚ್ಚಿನದು " ಎಂದನು.

ನಾನು—" ನಿನ್ನ ಮಾತುಗಳಿಗೆ ಅರ್ಥವಿಲ್ಲ "—ಎಂದೆ.

"ಅದಕ್ಕೇನು ಮಾಡಲಾಗುತ್ತೆ. ಯಂತ್ರ ಸ್ಪಷ್ಟವಾಗಿರುತ್ತೆ, ಜೀವನ ಹಾಗಲ್ಲ. ಜೀವನವನ್ನು ಸ್ಪಷ್ಟವಾಗಿಸಲು ಅದನ್ನು ಯಂತ್ರವಾಗಿ ಮಾರ್ಪಡಿಸಿದರೆ ಆ ಸ್ಪಷ್ಟತೆ ಸತ್ಯವಾಗಲಾರದು. ಆತ್ಮ, ಜಯದಷ್ಟು ಸ್ಪಷ್ಟವಲ್ಲ; ಆದುದರಿಂದ ಜಯದಲ್ಲಿ ಆತ್ಮ ವನ್ನು ಹುಡುಕಿದರೆ ಕಳೆದುಕೊಳುತ್ತೀ."

" ಹಾಗಾದರೆ ಈ ವಿಚಿತ್ರ ಆತ್ಮ ಇರುವುದೆಲ್ಲಿ ? "

" ಜಯವನ್ನು ದಾಟಿ ಅನಂತತೆಯಲ್ಲಿ ತನ್ನನ್ನು ಕಂಡಾಗ."

" ಇದಕ್ಕೂ ದೇಶಸೇವೆಗೂ ಸಂಬಂಧವೇನು ? "

" ಎಲ್ಲಾ ಒಂದೆ. ದೇಶದ ಗುರಿ ದೇಶ ಮಾತ್ರವಾದರೆ ಆತ್ಮವನ್ನು ಕಳೆದುಕೊಂಡು ಜಯ ಹೊಂದುತ್ತದೆ. ಮಹದ್ವಸ್ತು ವನ್ನು ಎಲ್ಲಕ್ಕಿಂತ ಮಹತ್ತರವೆಂದು ತಿಳಿದಾಗ ಜಯ ಪಡೆಯದಿರ ಬಹುದು, ಆದರೆ ಆತ್ಮ ಸಿದ್ಧಿ ಪಡೆಯುತ್ತದೆ. "

" ಚರಿತ್ರೆಯಲ್ಲಿ ಇದಕ್ಕೆ ಉದಾಹರಣೆಯಿದೆಯೆ ? "

" ಜಯವೊಂದನ್ನೇ ಅಲ್ಲದೆ, ಉದಾಹರಣೆಯನ್ನೂ ಅಲಕ್ಷಿ ಸುವ ಶಕ್ತಿ ಮನುಷ್ಯನಿಗಿದೆ. ಬೀಜದಲ್ಲಿ ಹೂವಿರುವ ನಿದರ್ಶನ ಕಾಣದಿರುವಂತೆ ಇದಕ್ಕೂ ಉದಾಹರಣೆಯಿಲ್ಲದಿರಬಹುದು. ಆದರೂ ಬೀಜದಲ್ಲಿ ಹೂವಾಗುವ ಆತುರವಿದ್ದೇ ಇದೆ. "

ನಿಖಿಲನ ದೃಷ್ಟಿಕೋಣ ನನಗರ್ಥವಾಗುವುದಿಲ್ಲವೆಂದಲ್ಲ.

ಅದೇ ಇರುವ ಅಪಾಯ. ಭರತ ಭೂಮಿಯಲ್ಲಿ ಹುಟ್ಟಿದುದ ರಿಂದ ಅದರ ಅಧ್ಯಾತ್ಮದ ವಿಷ ನನ್ನ ರಕ್ತದಲ್ಲೂ ಸೇರಿದೆ. ಆತ್ಮ ಯಜ್ಞದ ಹಾದಿಯ ಹುಚ್ಚನ್ನು ಎಷ್ಟು ಘೋಷಿಸಿದರೂ, ನಾನೇ ಅದರಿಂದ ತಪ್ಪಿಸಿಕೊಳ್ಳಲಾರೆ.

ಇದರಿಂದಲೇ ನಮ್ಮ ದೇಶದಲ್ಲಿ ವ್ಯತಿರಿಕ್ತ ಸಮಸ್ಯೆಗಳು ತಲೆ ದೋರುವುದು. ಜಾತಿ, ರಾಷ್ಟ್ರೀಯತೆಗಳೆರಡೂ ಬೇಕು. ಭಗವದ್ಗೀತೆಯೊಡನೆ ವಂದೇಮಾತರಂ ಹಾಡುತ್ತೇವೆ. ಎರ ಡಕ್ಕೂ ಜಯವಿಲ್ಲ. ನಮ್ಮ ನಾಗಸ್ವರದೊಂದಿಗೆ ಆಂಗ್ಲ ಸಿಪಾಯೀ ವಾದ್ಯಗಳನ್ನು ಬಾರಿಸಿದಂತೆ. ಈ ಗೊಂದಲವನ್ನು ನಿವಾರಿಸುವುದೇ ನನ್ನ ಜೀವನ ಧ್ಯೇಯವಾಗಬೇಕು.

ನನಗೆ ಬೇಕಾದುದು ಪಾಶ್ಚಾತ್ಯ ರೀತಿ, ಇಂಡಿಯದ್ದಲ್ಲ. ಆಗ ಜೀವನರಂಗದ ಧ್ವಜವಾಗಿ ಪ್ರಕೃತಿ ಮಾತೆ ಇತ್ತಿರುವ ರಾಗ ಪಿಪಾಸೆಯನ್ನು ಪ್ರದರ್ಶಿಸಲು ನಾವು ನಾಚಿಕೊಳ್ಳಬೇಕಾ ಗಿಲ್ಲ. ಆಸೆ ಸುಂದರವಾದುದು–ಕೊಚ್ಚೆಯಿಂದ ಎದ್ದು ಬಂದ ಕಮಲದಂತೆ ನಿರ್ಮಲವಾದುದು. ಅದನ್ನು ತೊಳೆಯಲು ಸಾಬೂನಿನ ಅಗತ್ಯವಿಲ್ಲ.

೫

ಕೆಲವು ದಿನಗಳಿಂದ ಒಂದು ಪ್ರಶ್ನೆ ನನ್ನನ್ನು ಬಾಧಿಸು ತ್ತಿದೆ. ನನ್ನ ಜೀವನವನ್ನು ವಿಮಲೆಯ ಜೀವನದೊಂದಿಗೆ ಏಕೆ ತೊಡಕಿಸಿದೆ? ಪ್ರತಿ ಅಡ್ಡಿಗೂ ಸಿಕ್ಕಿ ಬೀಳಲು ನಾನೇನು ತೇಲುವ ತುಂಡೆ?

ವಿಮಲೆಯನ್ನು ಬಯಸುವುದರಲ್ಲಿ ನನಗೇನೂ ಅವಮಾನ ವಿಲ್ಲ. ಅವಳೂ ನನ್ನನ್ನು ಬಯಸುವುದು ಸ್ಪಷ್ಟವಾಗಿರುವುದ ರಿಂದ ಅವಳಲ್ಲಿ ನನಗೆ ಸ್ವಾಮ್ಯವಿದೆ. ಹಣ್ಣಿನ ನಿರಂತರ ಹಕ್ಕು ರೆಂಬೆಯದಲ್ಲ, ಹಣ್ಣು ಮಾಗಿದರೆ ರೆಂಬೆಯ ಹಿಡಿತ ಸಡಿಲವಾಗ

ಬೇಕು. ಅದರ ರುಚಿ ನನ್ನದು ; ಅದರ ಸೃಷ್ಟಿಯೇ, ನೀತಿಯೇ ನನ್ನ ಕೈವಶವಾಗುವುದಕ್ಕಾಗಿ. ಅದು ನಿರರ್ಥಕವಾಗದಿರಬೇಕಾದರೆ ನಾನು ಅದನ್ನು ಕಿತ್ತುಕೊಳ್ಳಬೇಕು.

ಆದರೆ ನಾನೂ ಬಂಧನಕ್ಕೆ ಸಿಕ್ಕಿಬಿಡುತ್ತಿದ್ದೇನೆ. ನಾನು ಹುಟ್ಟಿರುವುದು ಆಳುವುದಕ್ಕೆ; ಜನರೆಂಬ ಕುದುರೆಯ ಮೇಲೆ ಮನಸ್ಸು ಬಂದಂತೆ ಸವಾರಿ ಮಾಡಲು; ಗುರಿಯ ಅರಿವು ಕಡಿವಾಣಹಿಡಿದ ನನಗೆ ಮಾತ್ರ, ಅದಕ್ಕೆ ಮುಳ್ಳು. ಕೊಚ್ಚೆ ! ಈ ಕುದುರೆ ನನಗಾಗಿ ಕೆನೆಯುತ್ತಾ, ಕುಣಿಯುತ್ತಾ ಬಾಗಿಲಲ್ಲಿ ಕಾದು ನಿಂತಿದೆ ಇಂತಹ ಅವಕಾಶವನ್ನು ದೂಡುತ್ತಾ ನಾನು ಮಾಡುತ್ತಿರುವುದೇನು ?

ನಾನು ಬಿರುಗಾಳಿಯಂತೆ—ನಾನು ಉದುರಿಸಿದ ಹೂಗಳು ನನಗೆ ಅಡ್ಡಬರಲಾರವು, ಎಂದು ಭಾವಿಸಿದ್ದೆ. ಆದರೆ ಈಗ ಹೂವಿನ ಸುತ್ತಲೂ ತಿರುಗುವ ದುಂಬಿಯಾಗಿದ್ದೇನೆ. ಕಲ್ಪನೆಯ ಬಣ್ಣ ಬರಿಯ ಹೊರಮೈ. ಒಳಗಿನ ಮನುಷ್ಯ ಬದಲಾಯಿಸುವುದಿಲ್ಲ. ನನ್ನ ಒಳಹೊಕ್ಕು ನೋಡಿದರೆ ನಾನು ಪಂಚು ನಿಖಿಲರಿಗಿಂತ ಬೇರೆಯಲ್ಲವೆಂದು ಇತರರು ತಿಳಿಯಬಹುದು !

ರಾತ್ರಿ, ದಿನಚರಿಯಲ್ಲಿ ನನ್ನ ಹಿಂದಿನ ಕಥೆಯನ್ನೋದುತ್ತಿದ್ದೆ. ಆಗತಾನೆ ಓದುಮುಗಿದು ತತ್ತ್ವಶಾಸ್ತ್ರದಿಂದ ತಲೆ ತುಂಬಿತ್ತು. ಆಗಲೂ ಕಲ್ಪನೆಗಳಿಗೆಡೆಕೊಡಬಾರದೆಂದೂ ನಿಜಾಂಶದ ಮೇಲೆ ಜೀವನವನ್ನು ನಿಲ್ಲಿಸಬೇಕೆಂದೂ ಮನಸ್ಸು ಮಾಡಿದ್ದೆ. ಆದರೆ ಈಗ ಆಗಿರುವುದೇನು ? ದಾರ ಹರಿಯದಿದ್ದರೂ ತೂತುಗಳೇ ದೊಡ್ಡದಾಗಿರುವ ಬಲೆಯಂತಾಗಿದೆ. ಎಷ್ಟು ಬಡಿದಾಡಿದರೂ ಅವು ಸೋಲುವುದಿಲ್ಲ. ದಾರದಮೇಲೆಯೇ ಜಾಗರೂಕತೆಯಿಂದ ನಡೆದುಹೋಗುತ್ತಿರುವಾಗ ತೂತಿನಲ್ಲಿ ಸಿಕ್ಕಿಬಿದ್ದೆ. ಪಶ್ಚಾತ್ತಾಪ ಕೂಡ ಆಗುತ್ತಿದೆ.

" ನನಗೆ ಬೇಕಾದ ವಸ್ತು ಇಲ್ಲಿದೆ. ತೆಗೆದುಕೊಳ್ಳುತ್ತೇನೆ,"

ಎನ್ನುವುದು ನೇರವಾದ ಹಾದಿ. ಆ ಹಾದಿಯಲ್ಲಿ ಧೈರ್ಯದಿಂದ ನಡೆದವರಿಗೆ ಆಸೆ ಸಿದ್ಧಿಸುವುದು. ಆದರೆ ಈ ಹಾದಿ ಸುಗಮ ವಲ್ಲ. ಸಹಾನುಭೂತಿಯು ದಾರಿ ತಪ್ಪಿಸಿ ದೃಷ್ಟಿಯನ್ನು ಮಂದ ಮಾಡುತ್ತದೆ.

ವಿಮಲೆ ಸಿಕ್ಕಿಬಿದ್ದ ಹರಿಣಿಯಂತೆ ಒದ್ದಾಡುತ್ತಿದ್ದಾಳೆ. ಕಣ್ಣುಗಳಲ್ಲಿ ಎಷ್ಟು ಗಾಬರಿ! ಕಟ್ಟುಗಳನ್ನು ಸಡಿಲಿಸಲು ಎಷ್ಟು ಒದ್ದಾಟ! ಬೇಟೆಗಾರನು ಈ ನೋಟದಿಂದ ಉಲ್ಲಾಸಪಡ ಬೇಕು. ನನಗೂ ಆನಂದವೆ; ಆದರೆ ಮನಸ್ಸು ಕರಗುತ್ತದೆ. ಆದರಿಂದಲೇ ನೇಣನ್ನು ಬಿಗಿಮಾಡಲು ಅನುಮಾನಿಸುತ್ತಾ ದಡ ದಲ್ಲಿ ನಿಂತಿದ್ದೇನೆ.

ಅವಳಲ್ಲಿಗೆ ಓಡಿ, ಕೈಹಿಡಿದು ಎದೆಗೊತ್ತಿಕೊಳ್ಳಬೇಕೆನ್ನುವ ಗಳಿಗೆಗಳೆಷ್ಟೋ ಆಗಿವೆ. ಹಾಗೆ ನಾನು ಮಾಡಿದ್ದರೆ ಅವಳು ಬದಲಾಡುತ್ತಿರಲಿಲ್ಲ. ಪ್ರಪಂಚವನ್ನೇ ಬದಲಾಯಿಸುವ ಸಂದಿಗ್ಧ ಸಮಯ ಒದಗುತ್ತಿದೆಯೆಂದು ಅವಳು ಬಲ್ಲಳು. ದುರೂಹ್ಯವಾದ ಗುಹೆಯ ಮುಂದೆ ನಿರೀಕ್ಷೆಯಿಂದ ನಿಂತಿದ್ದರೂ ಕಣ್ಣು ಭಯ ಮಿಶ್ರಿತ ಆನಂದದಿಂದ ಹೊಳೆಯುತ್ತಿದ್ದರೂ ಅವಳ ಮುಖ ಸಪ್ಪಗಾಯಿತು. ನಮ್ಮ ವಿಧಿ ಉಸಿರುಕಟ್ಟಿ ಕಾಯುತ್ತಿರುವ ಆ ಗಳಿಗೆ ಬಂದಾಗ ಅನಂತತೆ ರೂಪುಗೊಳ್ಳುವುದು.

ಆದರೆ ಆ ಗಳಿಗೆಯನ್ನು ನಾನು ಆತುಕೊಳ್ಳಲಿಲ್ಲ. ಖಂಡಿತ ವಾದುದನ್ನು ಸತ್ಯವಾಗಿ ಮಾಡಲು ಸರ್ವ ಬಲದಿಂದ ಪ್ರಯತ್ನಿ ಸಲಿಲ್ಲ. ನನ್ನಲ್ಲಿರುವ ರಹಸ್ಯ ಶಕ್ತಿಗಳೇ ನನಗೆ ಅಡ್ಡಿಯಾಗಿ ನಿಂತಿವೆ.

ರಾವಣ—ಅವನೇ ರಾಮಾಯಣದ ನಿಜವಾದ ನಾಯಕ ನೆಂದು ನನ್ನ ಭಾವನೆ—ಹಾಗೆಯೇ ನಾಶವಾದುದು. ಸೀತೆ ಯನ್ನು ಬಲಾತ್ಕಾರದಿಂದ ವಶಮಾಡಿಕೊಳ್ಳದೆ ಅವಳ ಇಚ್ಛೆಗೆ ಕಾಯುತ್ತಾ ಅಶೋಕವನದಲ್ಲಿಟ್ಟನು. ಅಂತಹ ಮಹದ್ವ್ಯಕ್ತಿ

ಯಲ್ಲಿ ಈ ದೌರ್ಬಲ್ಯ ಎಲ್ಲಾ ಪ್ರಯತ್ನವನ್ನೂ ನಿಷ್ಫಲ ಮಾಡಿತು. ಅಂತಹ ದೌರ್ಬಲ್ಯದಿಂದಲೇ ವಿಭೀಷಣನನ್ನೂ ಕ್ಷಮಿಸಿ, ತನ್ನ ಸಾವಿಗೆ ದಾರಿ ಮಾಡಿಕೊಂಡನು.

ಹೀಗೆ ದುರಂತತೆಗೆ ನಾವೇ ಕಾರಣರು. ಎಲ್ಲಿಯೋ ಅಡಗಿದ್ದು ಈ ದೌರ್ಬಲ್ಯ ಕಡೆಯಲ್ಲಿ ಸರ್ವನಾಶ ಮಾಡುತ್ತದೆ. ಮನುಷ್ಯನಿಗೆ ತನ್ನ ಅರಿವಿಲ್ಲದಿರುವುದೇ ದುಃಖ ಸಂಗತಿ.

೬

ನಿಖಿಲ ಹುಚ್ಚನೆಂದು ನಾನು ನಕ್ಕರೂ ಅವನು ನನ್ನ ಗೆಳೆಯನೆಂದು ಮರೆಯಲಾರೆ. ಮೊದಲು ಅವನ ವಿಚಾರ ಹೆಚ್ಚಾಗಿ ಹಚ್ಚಿಕೊಳ್ಳಲಿಲ್ಲ. ಈಗೀಗ ನನ್ನ ಮನಸ್ಸಿಗೆ ನೋವೂ ನಾಚಿಕೆಯೂ ಆಗುತ್ತಿವೆ. ಅವನೊಡನೆ ಮೊದಲಿನಂತೆ ಉತ್ಸಾಹದಿಂದ ಚರ್ಚೆಮಾಡಲು ಪ್ರಯತ್ನಿಸಿದರೂ ಅದರಲ್ಲಿ ನಂಬಿಕೆಯಿಲ್ಲ. ಅವನ ಮಾತಿಗೆ ಒಪ್ಪುವಷ್ಟು ಅಸ್ವಾಭಾವಿಕವಾಗಿ ಕೂಡ ಮಾತನಾಡುತ್ತೇನೆ. ಆದರೆ ಅಂತಹ ವಂಚನೆ ನನಗಾಗಲಿ ನಿಖಿಲನಿಗಾಗಲಿ ಸ್ವಾಭಾವಿಕವಲ್ಲ. ಈ ಒಂದು ವಿಚಾರದಲ್ಲಿ ನಮಗೆ ಭೇದವಿಲ್ಲ. ಆದುದರಿಂದ ಈಗೀಗ ಅವನನ್ನು ಸಂಧಿಸದಿರಲು ಪ್ರಯತ್ನಿಸುತ್ತಿದ್ದೇನೆ.

ಇದೆಲ್ಲಾ ದೌರ್ಬಲ್ಯದ ಚಿಹ್ನೆಗಳು. ತಪ್ಪನ್ನೊಪ್ಪಿಕೊಂಡರೆ ಅದೇ ನಿಜವಾಗಿ, ಬಿಡಿಸಿಕೊಳ್ಳದ ಹಾಗೆ ಗಂಟಲನ್ನು ಬಿಗಿಯುತ್ತದೆ. ನಿಖಿಲನೊಡನೆ ಇಂತಹ ವಿಚಾರಗಳನ್ನು ಧೈರ್ಯವಾಗಿ ಎದುರಿಸಬೇಕೆಂದೂ, ಸತ್ಯದಿಂದ ಸ್ನೇಹಿತರಲ್ಲಿ ಒಡಕುಂಟಾಗಬಾರದೆಂದೂ ಹೇಳಬೇಕೆನ್ನಿಸುತ್ತದೆ.

ನಾನು ನಿಜವಾಗಿ ಹೇಡಿಯಾಗಿದ್ದೇನೆ. ಇಂತಹ ಹೇಡಿತನವನ್ನು ವಿಮಲೆ ಮೆಚ್ಚಲಿಲ್ಲ. ನಿಶ್ಚಲವಾದ ನನ್ನ ಪೌರುಷದ ಶಕ್ತಿಯಲ್ಲಿ ಅವಳ ರೆಕ್ಕೆಗಳು ಬೆಂದುವು. ಹೊಗೆಯಿಂದ ನನ್ನ

ಕಾಂತಿ ಮರೆಯಾದರೆ, ಅವಳೂ ಗಾಬರಿಯಾಗಿ ಹಿಂದೆಗೆಯು ವಳು. ಬೇಸರವಾಗಿ ನನ್ನ ಕೊರಳಿಗೆ ಹಾಕಿದ ಮಾಲೆಯನ್ನು ತೆಗೆಯಲು ಕೈ ಚಾಚುವಳು. ಸಾಧ್ಯವಾಗದೆ ಕಣ್ಣುಮುಚ್ಚಿ ನೋಟವನ್ನು ಮರೆಯಲು ಪ್ರಯತ್ನಿಸುವಳು.

ಆದರೆ ನನ್ನ ಹಾದಿಯನ್ನು ಬದಲಾಯಿಸಲಾರೆ. ದೇಶಸೇವೆ ಯಿಂದ ಹಿಂದೆಗೆಯುವ ಹಾಗಿಲ್ಲ. ವಿಮಲೆಯನ್ನು ದೇಶದೊಡನೆ ಬೆರಸುವೆ. ದೇಶದ ಅಂತಃಸಾಕ್ಷಿಯ ತೆರೆಯನ್ನು ಕಿತ್ತೆಸೆದ ಪ್ರಚಂಡ ಪಶ್ಚಿಮ ಮಾರುತ ವಿಮಲೆಯ ಮುಖದಿಂದ ಪತ್ನೀತ್ವದ ತೆರೆ ಯನ್ನು ಸೆಳೆದಿದೆ. ಅದರಲ್ಲಿ ಅವಮಾನವಿಲ್ಲ. ಜನ ಭಾರದಿಂದ ತೂಗುತ್ತಿರುವ ವಂದೇ ಮಾತರಂ ಧ್ವಜ ಹೊತ್ತ ಹಡಗು ನನ್ನ ಬಲ ದರ್ಪಗಳಿಗೂ, ನನ್ನ ಪ್ರೇಮಕ್ಕೂ ತೂಗು ತೊಟ್ಟಿಲು.

ವಿಮಲೆಗೆ ಕಾಣುವ ಸ್ವಾತಂತ್ರ್ಯದ ಬೆಳಕಿನಲ್ಲಿ ಅವಳಿಗರಿ ಯದೆಯೇ ನಿಸ್ಸಂಕೋಚವಾಗಿ ಅವಳ ಕಟ್ಟುಗಳು ಕಳಚಿ ಬೀಳುವುವು.

ಈ ವಿನಾಶ ಶಕ್ತಿಯ ಸೌಂದರ್ಯಕ್ಕೆ ಮರುಳಾಗಿ ಅವಳು ಕ್ರೌರ್ಯಕ್ಕೆ ಹಿಂದೆಗೆಯುವುದಿಲ್ಲ. ಪ್ರಪಂಚದ ಸೌಂದರ್ಯವನ್ನು ನಿಶ್ಚಲವಾಗಿ ಕಾಯುವ ಅಸ್ತಿತ್ವದ ಶಕ್ತಿಯ ಕ್ರೌರ್ಯವನ್ನು ವಿಮಲೆಯಲ್ಲಿ ಕಂಡಿದ್ದೇನೆ.

ಪುರುಷನು ಸುತ್ತಿರುವ ಸಂಕೋಲೆಗಳಿಂದ ಸ್ತ್ರೀಯರನ್ನು ಬಿಡುಗಡೆ ಮಾಡಿದರೆ, ನಿಸ್ಸಂಕೋಚ, ನಿಷ್ಕರುಣ ಕಾಳಿಯ ಮೂರ್ತಿಯನ್ನು ಭೂಲೋಕದಲ್ಲಿ ಕಾಣುತ್ತೇವೆ. ನಾನು ಕಾಳಿಯ ಭಕ್ತ ; ಒಂದು ದಿನ ವಿಮಲೆಯನ್ನು ವಿನಾಶ ಪೀಠದ ಮೇಲೆ ಕುಳ್ಳಿರಿಸಿ ನಿಜವಾಗಿ ಪೂಜಿಸುತ್ತೇನೆ. ಇದಕ್ಕೆ ಸಿದ್ಧನಾಗುತ್ತೇನೆ.

ನಾವಿಬ್ಬರೂ ಕಾಲ್ದೆಗೆಯುವಂತಿಲ್ಲ. ಒಬ್ಬರನ್ನೊಬ್ಬರು ನಾಶ ಮಾಡಬಹುದು ; ದ್ವೇಷಿಸಬಹುದು ; ಆದರೆ ಒಬ್ಬರಿಂ ದೊಬ್ಬರಿಗೆ ಬಿಡುಗಡೆಯಿಲ್ಲ.

# ಅಧ್ಯಾಯ ೫
# ನಿಖಿಲನ ಕಥೆ

## ೪

ಶ್ರಾವಣ ಮಾಸದ ಪ್ರವಾಹದಿಂದ ಎಲ್ಲವೂ ಕಂಪಿಸುತ್ತಿದೆ. ಬತ್ತದ ಎಳೆಯ ಪೈರು ಎಳೆ ಮಗುವಿನ ದೇಹದಂತೆ ಮಿರುಗುತ್ತಿದೆ. ಪಕ್ಕದ ಮನೆಯ ತೋಟಕ್ಕೆ ನೀರು ನುಗ್ಗಿದೆ. ಅರುಣೋದಯದ ಬೆಳಕು ಭೂಮಿಯ ಮೇಲೆ ಚೆಲ್ಲಿದೆ. ನಾನೇಕೆ ಆನಂದದಿಂದ ಹಾಡಲಾರೆ? ದೂರದ ನದಿಯ ನೀರು ಬೆಳಕಿನಲ್ಲಿ ಹೊಳೆಯುತ್ತಿದೆ. ಎಲೆಗಳು ಮಿಂಚುತ್ತಿವೆ. ಬತ್ತದ ಪೈರಿನ ತರಂಗಗಳ ಮೇಲೆ ಚಿನ್ನದ ಗೆರೆಗಳು ಹಾದು ಹೋಗುತ್ತಿವೆ. ಶರತ್ಕಾಲದ ಈ ಗಾನ ಲಹರಿಯಲ್ಲಿ ನಾನು ಮಾತ್ರ ಮೂಕನಾಗಿದ್ದೇನೆ. ಎದೆಗೆ ತಾಕಿದ ಜಗತ್ತಿನ ಬೆಳಕನ್ನು ಪ್ರತಿಬಿಂಬಿಸಲಾರದೆ ಇದ್ದೇನೆ.

ನನ್ನ ಅನಿಶ್ಚಿತ ಹೃದಯವೇ ನನ್ನ ನಾಶಕ್ಕೆ ಮೂಲ. ದಿನ ರಾತ್ರಿ, ನನ್ನಂತಹವನೊಡನೆ ಇರಲು ಯಾರಿಗೆ ಸಾಧ್ಯ? ವಿಮಲೆಯಲ್ಲಿ ಜೀವನದ ಉತ್ಸಾಹ ತುಂಬಿರುವುದರಿಂದ, ಮದುವೆಯಾಗಿ ಒಂಭತ್ತು ವರ್ಷಗಳಾದರೂ ನನಗೆ ಒಂದು ದಿನವೂ ಅವಳಲ್ಲಿ ಬೇಸರವಾಗಲಿಲ್ಲ. ಹೀಗಿರುವಾಗ ಯಾರದು ತಪ್ಪು? ಕವಿ ವಿದ್ಯಾಪತಿಯಂತೆ ನಾನು ಕೂಡ—

> ಆಷಾಢದಾಗಸವು ಬಿರಿದು
> ಸುರಿಸುತಿಹುದಾವೇಶದಲಿ ಮಳೆಯ;
> ಆದರಯ್ಯೋ, ಹೃದಯ ಬರಿದು!

ಎಂದು ಅಳಬೇಕಾಗಿದೆ.

ನನ್ನ ಮನೆಯ ಬಾಗಿಲನ್ನು ತೆರೆಯಲು ಸಾಧ್ಯವಿಲ್ಲ. ಅದು ಬರಿದಾಗಿಯೇ ಉಳಿಯಬೇಕು. ಆದರೆ ಅದರ ದೇವಿ ಹೊರಗಿದ್ದಳೆಂದು ನನಗೆ ಇದುವರೆಗೂ ತಿಳಿಯಲಿಲ್ಲ. ನನ್ನ ಭಕ್ತಿಯನ್ನು ಸ್ವೀಕರಿಸಿ ವರಕೊಟ್ಟಳೆಂದೇ ಭಾವಿಸಿದ್ದೆ. ಆದರೆ ನನ್ನ ಮನೆ ಬರಿದಾಗಿಯೇ ಇದೆ.

ಪ್ರತಿವರ್ಷ ಈ ಸಮಯದಲ್ಲಿ ನಾವಿಬ್ಬರೂ ಸಮೀಪದ ನದಿಯ ಮೇಲೆ ದೋಣಿಯಲ್ಲಿ ಹೋಗುವ ಪದ್ಧತಿಯಿತ್ತು. ಪ್ರತಿ ಹಾಡೂ ಪುನಃ ಪಲ್ಲವಿಯನ್ನೇ ಮುಟ್ಟಬೇಕೆಂದು ವಿಮಲೆಗೆ ಹೇಳುತ್ತಿದ್ದೆ. ನೀರಿನಿಂದ ಭಾರವಾದ ಗಾಳಿ ನದಿಯಮೇಲೆ ಹಾದು ಹೋಗುವಲ್ಲಿ, ಹಸಿರು ಭೂಮಿ, ನೆರಳಿನ ಪರದೆಯನ್ನು ಮುಖದ ಮೇಲೆ ಸರಿಸಿ ನೀರಿನೊಡನೆ ಸರಸವಾಡುವಲ್ಲಿ, ಆ ಮನೋಹರ ಪ್ರಕೃತಿಯಲ್ಲಿ ಎಲ್ಲ ಹಾಡುಗಳ ಪಲ್ಲವಿ ಇದೆಯೆಂದು ಹೇಳುತ್ತಿದ್ದೆ. ಅಲ್ಲಿ, ಜಗದಾದಿಯಲ್ಲಿ ಸ್ತ್ರೀಪುರುಷರ ಸಮಾಗಮವಾಯಿತು—ನಾಲ್ಕುಗೋಡೆಗಳ ನಡುವೆ ಅಲ್ಲ. ಅದರಿಂದ ನಾವಿಬ್ಬರೂ ವರ್ಷಕ್ಕೊಂದು ಸಲವಾದರೂ ಪ್ರಕೃತಿ ಮಾತೆಯ ಮಡಿಲಿಗೆ ಬಂದು ಹೃದಯ ಮಿಲನದ ಮೊದಲ ಸುಂದರ ಸಂಗೀತಕ್ಕೆ ಸರಿಯಾಗಿ ನಮ್ಮ ಪ್ರೇಮದ ಶ್ರುತಿ ಸರಿಪಡಿಸಿಕೊಳ್ಳಬೇಕೆಂದು ಹೇಳುತ್ತಿದ್ದೆ.

ಮದುವೆಯ ಮೊದಲ ಎರಡು ವರ್ಷೋತ್ಸವಗಳಾದಾಗ ನಾನು ಕಲ್ಕತ್ತೆಯಲ್ಲಿ ಓದುತ್ತಿದ್ದೆ. ಅದಾದಮೇಲೆ, ಏಳುವರ್ಷ ಕಾಲ ತಪ್ಪದೆ, ಆ ಉತ್ಸವವನ್ನು ಅರಳುವ ಕಮಲಗಳ ನಡುವೆ ಆಚರಿಸಿದ್ದೇವೆ. ಈಗ ಮುಂದಿನ ಘಟ್ಟ ಆರಂಭವಾಯಿತು.

ಪುನಃ ಶ್ರಾವಣಮಾಸ ಬಂದಿತೆಂಬುದನ್ನು ಮರೆಯಲಾರೆ. ವಿಮಲೆಗೆ ಜ್ಞಾಪಕವಿದೆಯೆ? ನನ್ನನ್ನು ಮೌನ ಆವರಿಸಿದೆ.

ಆಷಾಢದಾಗಸವು ಬಿರಿದು
ಸುರಿಸುತಿಹುದಾವೇಶದಲಿ ಮಳೆಯ ;
ಆದರಯ್ಯೋ, ಹೃದಯ ಬರಿದು !

ಪ್ರೇಮಿಗಳ ವಿರಹದಿಂದ ಬರಿದಾದ ಮನೆಯಲ್ಲಿ ಸಂಗೀತದ ಮಾರ್ದನಿ ಉಳಿದಿರುತ್ತದೆ. ಆದರೆ ಹೃದಯಗಳು ದೂರವಾಗಿ ಬರಿದಾದ ಮನೆಯ ಮೌನ ಭಯಂಕರವಾದುದು. ನೋವಿನ ದನಿಗೆ ಕೂಡ ಅಲ್ಲಿ ಸ್ಥಳವಿಲ್ಲ.

ನಾನು ನೋವಿನ ಕರೆಯನ್ನಡಗಿಸಬೇಕು. ನಾನು ಅಳಲು ವಷ್ಟುದಿನ ವಿಮಲೆಗೆ ಬಿಡುಗಡೆಯಿಲ್ಲ. ಅವಳನ್ನು ಸಂಪೂರ್ಣ ವಾಗಿ ಬಿಡುಗಡೆ ಮಾಡುವವರೆಗೂ ನನಗೂ ಅಸತ್ಯದಿಂದ ಬಿಡು ಗಡೆಯಿಲ್ಲ.

ಒಂದು ವಿಚಾರ ಅರ್ಥವಾಯಿತು. ಮನುಷ್ಯ ಪ್ರೇಮಕ್ಕೆ ಅತಿ ಪ್ರಾಮುಖ್ಯತೆ ಕೊಟ್ಟು, ಅದರ ಹತೋಟಿಯನ್ನೇ ಕಳೆದು ಕೊಂಡಿದ್ದಾನೆ. ಪೂಜೆಯಿಂದ ಕಾಮವನ್ನು ದೇವರಾಗಿ ಮಾಡಿ ದ್ದಾನೆ. ಆದರೆ ಆ ಗುಡಿಯಲ್ಲಿ ಇನ್ನು ನರಬಲಿಸಾಕು.

ಬೆಳಗ್ಗೆ ಪುಸ್ತಕ ತರಲು ಮಲಗುವ ಕೋಣೆಗೆ ಹೋದೆ. ಬೆಳಕಿನಲ್ಲಿ ಅಲ್ಲಿ ಹೋಗಿ ಬಹಳ ದಿನಗಳಾಗಿತ್ತು. ಈದಿನ ಅಲ್ಲಿ ಹೋದಾಗ ಹೃದಯ ಹಿಂಡಿತು. ವಿಮಲೆಯ ಸೀರೆ ಗೂಟದ ಮೇಲಿತ್ತು. ಮೇಜಿನ ಮೇಲೆ ಬಾಚಣಿಗೆ, ಸುಗಂಧ ದ್ರವ್ಯಗಳು, ಕುಂಕುಮ! ಕೆಳಗಡೆ ಚಿನ್ನದ ದಾರದಿಂದ ಅಲಂಕೃತವಾದ ಅವಳ ಚಿಕ್ಕ ಜೋಡುಗಳು.

ವಿಮಲೆ ಜೋಡುಗಳನ್ನು ಧರಿಸಲು ಒಪ್ಪದಿದ್ದಾಗ ಅವಳಿಗೆ ಆಸೆ ಹುಟ್ಟಿಸಲು ಇವುಗಳನ್ನು ಲಕ್ನೋದಿಂದ ತರಿಸಿದ್ದೆ. ಮೊದಲ ಬಾರಿ ಕೋಣೆಯಿಂದ ಅವುಗಳನ್ನು ಧರಿಸಿ ಹೊರಗೆ ಹೋಗಲು ನಾಚಿಕೊಂಡಳು. ಆಗಿನಿಂದ ಎಷ್ಟೋ ಜೋಡುಗಳನ್ನು ಸವೆಯಿಸಿ ದರೂ ಇವುಗಳನ್ನು ಜೋಪಾನವಾಗಿಟ್ಟುಕೊಂಡಿದ್ದಾಳೆ. ಮೊದಲು ಇವುಗಳನ್ನು ಅವಳಿಗೆ ಕೊಟ್ಟಾಗ, "ನಾನು ನಿದ್ದೆ ಹೋಗುತ್ತಿರು ವಾಗ ನನ್ನ ಕಾಲಿನ ಧೂಳನ್ನು ತಲೆಯ ಮೇಲೆ ಧರಿಸಿದ್ದೀ. ನನ್ನ ಎಚ್ಚತ್ತಿರುವ ದೇವಿಯ ಕಾಲು ಧೂಳಾಗದಂತೆ ನಾನು ತಂದಿ ರುವ ಈ ಕಾಣಿಕೆಯನ್ನು ಸ್ವೀಕರಿಸು," ಎಂದು ಹಾಸ್ಯಮಾಡಿದ್ದೆ. ನೀವು ಹೀಗೆಲ್ಲಾ ಮಾತನಾಡಿದರೆ ನಾನು ಆ ಜೋಡುಗಳನ್ನು ಧರಿಸುವುದೇ ಇಲ್ಲ," ಎಂದಿದ್ದಳು.

ಈ ಮಲಗುವ ಕೋಣೆಯ ವಾತಾವರಣ ನನ್ನ ಹೃದಯ

ವನ್ನು ಕಲಕುತ್ತದೆ. ನನ್ನ ಹೃದಯ ದಾಹ ಇಲ್ಲಿರುವ ವಸ್ತುಗಳ ಸುತ್ತು ಹೇಗೆ ಬೇರು ಬಿಟ್ಟದೆಯೆಂದು ನನಗೇ ಇದುವರೆಗೂ ತಿಳಿದಿರಲಿಲ್ಲ. ತಾಯಿ ಬೇರನ್ನು ಕಿತ್ತು ಹಾಕಿದರೂ ಜೀವ ಬಿಡುಗಡೆ ಹೊಂದುವುದಿಲ್ಲ. ಈ ಚಿಕ್ಕ ಜೋಡುಗಳೂ ನನ್ನನ್ನು ಹಿಡಿದಿವೆ.

ಗೂಡಿನ ಕಡೆ ನನ್ನ ಕಣ್ಣು ಹೊರಳಿತು. ಹೂವು ಬಾಡಿ ಕರಿದಾಗಿದ್ದರೂ ನನ್ನ ಪಠ ಹಾಗೆಯೇ ಇದೆ. ಅವುಗಳೇ ನಿಜ ಸ್ಥಿತಿಯನ್ನು ತೋರಿಸುತ್ತಿವೆ. ತೆಗೆದು ಹಾಕುವ ಆವಶ್ಯಕತೆ ಕೂಡ ತೋರದಿರುವುದರಿಂದ ಅಲ್ಲಿಯೇ ಬಿದ್ದಿವೆ. ಇರಲಿ; ಅನಿಷ್ಟವಾದರೂ ಸತ್ಯದ ಅರಿವುಂಟಾಗಲಿ. ನನ್ನ ಚಿತ್ರ ನೋಡುತ್ತಿರುವಂತೆ ನಿಶ್ಚಲವಾಗಿ ನೋಡುವ ಶಕ್ತಿ ನನಗುಂಟಾಗಲಿ.

ಅಲ್ಲಿ ನಿಂತಿರುವಾಗ ಹಿಂದಿನಿಂದ ವಿಮಲೆ ಬಂದಳು. ಗೂಡಿನಿಂದ ದೃಷ್ಟಿಯನ್ನು ಕಿತ್ತು, "ಪುಸ್ತಕ ತೆಗೆದುಕೊಳ್ಳಲು ಬಂದೆ" ಎಂದೆ. ವಿವರಿಸುವ ಆವಶ್ಯಕತೆಯೇನಿತ್ತು? ತಪ್ಪು ಮಾಡಿದವನಂತೆ, ಅಕ್ರಮ ಪ್ರವೇಶ ಮಾಡಿದವನಂತೆ, ನನಗಲ್ಲದ ಗುಟ್ಟನ್ನು ಇಣಿಕಿ ನೋಡಿದವನಂತೆ, ವಿಮಲೆಯ ಮುಖವನ್ನೂ ನೋಡಲು ಶಕ್ತಿಯಿಲ್ಲದೆ ಹೊರಗೆ ಬಂದೆ.

೫

ಓದುವುದಾಗಲಿ, ಯಾವ ಕೆಲಸವನ್ನು ಮಾಡುವುದಾಗಲಿ ಸಾಧ್ಯವಿಲ್ಲವೆಂದೂ, ಭವಿಷ್ಯತ್ತು ಎದೆಯ ಮೇಲೆ ಭಾರವಾಗಿ ಎಂದೆಂದೂ ಒರಗಿರುವುದೆಂದೂ ನಿಶ್ಚಯಿಸಿ ಕುಳಿತು ಬಿಟ್ಟಾಗ, ನೆರೆಯ ಜಮೀನ್ದಾರನ ರೈತ ಪಂಚು ಒಂದು ಬುಟ್ಟಿ ತೆಂಗಿನ ಕಾಯಿಗಳೊಡನೆ ಬಂದು ನಮಸ್ಕಾರ ಮಾಡಿ ನಿಂತನು.

"ಇದೆಲ್ಲಾ ಏಕೆ, ಪಂಚು?" ಎಂದೆ.

ಪಂಚುವಿನ ಗುರತು ನನ್ನ ಗುರುಗಳಿಂದಾಗಿತ್ತು. ಅವನು

ತೀರ ಬಡವ; ಅವನಿಗೆ ಸಹಾಯ ಮಾಡುವ ಸ್ಥಿತಿಯಲ್ಲಿ ನಾನಿರಲಿಲ್ಲ. ಹಣ ಬೇಡಲು ಬಂದಿದ್ದನೆಂದು ಭಾವಿಸಿದೆ. ಆದರೆ ಹಣ ಕೊಡಲು ಹೋದಾಗ ಕೈಜೋಡಿಸಿಕೊಂಡು "ಬೇಡ, ಸ್ವಾಮಿ," ಎಂದ.

"ಏಕೆ? ಏನಾಯಿತು?"

"ಎಲ್ಲಾ ತಿಳಿಸುತ್ತೇನೆ. ಬಹಳ ತೊಂದರೆಯಲ್ಲಿದ್ದಾಗ ನಿಮ್ಮ ತೋಟದಿಂದ ತೆಂಗಿನಕಾಯಿ ಕದ್ದಿದ್ದೆ. ಮುದುಕ, ಯಾವಾಗ ಸಾಯುತ್ತೇನೋ ತಿಳಿಯದು. ಹಿಂದಕ್ಕೆ ಕೊಡಲು ಬಂದೆ."

ಪಂಚುವಿನ ಮಾತುಗಳಿಂದ ನನ್ನ ಹೃದಯದ ಭಾರ ಕಡಮೆಯಾಯಿತು. ಜಗತ್ತಿನಲ್ಲಿ ಸ್ತ್ರೀಪುರುಷರ ವಿಯೋಗವನ್ನು ಬಿಟ್ಟು ಬೇರೆ ಎಷ್ಟೋ ವಿಚಾರಗಳಿವೆ. ಜಗತ್ತು ವಿಶಾಲವಾದುದು. ಮಧ್ಯೆ ನಿಂತು ಕೂಡ ನಮ್ಮ ಸುಖ ದುಃಖಗಳನ್ನು ಅಳೆಯಬಹುದು.

ಪಂಚುವಿಗೆ ನನ್ನ ಗುರುವಿನಲ್ಲಿ ತುಂಬಾ ಭಕ್ತಿ. ಅವನ ಜೀವನದ ವಿಚಾರ ನನಗೆ ತಿಳಿದಿದೆ. ಬೆಳಗಾಗುವುದಕ್ಕೆ ಮುಂಚೆ ಬುಟ್ಟಿಯಲ್ಲಿ ವೀಳ್ಯದೆಲೆ, ಹೊಗೆಸೊಪ್ಪು, ಬಣ್ಣದ ದಾರಗಳು, ಬಾಚಣಿಗೆಗಳು, ಕನ್ನಡಿಗಳು ಮುಂತಾದುವನ್ನು ತೆಗೆದುಕೊಂಡು ಕೊಚ್ಚೆಯಲ್ಲಿ ನಡೆದುಕೊಂಡು ನಾಮ ಶೂದ್ರರ ಮನೆಗಳ ಬಳಿ ಹೋಗುತ್ತಾನೆ. ಅಲ್ಲಿ ತನ್ನಸಾಮಾನಿಗೆ ಪ್ರತಿಯಾಗಿ ಅಕ್ಕಿ ತೆಗೆದುಕೊಳ್ಳುತ್ತಾನೆ. ಮನೆಗೆ ಬೇಗ ಬಂದ ದಿನ ಊಟಮಾಡಿ ಮಿಠಾಯಿ ಅಂಗಡಿಯಲ್ಲಿ ಕೆಲಸಕ್ಕೆ ಹೋಗುತ್ತಾನೆ. ಮನೆಗೆ ಬಂದು ಮಧ್ಯರಾತ್ರಿಯವರೆಗೂ ಚಿಪ್ಪಿನ ಬಳೆಗಳನ್ನು ಮಾಡುತ್ತಾನೆ. ಇಷ್ಟು ಮಾಡಿದರೂ ಅವನಿಗೂ ಅವನ ಸಂಸಾರಕ್ಕೂ ಅರ್ಧ ವರ್ಷ ಕೂಡ ಹೊಟ್ಟೆ ತುಂಬ ಊಟವಿಲ್ಲ. ಹೊಟ್ಟೆಯ ತುಂಬ ನೀರು ಕುಡಿದು, ಬಾಳೆಹಣ್ಣು ತಿಂದರೆ ಅವನ ಊಟ ಮುಗಿಯಿತು.

ಇಷ್ಟಾದರೂ ಅವನ ಸಂಸಾರಕ್ಕೆ ಒಪ್ಪೊತ್ತಿನ ಊಟ.

ಒಂದು ಸಲ ಅವನಿಗೇನಾದರೂ ಜೀವನಾಂಶಕೊಡ ಬೇಕೆಂದು ಆಲೋಚಿಸಿದೆ. ಆದರೆ ನನ್ನ ಗುರು "ನಿನ್ನದಾನ ಅವನ ತೊಂದರೆಯನ್ನು ನಿವಾರಿಸದೆ ಅವನನ್ನೇ ಹಾಳುಮಾಡ ಬಹುದು. ವಂಗ ಮಾತೆಗೆ ಇವನೊಬ್ಬ ಪಂಚುಮಾತ್ರವಲ್ಲ. ಆಕೆಯ ಎದೆಯಲ್ಲಿ ಹಾಲಿಲ್ಲದಿದ್ದರೆ ಹೊರಗಿನಿಂದ ತಂದು ತುಂಬ ಲಾದೀತೆ ?" ಎಂದರು.

ಮನಸ್ಸನ್ನು ಕಲಕುವ ಆಲೋಚನೆಗಳು. ಆ ದಿನ ವಿಮಲೆ ಯೊಡನೆ—"ನಮ್ಮ ದೇಶದಿಂದ ಈ ದುಃಖದ ಬೇರನ್ನು ಕೀಳಲು ಜೀವನವನ್ನು ಮಿಾಸಲಾಗಿಡೋಣ." ಎಂದೆ.

ಅವಳು ನಗುತ್ತಾ, "ನೀವು ಸಿದ್ಧಾರ್ಥ ರಾಜಕುಮಾರ. ಆದರೆ ನಿಮ್ಮ ಭಾವಪ್ರವಾಹದಲ್ಲಿ ನನ್ನನ್ನೂ ಕೊಚ್ಚಿಕೊಂಡು ಹೋಗುವಂತೆ ಮಾಡಬೇಡಿ," ಎಂದಳು.

"ಸಿದ್ಧಾರ್ಥ ಒಬ್ಬನೇ ದೀಕ್ಷೆಹೊತ್ತನು. ನಮ್ಮದು ಜೋಡಿ ದೀಕ್ಷೆ."

ಮಾತಿನಲ್ಲಿ ಭಾವ ಮರೆಯಾಯಿತು. ವಿಮಲೆ ಅಂತರ್ಯ ದಲ್ಲಿ "ಶ್ರೀಮಂತೆ." ಅವಳ ಮನೆಯವರು ಐಶ್ವರ್ಯವಂತ ರಲ್ಲದಿದ್ದರೂ ಅವಳು ಹುಟ್ಟಿನಿಂದ "ರಾಣಿ." ಬಡವರ ದುಃಖ ತಾಪತ್ರಯಗಳ ಅಳತೆ ಬೇರೆ ಎಂದು ಅವಳ ಅಭಿಪ್ರಾಯ. ದಾರಿದ್ರ್ಯದಲ್ಲಿ ಸದಾ ಜೀವಿಸುವುದರಿಂದ ಅದರ ನೋವು ಅವರಿಗೆ ತಟ್ಟುವುದಿಲ್ಲವೆಂದು ಅವಳ ಅಭಿಪ್ರಾಯ. ಸಣ್ಣಕೆರೆ ದಡಗ ಳಿಂದ ರಕ್ಷಿತವಾಗಿರುವಂತೆ ಅವರ ದಾರಿದ್ರ್ಯ ಅವರನ್ನು ರಕ್ಷಿಸು ತ್ತದೆ. ಅಗಲಮಾಡಿದರೆ ಪಾಚಿ ಕಾಣಬರುತ್ತದೆ.

ವಿಮಲೆ ನನ್ನಮನೆಗೆ ಬಂದಳೇ ಹೊರತು, ಜೀವನವನ್ನು ಪ್ರವೇಶಿಸಲಿಲ್ಲ. ಅವಳನ್ನು ದೊಡ್ಡದಾಗಿ ಮಾಡಿ ವಿಸ್ತಾರವಾದ ಜಾಗದಲ್ಲಿ ಪ್ರತಿಷ್ಠಿಸಿದುದರಿಂದ, ಅವಳನ್ನು ಕಳೆದುಕೊಂಡು ನನ್ನ

ಜೀವನ ಸಂಕುಚಿತವಾಯಿತು. ವಿಮಲೆಗೆ ಸ್ಥಳಮಾಡಲು ಬೇರೆ ಎಲ್ಲಾ ವಸ್ತುಗಳನ್ನೂ ಮೂಲೆಗೆ ತಳ್ಳಿದೆ. ಅವಳನ್ನು ಅಲಂಕರಿಸಿ, ವಿದ್ಯಾವತಿಯಾಗಿ ಮಾಡಿ ಅವಳಲ್ಲಿಯೇ ಜೀವನವನ್ನು ಕೇಂದ್ರೀಕರಿಸಿದುದರಿಂದ ಜಗತ್ತಿನ ವಿಸ್ತಾರವನ್ನೂ ಮನುಷ್ಯ ಜೀವನದ ಬೆಲೆಯನ್ನೂಮರೆತಿದ್ದೆ. ಮನುಷ್ಯ ದಿನಚರಿಯ ವಿಚಾರಗಳಲ್ಲಿ ಮಗ್ನನಾದರೆ ಸತ್ಯ ಸ್ವಾತಂತ್ರ್ಯಗಳು ದೂರವಾಗುತ್ತವೆ. ವಿಮಲೆ ಸಣ್ಣವಿಚಾರಗಳಿಗೆ ಪ್ರಾಮುಖ್ಯತೆ ಕೊಟ್ಟುದರಿಂದ ಸತ್ಯ ಮರೆಯಾಗಿತ್ತು. ಅದರಿಂದಲೇ ನನ್ನ ದುಃಖ ವಿಶಾಲವಾಗಿ ಜಗತ್ತು ಬರಿದಾಗಿ ತೋರಿತು. ಈ ಶ್ರಾವಣದ ಪ್ರಾತಃಕಾಲ ನನ್ನ ಕಿವಿಯಲ್ಲಿ

ಆಷಾಢದಾಗಸವು ಬಿರಿದು
ಸುರಿಸುತಿಹುದಾವೇಶದಲಿ ಮಳೆಯ;
ಆದರಯ್ಯೋ, ಹೃದಯ ಬರಿದು!

ಎಂಬ ಪಲ್ಲವಿ ನುಡಿಯುತ್ತಿದೆ.

## ವಿಮಲೆಯ ಕಥೆ

### ೧೧

ಬಂಗಾಳದಲ್ಲಿ ಕ್ಷಣದಲ್ಲಿ ಆದ ಬದಲಾವಣೆ ಅದ್ಭುತವಾದುದು. ಯಾವ ಬೆಂಕಿಯೂ ಉರಿಸಲಾರದ, ಬೇರೆ ಯಾವ ನೀರೂ ಜೀವ ತುಂಬಲಾಗದ ಹದಿನಾರು ಸಾವಿರ ಸಗರ ಪುತ್ರರ ಬೂದಿಯನ್ನು ಗಂಗೆ ಸ್ಪರ್ಶಿಸಿದಂತಿತ್ತು. ಮೃತ ಬಂಗಾಳದ ಬೂದಿ ತಟ್ಟನೆ "ನಾನಿಲ್ಲಿದ್ದೇನೆ," ಎಂದು ಕೂಗಿತು.

ಪುರಾತನ ಗ್ರೀಸಿನಲ್ಲಿ ಒಬ್ಬ ಶಿಲ್ಪಿ ವಿಗ್ರಹಗಳಲ್ಲಿ ಜೀವ ತುಂಬಲು ಶಕ್ತನಾಗಿದ್ದನೆಂದು ಎಲ್ಲಿಯೋ ಓದಿದ್ದೇನೆ. ಆ ಪವಾಡದಲ್ಲಿಯೂ ಜೀವಕ್ಕೆ ಆಕೃತಿ ಆವಶ್ಯಕವಾಗಿತ್ತು. ಆದರೆ

ಈ ಬರಡು ಬೂದಿಯಲ್ಲಿ ಐಕ್ಯತೆ ಎಲ್ಲಿತ್ತು? ಕಲ್ಲಿನಂತೆ ಕಠಿಣವಾಗಿ ಯಾದರೂ ಇದ್ದಿದ್ದರೆ, ಅಹಲ್ಯೆ ದೇಹ ತಳೆದು ಬಂದಂತೆ ಒಂದು ಆಕೃತಿ ಬರಬಹುದೆಂಬ ಆಸೆಯಿತ್ತು. ಆದರೆ ಈ ಬೂದಿ ವಿಧಾತನ ಬೆರಳುಗಳ ನಡುವೆ ತೂರಿ ಗಾಳಿಯಿಂದ ಚೆದರಿ ಹೋಗಿದೆ. ಗುಡ್ಡೆಯಾಗಿರಬಹುದು ; ಎಂದೂ ಐಕ್ಯತೆ ಇರಲಿಲ್ಲ. ಆದರೆ, ಈ ದಿನ ಬಂಗಾಳದಲ್ಲಿ ಈ ವಿರಲತೆ ಆಕೃತಿ ಪಡೆದಿದೆ; ಗುಡುಗುವ ಧ್ವನಿಯಲ್ಲಿ " ನಾನಿಲ್ಲಿದ್ದೇನೆ, " ಎಂದು ಕೂಗುತ್ತಿದೆ.

ಇದೆಲ್ಲಾ ಅಮಾನುಷವೆಂದುಕೊಂಡುದರಲ್ಲಿ ಆಶ್ಚರ್ಯ ವೇನು? ಯಾವುದೋ ಮತ್ತೇರಿದ ದೇವರ ಕಿರೀಟದಿಂದ ಉದುರಿದ ರತ್ನ—ನಮ್ಮ ಚರಿತ್ರೆಯ ಈ ಘಟ್ಟ. ಇದಕ್ಕೂ ಗತ ಕಾಲಕ್ಕೂ ಸಂಬಂಧವಿಲ್ಲ ; ನಮ್ಮ ಕಷ್ಟ ಕಾರ್ಪಣ್ಯಗಳು ಮಾಯ ವಾಗುವುವೆಂದೂ, ನಮಗೆ ಅಸಾಧ್ಯವಾದುದು ಯಾವುದೂ ಇಲ್ಲ ವೆಂದೂ ನಂಬಿದೆವು, " ಬರುತ್ತಿದೆ, ಬಂತು," ಎಂದು ಎಲ್ಲವೂ ಕೂಗಿದಂತೆ ತೋರಿತು.

ನಮ್ಮ ಚರಿತ್ರೆ ಕುದುರೆಯ ಸಹಾಯವಿಲ್ಲದೆ, ತನ್ನ ಶಕ್ತಿ ಯಿಂದಲೇ ನಡೆಯಬಲ್ಲುದೆಂದು ನಂಬಿದೆವು : ಸಾರಥಿಗೆ ಸಂಬಳ ಕೊಡಬೇಕಾದ ಆವಶ್ಯಕತೆ ಇಲ್ಲ. ಅವನಿಗೆ ಸುರೆ ಕೊಟ್ಟರೆ ಸಾಕು. ನಮ್ಮ ಆಸೆಗಳು ಸ್ವರ್ಗವನ್ನು ಮುಟ್ಟುವುವು.

ನನ್ನ ಪತಿಯ ಮನಸ್ಸೂ ಕಲಕಿತ್ತು. ಆದರೆ ನಮ್ಮಲ್ಲಿ ಉತ್ಸಾಹ ಹೆಚ್ಚಿದಷ್ಟೂ ಅವರಲ್ಲಿ ಆಳವಾದ ದುಃಖ ಮನೆ ಮಾಡಿಕೊಂಡಿತು. ಆ ಪರಿಸ್ಥಿತಿಯನ್ನು ದಾಟಿದ ಒಂದು ಕಲ್ಪನೆ ಆತನಿಗಿದ್ದಂತಿತ್ತು.

ಒಂದುದಿನ ಸಂದೀಪನೊಡನೆ ಚರ್ಚಿಸುತ್ತಿದ್ದಾಗ " ಸ್ವೀಕರಿಸುವ ಯೋಗ್ಯತೆ ನಮಗಿಲ್ಲವೆಂದು ತೋರಿಸಿಕೊಡಲು ಸುದೈವ ಬಾಗಿಲಲ್ಲಿ ಬಂದು ನಿಲ್ಲುತ್ತದೆ. ಅದನ್ನು ಒಳಗೆ ಕರೆ ಯಲು ಯಾವುದನ್ನೂ ನಾವು ಸಿದ್ಧಪಡಿಸಿಕೊಂಡಿರುವುದಿಲ್ಲ,"

ಎಂದರು.

ಸಂದೀಪ, "ನಿನಗೆ ದೇವರಲ್ಲಿ ನಂಬಿಕೆಯಿಲ್ಲದುದರಿಂದ ನಾಸ್ತಿಕನಂತೆ ಮಾತನಾಡುತ್ತೀ. ದೇವಿಯು ವರನೀಡಿ ಎದುರಿಗೆ ನಿಂತಿರುವಾಗಲು ಕಾಣದವನಂತೆ ಇದ್ದೀ," ಎಂದನು.

"ನನಗೆ ದೇವರಲ್ಲಿ ನಿಶ್ಚಲ ಭಕ್ತಿಯಿರುವುದರಿಂದಲೇ ಪೂಜೆಗೆ ಸಿದ್ಧನಾಗಿಲ್ಲವೆಂದು ತಿಳಿದಿರುವುದು. ದೇವರಿಗೆ ವರ ಕೊಡುವ ಶಕ್ತಿಯಿದ್ದರೂ, ಸ್ವೀಕರಿಸುವ ಯೋಗ್ಯತೆ ನಮಗಿರಬೇಕಲ್ಲ ! "

ಪತಿಯ ಇಂಥಾ ಮಾತುಗಳಿಂದ ನನಗೆ ಕೋಪ ಬರುತ್ತಿತ್ತು. ನಾನು, "ಈ ಉತ್ಸಾಹವೆಲ್ಲಾ ಮತ್ತತೆಯೆಂದು ನೀವು ತಿಳಿದಿರಬಹುದು. ಆದರೆ ಸುರೆಯೂ ಶಕ್ತಿ ಕೊಡಬಲ್ಲುದಲ್ಲವೆ ? " ಎಂದೆ.

"ಶಕ್ತಿ ಕೊಡಬಹುದು. ಆಯುಧಗಳನ್ನು ಕೊಡಲಾರದು."

"ಶಕ್ತಿ ದೈವದತ್ತವಾದುದು. ಆಯುಧಗಳನ್ನು ಕಮ್ಮಾರ ಕೊಡಬಲ್ಲನು."

ನನ್ನ ಪತಿ ನಕ್ಕರು : "ಕಮ್ಮಾರರಿಗೂ ಬೆಲೆ ಕೊಡಬೇಕಲ್ಲವೆ ? "

ಸಂದೀಪ ಎದೆಯನ್ನು ಉಬ್ಬಿಸಿ, "ಆ ವಿಚಾರದಲ್ಲಿ ತೊಂದರೆಯಿಲ್ಲ. ಅವರ ಬೆಲೆ ಕೊಡುತ್ತೇವೆ." ಎಂದನು.

"ಕೊಟ್ಟಮೇಲೆ ಉತ್ಸವಕ್ಕೆ ಏರ್ಪಾಟುಮಾಡುತ್ತೇನೆ," ಎಂದು ನನ್ನ ಪತಿ ಹೇಳಿದರು.

"ನೀನೇನೂ ಏರ್ಪಾಟುಮಾಡಬೇಕಾಗಿಲ್ಲ. ನಮ್ಮ ಉತ್ಸವ ಹಣದ ಬೆಲೆಯನ್ನು ಮೀರಿದುದು."—ಸಂದೀಪ ತಾತ್ಸಾರದಿಂದ ಹೇಳಿದನು.

ಹಾಗೇ ತನ್ನ ದಪ್ಪ ಗಂಟಲಿನಲ್ಲಿ ಹಾಡಿದನು—

ನುಡಿಸಿ ಸುಲಭದಲಿ ಕೊಂಡ ಕೊಳಲನಿನಿದಾಗಿ
ಕಡೆಗಣಿಸಿ ಬೆಲೆಯನನುರಾಗದಮಿತ ಮೌಲ್ಯದಲಿ
ಸೆಳೆಯುವನು ಹೃದಯವನು ಪ್ರೇಮಾಭಿಜಾತನಿವನು !

ನಗುತ್ತಾ, ನನ್ನ ಕಡೆ ತಿರುಗಿ, ಸಂದೀಪ "ಜೀವನದಲ್ಲಿ ಸಂಗೀತವಿರುವಾಗ, ಗಂಟಲು ಚೆನ್ನಾಗಿಲ್ಲದಿದ್ದರೂ ಪರವಾ ಇಲ್ಲವೆಂದು ತೋರಿಸಲು ನಾನು ಹಾಡಿದೆ. ಕಂಠದ ಮಾಧುರ್ಯ ವನ್ನು ಮಾತ್ರ ಪ್ರದರ್ಶಿಸಲು ಹಾಡಿದರೆ ಹಾಡಿಗೆ ಬೆಲೆಯಿಲ್ಲ. ದೇಶವನ್ನೇ ಸಂಗೀತ ಪ್ರವಾಹ ಕೊಚ್ಚುತ್ತಿರುವಾಗ, ನಿಖಿಲ ರಾಗಗಳನ್ನು ಅಭ್ಯಾಸ ಮಾಡಲಿ; ನಾವು ಒಡಕು ಧ್ವನಿಯಲ್ಲಿ ದೇಶವನ್ನೆಚ್ಚರಿಸೋಣ." ಎಂದ:

ಮನೆಯಿಂತು ಕೂಗುತಿದೆ : ಕಳೆಯಬೆಲ್ಲವನು ಹೊರಟಿರುವೆ
ಯೇಕೆಂದು ?
ಒರಲುತಿದೆ ಜೀವವದು : ಎಲ್ಲವನು ತೊರೆದು ತೂರೆಂದು
ಗಾಳಿಯಲಿ !
ನಮತೆಲ್ಲ ಅಳಿಯುಪ್ಪೊಡಳಿಯಲದಕೆ ಬೆಲೆಯೇನು ?
ನಾಶವೇ ಗತಿಯಾದೊಡದಕೆ ಬಾಗುವೆನು ನಗುತ !
ಅಮರತ್ವವನು ಕೊಲುವುದರರಸುವಿಕೆಯೆಮ್ಮದು.

ನಿಜ ಹೇಳ ಬೇಕಾದರೆ ನಿಖಿಲ, ನಾವು ಧೈರ್ಯ ಕಳೆದು ಕೊಂಡಿದ್ದೇವೆ. ಸುಲಭ ಸಾಧ್ಯವಾದ ಧ್ಯೇಯಗಳಿಂದ ದೇಶ ಕಟ್ಟಲು ಸಾಧ್ಯವಿಲ್ಲ. ಆಶಾರಹಿತರಾಗಿ ಅಸಾಧ್ಯವನ್ನು ಜಯಿಸಲು ಮುನ್ನುಗ್ಗುತ್ತಿದ್ದೇವೆ.

ಎಮ್ಮ ಗತಿಗಡ್ಡ ಬರುವವರು ಅರಿತಿಹರೆ
ಸಾಹಸದ ರುದ್ರ ಸಂತೋಷ ಸಂಭ್ರಮವ ?
ವಕ್ರಮಾರ್ಗಾಂತರದ ಕರೆಯನಾಂತಿರುವೆವೆಂ-
ದರಿತಿಹರೆ—ಧೂಳಿಯಲಿ ಕೆಡೆವೆವೆಂಬುದನು
ಶುಭಸತ್ಯ ಸೌಶೀಲ್ಯ ಋಜುತೆಗಳ ?"

ನನ್ನ ಪತಿ ಚರ್ಚೆ ಮುಂದುವರಿಸುವರೆಂದು ಕೊಂಡಿದ್ದೆ. ಆದರೆ ಮಾತನಾಡದೆ ಎದ್ದು ಹೋದರು.

ದೇಶವನ್ನು ಕಲಕುತ್ತಿದ್ದ ಬಿರುಗಾಳಿಯೇ ನನ್ನ ಹೃದಯ ವನ್ನೂ ತಲ್ಲಣಗೊಳಿಸುತ್ತಿತ್ತು. ನನ್ನ ಭಾಗ್ಯ ವಿಧಾತನ ರಥ ಹತ್ತಿರ ಬರುತ್ತಿತ್ತು ; ಅದರ ಗಾಲಿಗಳ ಸದ್ದು ನನ್ನ ಜೀವದಲ್ಲಿ ಮಾರ್ದನಿಗೊಡುತ್ತಿತ್ತು. ನನ್ನ ಹೊಣೆಯೇ ಇಲ್ಲದೆ ಯಾವುದೋ ವಿಚಿತ್ರ ಘಟನೆ ಎಂದಾದರೂ ಸಂಭವಿಸಬಹುದೆಂದು ನಿರೀಕ್ಷಿ ಸುತ್ತಿದ್ದೆ. ಸರಿ ತಪ್ಪುಗಳನ್ನೂ ಬೇರೆಯವರ ಭಾವನೆಗಳನ್ನೂ ವಿವೇಚನೆ ಮಾಡಬೇಕಾದ ಕ್ಷೇತ್ರವನ್ನು ನಾನು ಮೀರಿರ ಲಿಲ್ಲವೆ ? ನಾನು ಇದಕ್ಕಾಗಿ ಆಶಿಸಿದ್ದೆನೆ—ಕಾದಿದ್ದೆನೆ ? ನನ್ನ ಜೀವಮಾನವನ್ನೆಲ್ಲಾ ಪರೀಕ್ಷಿಸಿ ನನ್ನ ತಪ್ಪಿದೆಯೇನೋ ತಿಳಿಸಿ.

ನನ್ನ ಭಕ್ತಿಯಲ್ಲಿ ಇದುವರೆಗೆ ವ್ಯತ್ಯಾಸವಾಗಲಿಲ್ಲ— ಆದರೆ ವರ ಪಡೆಯಬೇಕಾದಾಗ ಕಾಣಿಸಿದ ದೇವರು ಬೇರೆ ! ಎಚ್ಚತ್ತ ರಾಷ್ಟ್ರ ವಂದೇ ಮಾತರಂ ಎಂದು ತನ್ನ ಭವಿಷ್ಯತ್ತಿನ ಸಿದ್ಧಿಯನ್ನುಎದುರುಗೊಳ್ಳುವಂತೆ ನನ್ನ ನರ ನರಗಳೂ ಅರಿಯದ, ಚಿಂತಿಸದ, ಅಪರಿಚಿತನನ್ನು ಸ್ವಾಗತಿಸಲು ಹಾತೊರೆಯುತ್ತಿವೆ.

ಒಂದು ರಾತ್ರಿ ಹಾಸಿಗೆ ಬಿಟ್ಟು ಮಾಳಿಗೆಯ ಮೇಲೆ ಹೋದೆ. ನಮ್ಮ ತೋಟದಾಚೆ ಫಲಿತ ಬತ್ತದ ಹೊಲಗಳು. ಗಿಡಗಳ ಸಂದುಗಳಲ್ಲಿ ದೂರದ ನದಿ ಹೊಳೆಯುತ್ತಿತ್ತು. ಮುಂದಿನ ಸೃಷ್ಟಿಯ ಭ್ರೂಣದಂತೆ ಆ ದೃಶ್ಯ ಕತ್ತಲಲ್ಲಿ ನಿದ್ರಿಸುತ್ತಿತ್ತು.

ಆ ಭವಿಷ್ಯತ್ತಿನಲ್ಲಿ ನನ್ನ ದೇಶ—ನನ್ನಂತೆ ಒಬ್ಬ ಹೆಂಗಸು —ಕಾದು ನಿಂತಿದ್ದಂತೆ ತೋರಿತು. ಯಾವುದೋ ಅರಿಯದ ಶಕ್ತಿ ಆಕೆಯನ್ನೂ ಮನೆಯ ಮೂಲೆಯಿಂದ ಹೊರಗೆ ಕರೆದಿತ್ತು. ನಿಲ್ಲಲು, ಆಲೋಚಿಸಲು, ದೀಪ ಹಿಡಿದು ಬರಲು ಸಮಯವಿಲ್ಲದೆ ಕತ್ತಲಲ್ಲಿ ನುಗ್ಗಿದ್ದಳು. ದೂರದ ವೇಣುನಾದಕ್ಕೆ ಆಕೆಯ ಜೀವ ಹೇಗೆ ಮಿಡಿಯುವುದೆಂದು ನಾನು ಬಲ್ಲೆ. ಆಕೆಯ ಎದೆಯ

ಉಬ್ಬಸ, ಕಣ್ಣು ಮುಚ್ಚಿಕೊಂಡು ಓಡಿದರೂ ದೊರೆಯುವುದೆಂಬ ಭರವಸೆ, ಎಲ್ಲವೂ ನನಗೆ ತಿಳಿದಿದೆ. ಆಕೆ ಮಾತೆಯಲ್ಲ. ಮಕ್ಕಳ ಹಸಿವಿನ ರೋದನ, ಮನೆಯಲ್ಲಿ ಸಂಜೆ ಬೆಳಗಬೇಕಾದ ದೀಪ, ಮನೆಗೆಲಸ, ಯಾವುದರ ಪರಿವೆಯೂ ಆಕೆಗಿಲ್ಲ. ಇದು ವೈಷ್ಣವರ ನಾಡು; ಆಕೆ ತನ್ನ ಪ್ರಿಯನನ್ನೆದುರುಗೊಳ್ಳಲು ಓಡಿದ್ದಾಳೆ. ಮನೆ, ಮನೆಗೆಲಸಗಳನ್ನು ಬಿಟ್ಟು ಹೊರಟಿದ್ದಾಳೆ. ಆಳವಾದ ಆಸೆ ಆಕೆಯನ್ನೆಳೆದೊಯ್ಯುತ್ತಿದೆ—ಯಾವ ದಾರಿಯಲ್ಲಿ, ಎಲ್ಲಿಗೆ? ಆಕೆಗೆ ಆ ಚಿಂತೆಯಿಲ್ಲ.

ನನಗೂ ಅದೇ ತೆರದ ಆಸೆ. ನಾನೂ ಮನೆಯನ್ನು ಕಳೆದುಕೊಂಡು ದಾರಿತಪ್ಪಿದ್ದೇನೆ. ಧ್ಯೇಯ ದಾರಿಗಳೆರಡೂ ಅಸ್ಪಷ್ಟ. ಅಭಿಲಾಷೆ ಅವಸರಗಳು ಮಾತ್ರ ಉಳಿದಿವೆ. ಛಿ! ರಾತ್ರಿಯಲ್ಲಿ ಅಲೆಯುವ ಪಾಪಿ, ಅರುಣೋದಯದ ಕೆಂಬೆಳಕಿನಲ್ಲಿ ನಿನಗೆ ಹಿಂದಿರುಗಲು ದಾರಿಯ ಗುರುತು ಹತ್ತಲಾರದು. ಆದರೆ, ಹಿಂದಿರುಗಲೇಕೆ? ಸಾವಿನ ಬಿಡುಗಡೆ ಇದೆಯಲ್ಲಾ! ಗಾನದಿಂದ ಸೆಳೆಯುವ ಕತ್ತಲೆ, ವಿನಾಶದ ಹಾದಿ ತೋರಿದರೆ, ಮುಂದಿನ ಆಲೋಚನೆ ಏಕೆ? ಆ ಕತ್ತಲಲ್ಲಿ ಮುಳುಗಿದ ಮೇಲೆ, ನಾನಾಗಲಿ, ಸರಿ ತಪ್ಪುಗಳಾಗಲಿ, ನಗು ಅಳುಗಳಾಗಲಿ, ಇರುವುದಿಲ್ಲ.

## ೧೨

ಬಂಗಾಳದಲ್ಲಿ ಕಾಲಯಂತ್ರ ಹೀಗೆ ಮುಂದೋಡಿದಾಗ ಘಟನೆಗಳು ಒಂದರ ಹಿಂದೊಂದು ಸಂಭವಿಸಿ ಕಷ್ಟವಾದುದೆಲ್ಲಾ ಸುಲಭವಾದುವು. ದೇಶದ ಮೂಲೆಯಾದ ನಮ್ಮ ಊರಿನಲ್ಲೂ ಕೂಡ ಯಾವುದನ್ನೂ ಹಿಂದೆ ಹಿಡಿದು ನಿಲ್ಲಿಸಲು ಸಾಧ್ಯವಾಗಲಿಲ್ಲ. ನನ್ನ ಪತಿ ಹಳ್ಳಿಯವರನ್ನು ಬಲವಂತ ಪಡಿಸಲು ಹಿಂದೆಗೆದುದರಿಂದ ಮೊದಲು ನಮ್ಮ ಜಿಲ್ಲೆ ಹಿಂದುಳಿದಿತ್ತು. ಆತನು "ದೇಶಕ್ಕಾಗಿ ತ್ಯಾಗಮಾಡುವವರು ದೇಶ ಸೇವಕರು. ಆದರೆ

ಆಕೆಯ ಹೆಸರಿನಲ್ಲಿ ಬೇರೆಯುವರನ್ನು ಒತ್ತಾಯ ಪಡಿಸುವವರು ಶತ್ರುಗಳು. ಸ್ವಾತಂತ್ರ್ಯದ ಬುಡಕಡಿದು ಮೇಲೆ ಅದನ್ನು ಹುಡುಕಿದಂತಾಗುತ್ತದೆ," ಎನ್ನುತ್ತಿದ್ದರು.

ಆದರೆ ಸಂದೀಪ ಇಲ್ಲಿ ಬಂದು ನಿಂತು, ಅವನ ಅನುಯಾಯಿಗಳು ಸುತ್ತಾಡಲು ಪ್ರಾರಂಭಿಸಿದ ಮೇಲೆ ನಮ್ಮಲ್ಲೂ ಉತ್ಸಾಹದ ತರಂಗಗಳೇಳಲಾರಂಭಿಸಿದುವು. ಕೆಲವು ಯುವಕರು, ಹಳ್ಳಿಯಲ್ಲಿ ಅಪ್ರಯೋಜಕರೆನ್ನಿಸಿಕೊಂಡವರು ಕೂಡ, ಆತನೊಡನೆ ಸೇರಿದರು. ಆದರೆ ಅವರ ಉತ್ಸಾಹವೇ ಅವರಲ್ಲಿ ತೇಜಸ್ಸನ್ನು ತುಂಬಿತು.

ಆನಂದದ, ಆಕಾಂಕ್ಷೆಯ ನಿರ್ಮಲ ಗಾಳಿಯಲ್ಲಿ, ಕಶ್ಮಲ, ಕೊಳೆಗಳು ಕೊಚ್ಚಿಹೋದುವು. ದೇಶ ಮರುಗುತ್ತಿರುವಾಗ ಜನರಲ್ಲಿ ಸರಳತೆ, ಪ್ರಾಮಾಣಿಕತನ, ಆರೋಗ್ಯಗಳಿರುವುದು ಕಷ್ಟ.

ನನ್ನ ಪತಿಯ ಸೀಮೆಯಲ್ಲಿ ಮಾತ್ರ ಪರದೇಶದ ಸಕ್ಕರೆ ಉಪ್ಪು ಬಟ್ಟೆಗಳನ್ನು ಬಹಿಷ್ಕರಿಸಿರಲಿಲ್ಲ. ಅಧಿಕಾರಿಗಳಿಗೇ ಅವಮಾನವಾಗಿತ್ತು. ಕೆಲವು ದಿನಗಳ ಹಿಂದೆ ಸ್ವದೇಶಿ ಪದಾರ್ಥಗಳನ್ನು ತರಿಸಿ ಹಳ್ಳಿಯಲ್ಲಿ ನನ್ನಪತಿ ಮಾರಾಟಕ್ಕಿಡಿಸಿದಾಗ ಆತನನ್ನು ನೋಡಿ ಎಲ್ಲರೂ ಹಾಸ್ಯಮಾಡಿದ್ದರು. ಸ್ವದೇಶಿ ಎನ್ನುವುದಿನ್ನೂ ಹೆಮ್ಮೆಯ ವಿಚಾರವಲ್ಲದಿದ್ದಾಗ ನಾವೆಲ್ಲರೂ ಅದನ್ನು ತುಚ್ಛೀಕರಿಸುತ್ತಿದ್ದೆವು.

ಈಗಲೂ ನನ್ನ ಪತಿ ಸ್ವದೇಶಿ ವಸ್ತುಗಳನ್ನೇ ಉಪಯೋಗಿಸುತ್ತಾರೆ—ಸೀಸದ ಕಡ್ಡಿ, ಚಾಕು, ಲೇಖಣಿ, ನೀರು ಕುಡಿಯುವ ಬಟ್ಟಲು, ಹರಳೆಣ್ಣೆಯ ದೀಪ, ಎಲ್ಲಾ ಸ್ವದೇಶಿಯೇ. ಆದರೆ ಈ ಸಪ್ಪೆ ಸ್ವದೇಶಿ ನಮ್ಮ ಮೇಲೆ ಪರಿಣಾಮವನ್ನುಂಟು ಮಾಡಲಿಲ್ಲ. ಯಾರಾದರೂ ಪಾಶ್ಚಾತ್ಯ ದೊಡ್ಡ ಮನುಷ್ಯರು ಬಂದಾಗ ನನ್ನ ಪತಿಯ ಕೋಣೆಯಲ್ಲಿದ್ದ ಸಾಮಾನುಗಳನ್ನು ನೋಡಿ ನನಗೆ ನಾಚಿಕೆಯಾಗುತ್ತಿತ್ತು.

ನನ್ನ ಪತಿ ನನ್ನ ಆಕ್ಷೇಪಣೆಗಳನ್ನು ಕಂಡು ನಗುತ್ತಾ, "ಸಣ್ಣ ವಿಚಾರಗಳಿಗೇಕೆ ನೊಂದುಕೊಳ್ಳುತ್ತೀ," ಎಂದರು.

"ಅವರು ನಮ್ಮನ್ನು ನಾಗರಿಕತೆಯರಿಯದ ಕಾಡು ಜನರು ಎಂದುಕೊಳ್ಳುತ್ತಾರೆ."

"ಅವರು ಹಾಗೆಂದುಕೊಂಡರೆ ನಾನು ಅವರ ನಾಗರಿಕತೆ ಚರ್ಮದ ಪೊರೆಯನ್ನು ದಾಟಲಿಲ್ಲವೆಂದುಕೊಳ್ಳುತ್ತೇನೆ."

ನನ್ನ ಪತಿಯ ಮೇಜಿನಮೇಲೆ ಹೂಗಳನ್ನಿಡಲು ಒಂದು ಹಿತ್ತಾಳೆ ಪಾತ್ರೆಯಿತ್ತು. ಯಾರಾದರೂ ಪಾಶ್ಚಾತ್ಯ ಅತಿಥಿಗಳು ಬರುವರೆಂದು ತಿಳಿದಾಗ ನಾನು ಅದನ್ನು ತೆಗೆದು ಗಾಜಿನಪಾತ್ರೆ ಇಡುತ್ತಿದ್ದೆ. ಕಡೆಗೆ ಆತನು, "ಆ ಪಾತ್ರೆ, ಹೂಗಳಷ್ಟೇ ಸ್ವಪರಿಜ್ಞಾನವಿಲ್ಲದುದು. ಆದರೆ ಈ ಗಾಜಿನ ಆತ್ಮಪ್ರಶಂಸೆಗೆ ಕೃತಕಪುಷ್ಪಗಳೇ ಸರಿಯಾದುವು" ಎಂದರು. ದೊಡ್ಡರಾಣಿ ಯೊಬ್ಬಳು ನನ್ನ ಪತಿಯ ಭ್ರಾಂತಿಗಳಿಗೆ ಉತ್ತೇಜನಕೊಡು ತ್ತಿದ್ದಳು. ಒಂದುದಿನ ಮೇಲುಸಿರುಬಿಡುತ್ತಾ "ಕೇಳಿದೆಯಾ ತಮ್ಮಾ! ಒಳ್ಳೆ ಸ್ವದೇಶಿ ಸಾಬೂನುಗಳು ಬಂದಿವೆಯಂತೆ. ನನ್ನ ಅಲಂಕಾರದ ದಿನಗಳು ಕಳೆದುಹೋದರೂ, ಇವುಗಳಲ್ಲೇನೂ ಪ್ರಾಣಿಯ ಕೊಬ್ಬಿಲ್ಲದಿದ್ದರೆ ನಾನೂ ಉಪಯೋಗಿಸಿ ನೋಡು ತ್ತೇನೆ," ಎಂದಳು.

ಇಂತಹ ಮಾತುಗಳೆಂದರೆ ನನ್ನ ಪತಿಗೆ ಬಹು ಸಂತೋಷ. ಈಗ ಮನೆಯ ತುಂಬ ಸ್ವದೇಶಿ ಗಂಧ, ಸಾಮಾನುಗಳು! ಅವೆಂತಹ ಸಾಬೂನುಗಳು! ನನ್ನ ಓರಗಿತ್ತಿ ತಾನು ಪಾಶ್ಚಾತ್ಯ ಸಾಬೂನುಗಳನ್ನೇ ಉಪಯೋಗಿಸಿ ಇವುಗಳನ್ನು ಬಟ್ಟೆ ಒಗೆಯಲು ಆಳುಗಳಿಗೆ ಕೊಡುತ್ತಾಳೆಂದು ನಾನರಿಯೆನೆ? ಮತ್ತೊಂದು ಸಲ, "ತಮ್ಮಾ, ನನಗೆ ಸ್ವದೇಶಿ ಲೇಖಣಿಗಳನ್ನು ತಂದುಕೊಡು ಎಂದಳು."

ಅವಳ 'ತಮ್ಮ' ಉಬ್ಬಿ ಆಕೆಯ ಕೋಣೆಯ ತುಂಬ

ಕಡ್ಡಿಗಳನ್ನು ತುಂಬಿದನು. ಓದು ಬರೆಹದ ತಂಟೆಗೇ ಹೋಗದ ಆಕೆಗೆ ಯಾವ ಲೇಖಣಿಯಾದರೇನು? ಆದರೆ ಆಕೆ ಬರೆಯುವುದು ದಂತದ ಲೇಖಣಿಯಿಂದಲೇ.

ನಾನು ನನ್ನ ಪತಿಯ ಹುಚ್ಚಾಟಗಳನ್ನು ಮೆಚ್ಚುವುದಿಲ್ಲವೆಂದು ಅಸಮಾಧಾನ ತೋರಿಸಲು ಇವೆಲ್ಲಾ ಆಟಗಳು. ಆಕೆಯ ಕಾಪಟ್ಯವನ್ನು ನನ್ನ ಪತಿಗೆ ತಿಳಿಸಲು ಸಾಧ್ಯವೇ ಆಗಲಿಲ್ಲ. ಆ ವಿಚಾರವೆತ್ತಿದರೆ ನನ್ನ ಪತಿ ಮುಖ ಬಿಗಿದುಕೊಳ್ಳುವರು. ಇಂತಹವರಿಗೆ ಮೋಸದ ಅರಿವನ್ನುಂಟು ಮಾಡುವವರಿಗೇ ತೊಂದರೆ.

ದೊಡ್ಡ ರಾಣಿಗೆ ಹೊಲಿಗೆಯಲ್ಲಿ ಆಸಕ್ತಿ. ಒಂದು ದಿನ ತಡೆಯಲಾರದೆ ನಾನು—"ನೀವೆಂತಹ ಮೋಸಗಾತಿ ಅಕ್ಕ! ನಿಮ್ಮ 'ತಮ್ಮ' ನಿದ್ದರೆ ಸ್ವದೇಶಿ ಕತ್ತರಿ ಬೇಕೆನ್ನುತ್ತೀರಿ. ಆದರೆ ಉಪಯೋಗಿಸುವುದು ಹೊರದೇಶದ ಕತ್ತರಿ ಮಾತ್ರ"—ಎಂದೆ.

ಆಕೆ, "ತಪ್ಪೇನು? ಅವನಿಗೆ ಅದರಿಂದ ಎಷ್ಟು ಸಂತೋಷ! ಚಿಕ್ಕಂದಿನಿಂದಲೂ ನಾವಿಬ್ಬರೂ ಒಟ್ಟಿಗೆ ಬೆಳೆದಿದ್ದೇವೆ. ಅವನ ಮುಖ ಪೆಚ್ಚಾದರೆ, ನಿನ್ನ ಹಾಗೆ ನಾನು ಸಹಿಸಲಾರೆ. ಅವನಿಗೆ ಈ ಆಟ ಬಿಟ್ಟರೆ ಬೇರೆ ಯಾವ ಸಂತೋಷವಿದೆ? ನೀನೇ ಅವನನ್ನು ದುರ್ವ್ಯಸನಕ್ಕೀಡು ಮಾಡುವವಳು, ಕಡೆಗೂ ನಾಶ ಮಾಡುವವಳು," ಎಂದಳು.

"ನೀವೇನೆಂದರೂ ಹೀಗೆ ಮೋಸಮಾಡುವುದು ತಪ್ಪು," ಎಂದೆ.

ನನ್ನ ಓರಗಿತ್ತಿ ಗಟ್ಟಿಯಾಗಿ ನಕ್ಕು, "ಓ ನಿಷ್ಕಪಟಿಯಾದ ಚಿಕ್ಕ ರಾಣಿ! ನೀನು ಉಪಾಧ್ಯಾಯರ ದೊಣ್ಣೆಯಂತೆ ನೆಟ್ಟಗಿರುವೆಯಲ್ಲವೆ! ಆದರೆ ಹೆಂಗಸು ಹಾಗಿರಲಾರಳು. ಅವಳು ಬಾಗಿದರೂ ವಕ್ರವಾಗದಷ್ಟು ಮೃದು." ಎಂದಳು.

ಆ ಮಾತುಗಳನ್ನು ನಾನು ಮರೆಯಲಾರದೆ ಹೋದೆ. "ನೀನೇ ಅವನನ್ನು ದುರ್ವ್ಯಸನಕ್ಕೆಳೆಯುವವಳು, ಕಡೆಗೂ

ನಾಶ ಮಾಡುವವಳು !" ಈ ದಿನ ನನಗೆನ್ನಿಸುತ್ತದೆ—ಪುರುಷ ನಿಗೆ ಮಾದಕ ಪದಾರ್ಥದ ಆಗತ್ಯವಿದ್ದರೆ—ಅದೆಂದಿಗೂ ಹೆಂಗಸಾಗದಿರಲಿ.

## ೧೩

ನಮ್ಮ ಜಹಗೀರಿಯಲ್ಲಿರುವ ಸುಖಸಾರ, ಜಿಲ್ಲೆಯಲ್ಲೇ ದೊಡ್ಡ ವ್ಯಾಪಾರ ಕೇಂದ್ರ. ಕೆರೆಯ ಒಂದು ಕಡೆ ಅಂಗಡಿ ಸಾಲಿದೆ; ಇನ್ನೊಂದು ಕಡೆ ವಾರದ ಸಂತೆ ನಡೆಯುತ್ತದೆ. ಮಳೆ ಗಾಲದಲ್ಲಿ ಕೆರೆಯ ನೀರು ನದಿಯೊಡನೆ ಸೇರಿದಾಗ ದೋಣಿಗಳಲ್ಲಿ ಹತ್ತಿ ಉಣ್ಣೆಬಟ್ಟೆಗಳು ಮಾರಾಟಕ್ಕೆ ಬರುತ್ತವೆ.

ನಮ್ಮ ಉತ್ಸಾಹದ ಅತಿರೇಕದಲ್ಲಿ ಸಂದೀಪ ಪಾಶ್ಚಾತ್ಯ ಪದಾರ್ಥಗಳನ್ನೂ ಸೀಮೆಯ ಪ್ರಭಾವವನ್ನೂ ಬಹಿಷ್ಕರಿಸ ಬೇಕೆಂದನು.

ನಾನೂ ಯುದ್ಧಕ್ಕೆ ಸಿದ್ಧಳಾಗಿ, "ಹೌದು, ಖಂಡಿತವಾಗಿ!" ಎಂದೆ. ಸಂದೀಪ, "ನಾನು ನಿಖಿಲನೊಡನೆ ಮಾತನಾಡಿನೆ. ಉಪನ್ಯಾಸಕೊಡಲು ಅಡ್ಡಿಯಿಲ್ಲವೆಂದೂ, ಬಲವಂತ ಮಾತ ಕೂಡದೆಂದೂ ಹೇಳಿದನು. ಶಕ್ತಿಯ ಸ್ವಾಭಿಮಾನದಿಂದ "ನಾನು ಅದನ್ನು ನೋಡಿಕೊಳ್ಳುತ್ತೇನೆ," ಎಂದೆ. ನನ್ನಲ್ಲಿ ನನ ಪತಿಯ ಪ್ರೀತಿ ಎಷ್ಟು ಗಾಢವಾದುದೆಂದು ನನಗೆ ತಿಳಿದಿತ್ತು. ನನಗೆ ತಿಳಿವಳಿಕೆಯಿದ್ದಿದ್ದರೆ ಆ ಸಮಯದಲ್ಲಿ ಆ ಹಕ್ಕನು ಸ್ಥಾಪಿಸುವುದಕ್ಕೆ ಬದಲು ನನ್ನ ದೇಹವನ್ನು ಹರಿದು ಚೂರಾಗಿ ಸಲು ಒಪ್ಪುತ್ತಿದ್ದೆ. ಆದರೆ ಸಂದೀಪನೆದುರು ನನ್ನ ಶಕ್ತಿಯ ಪೂರ್ಣಬಲವನ್ನು ಪ್ರದರ್ಶಿಸಬೇಕಲ್ಲಾ !

ಸಂದೀಪ ತನ್ನ ಆಕರ್ಷಕ ರೀತಿಯಲ್ಲಿ, ಪ್ರತಿಯೊಬ ವ್ಯಕ್ತಿಗೂ ವಿಶ್ವಶಕ್ತಿ ಬೇರೆ ಬೇರೆ ವಿಧದಲ್ಲಿ ದರ್ಶನಕೊಡುವು ದೆಂದು ತಿಳಿಯಪಡಿಸಿದ್ದನು. ವೈಷ್ಣವ ವೇದಾಂತದಲ್ಲಿ ಶಕ್ತಿ

ಆನಂದಸ್ವರೂಪಿಣಿ; ಜಗತ್ತಿನ ಹೃದಯಾಂತರಾಳದಲ್ಲಿ ನೆಲಸಿ ಪ್ರೇಮಿಯ ಹೃದಯವನ್ನು ಸೆಳೆಯುತ್ತದೆ. ಈ ಶಕ್ತಿಯನ್ನು ತಮ್ಮ ಪ್ರಕೃತಿಯ ಗಭೀರತೆಯಿಂದ ಹೊರಕ್ಕೆ ಸೆಳೆಯಲು ಮಾನವರು ಆಶಿಸುತ್ತಾರೆ; ಹಾಗೆ ಸೆಳೆಯಲು ಸಮರ್ಥರಾದರೆ ಅಂಥ ವ್ಯಕ್ತಿಗಳು ಕತ್ತಲಲ್ಲಿ ತೇಲಿಬರುವ ಸಂಗೀತದ ಅರ್ಥವನ್ನು ತಿಳಿಯಬಲ್ಲರು. ಸಂದೀಪ ಆಗ ಹಾಡಲುಪಕ್ರಮಿಸಿದನು—

ನನ್ನ ಕೊಳಲಿದು ತನ್ನ ಹಾಡಿನ ಭರದೊಳಿದ್ದುದು;
ಈಗ ನಿಂತುದು ಗಾನ ನಾವಿದಿರಾಗಲು.
ನೀನಡಗಿ ಮಲಗಿರುವಂದು ಕರೆಯೆನ್ನದು
ನಿನ್ನನರಸುತ್ತದಿಗ್ದೇಶಗಳಲಿ ಸುತ್ತಿತ್ತು;
ಇಂದುನೀಡಿಹುದು ಪ್ರಿಯೆಯಹಾಸವದು ತೃಪ್ತಿಯನು.

ಆತನ ಉಪಮಾನಗಳಲ್ಲಿ ನಾನು ಸಾಧಾರಣ ವಿಮಲೆಯೆಂಬುದನ್ನೇ ಮರೆತೆ. ನಾನು ಶಕ್ತಿ; ಜಗತ್ತಿನ ಆನಂದಸ್ವರೂಪಿಣಿ. ನನಗೆ ಕಟ್ಟುಗಳಿಲ್ಲ; ಅಸಾಧ್ಯವಾದುದು ಯಾವುದೂ ಇಲ್ಲ; ನನ್ನ ಸ್ಪರ್ಶದಿಂದ ನವಜೀವಸಂಚಾರ. ನನ್ನ ಸುತ್ತಲಿನ ಪ್ರಪಂಚ ನನ್ನ ಸೃಷ್ಟಿ; ನನ್ನ ಹೃದಯ ಮಾರ್ನುಡಿಯುವ ಮೊದಲು ಶರತ್ಕಾಲದ ಆಗಸದಲ್ಲಿ ಈ ಸ್ವರ್ಣಸಂಪತ್ತಿರಲಿಲ್ಲ.

ಈ ನಾಯಕ—ದೇಶ ಸೇವಕ, ನನ್ನ ಭಕ್ತ—ಜ್ಞಾನ ಜ್ಯೋತಿ, ಉಜ್ವಲ ಶಕ್ತಿ, ಪ್ರತಿಭಾವಂತ—ಈತನನ್ನು ಕೂಡ ಕ್ಷಣಕ್ಷಣಕ್ಕೂ ನಾನೇ ಸೃಷ್ಟಿಸುತ್ತಿದ್ದೆ. ನನ್ನ ಸಾನ್ನಿಧ್ಯದಿಂದ ಆತನಲ್ಲಿ ಜೀವಕಳೆ ತುಂಬಿ ಬರುವುದನ್ನು ನಾನೇ ನೋಡಿಲ್ಲವೆ?

ಒಂದು ದಿನ ಸಂದೀಪ ತನ್ನ ಶಿಷ್ಯನಾದ ಅಮೂಲ್ಯನೆಂಬ ಹುಡುಗನನ್ನು ನನ್ನ ಬಳಿ ಇಟ್ಟುಕೊಳ್ಳಬೇಕೆಂದು ಹೇಳಿದನು. ಆ ಹುಡುಗನ ಕಣ್ಣುಗಳಲ್ಲಿ ಬೆಳಗಿದ ಬೆಳಕನ್ನು ನೋಡಿ, ನನ್ನ ಶಕ್ತಿಯ ಪರಿಣಾಮ ಅವನ ಮೇಲೂ ಉಂಟಾಯಿತೆಂದು ತಿಳಿದೆ. ಮಾರನೆಯ ದಿನ ಸಂದೀಪ, "ಇದೇನು ನಿನ್ನ ಮಾಟ? ಈಗ

ಅಮೂಲ್ಯ ಹುಡುಗನಲ್ಲ. ಅವನ ಜೀವನ ಜ್ಯೋತಿ ಉರಿಯುತ್ತಿದೆ. ನಿನ್ನ ಬೆಳಕನ್ನು ಮನೆಯಲ್ಲಿ ಅಡಗಿಸಿಡಲು ಯಾರಿಗೆ ಸಾಧ್ಯ ? ಪ್ರತಿಯೊಬ್ಬರೂ ಅದರ ಸ್ಪರ್ಶದಿಂದ ಎಂದಾದರೂ ಬೆಳಗಬೇಕು. ಆಗ ದೇಶದಲ್ಲಿ ಎಂತಹ ದೀಪಾವಳಿ ! " ಎಂದನು.

ನನ್ನ ಕೀರ್ತಿಯ ಬೆಳಕಿಗೆ ನಾನೇ ಬೆರಗಾಗಿ ನನ್ನ ಭಕ್ತನ ಆಸೆಯನ್ನು ನೆರವೇರಿಸಬೇಕೆಂದು ನಿರ್ಧರಿಸಿದೆನು. ನನ್ನ ಇಷ್ಟಕ್ಕೆ ಅಡ್ಡಿ ಬರಲು ಯಾರಿಗೂ ಸಾಧ್ಯವಿಲ್ಲವೆಂಬ ನಂಬಿಕೆ ನನಗಿತ್ತು. ಸಂದೀಪನೊಡನೆ ಮಾತು ಮುಗಿಸಿ ಕೋಣೆಗೆ ಹೋಗಿ ತುರುಬನ್ನು ಕಟ್ಟಿದೆನು. ಮೇಲಕ್ಕೆ ಬಾಚಿ, ತಲೆಯ ಮೇಲೆ ತುರುಬು ಕಟ್ಟುವುದನ್ನು ಮಿಸ್. ಗಿಲ್ಬಿಯಿಂದ ಕಲಿತಿದ್ದೆ. ಆ ರೀತಿ ಬಾಚುವುದು ನನ್ನ ಪತಿಗೆ ಇಷ್ಟವಾಗಿತ್ತು. ಒಂದು ದಿನ ಅವರು "ದೈವ ಸ್ತ್ರೀಯ ಕಂಠದ ಸೌಂದರ್ಯ ತೋರಲು, ಕಾಳಿದಾಸನನ್ನಲ್ಲದೆ ನನ್ನನ್ನಾರಿಸಿರುವುದು ಅನ್ಯಾಯ. ಕವಿ ಬಹುಶಃ ಅದನ್ನು ಪುಷ್ಪ ಕಾಂಡಕ್ಕೆ ಹೋಲಿಸುತ್ತಿದ್ದನು ; ನನಗೆ ಅದು ನಿನ್ನ ಕೂದಲಿನ ನೀಲ ತೇಜಸ್ಸನ್ನು ಎತ್ತಿ ಹಿಡಿದಿರುವ ದೀವಟಿಗೆಯಂತಿದೆ."— ಎಂದರು. ಹಾಗೆಂದು........ಆದರೆ ಈ ಹಿಂದಿನ ಪುರಾಣವೆಲ್ಲಾ ಏಕೆ !

ನನ್ನ ಪತಿಗೆ ಹೇಳಿ ಕಳುಹಿಸಿದೆ. ಹಿಂದೆ ಆತನನ್ನು ನನ್ನಲ್ಲಿಗೆ ಬರಮಾಡಿ ಕೊಳ್ಳಲು ಎಷ್ಟೋ ನೆವಗಳನ್ನು ಹೂಡುತ್ತಿದ್ದೆ. ಈಗ ಅನೇಕ ದಿನಗಳಿಂದ ಆ ಅಭ್ಯಾಸ ತಪ್ಪಿ ಹೋಗಿತ್ತು.

## ನಿಖಿಲನ ಕಥೆ

### ೬

ಪಂಚುವಿನ ಹೆಂಡತಿ ಕ್ಷಯದಿಂದ ನರಳಿ ಸತ್ತಿದ್ದಳು. ಪಂಚು ತನ್ನ ಜನರ ಸಮಾಧಾನಕ್ಕಾಗಿ ಪ್ರಾಯಶ್ಚಿತ್ತ ಮಾಡಿ

ಕೊಳ್ಳ ಬೇಕಾಗಿತ್ತು. ಅದಕ್ಕೆ ನೂರಿಪ್ಪತ್ತು ಮೂರು ರೂಪಾಯಿ ಖರ್ಚಾಗುವುದೆಂದು ಅವರೆಲ್ಲಾ ಲೆಖ್ಖಮಾಡಿ ಹೇಳಿದ್ದರು.

ನಾನು ಕೋಪದಿಂದ, "ಏನನ್ಯಾಯ! ಒಪ್ಪಬೇಡ, ಪಂಚು. ಅವರೇನು ಮಾಡಬಲ್ಲರು?" ಎಂದೆ.

ಆಯಾಸಪಟ್ಟ ಎತ್ತಿನಂತೆ ಸಹನೆ ತುಂಬಿದ ದೃಷ್ಟಿಯಿಂದ, "ನನ್ನ ಹಿರಿಯ ಮಗಳಿಗೆ ಮದುವೆಯಾಗಬೇಕು. ನನ್ನ ಹೆಂಡತಿಯ ತಿಥಿ ಮಾಡಬೇಕು." ಎಂದನು. ನಾನು "ಪಾಪ ನಿನ್ನದೇ ಆಗಿದ್ದರೂ ಅದಕ್ಕಾಗಿ ಬೇಕಾದಷ್ಟು ಕಷ್ಟ ಆಗಲೇ ಅನುಭವಿಸಿರುವೆಯಲ್ಲಾ!"

"ಅದು ನಿಜ, ಸ್ವಾಮಿ. ಭೂಮಿ ಸ್ವಲ್ಪ ಮಾರಿ, ಸ್ವಲ್ಪ ದೀಡುಮಾಡಿ, ವೈದ್ಯನ ದುಡ್ಡುಕೊಟ್ಟೆ. ಬ್ರಾಹ್ಮಣರಿಗೆ ಕೊಡಬೇಕಾದುದನ್ನು ಕೊಟ್ಟೇ ತೀರಬೇಕಲ್ಲ."

ಚರ್ಚೆಯಿಂದೇನು ಪ್ರಯೋಜನ? ಇಂತಹ ದಾನಗಳನ್ನಪೇಕ್ಷಿಸುವ ಬ್ರಾಹ್ಮಣರ ಶುದ್ಧಿಯ ಕಾಲ ಬರುವುದು ಯಾವಾಗ?

ಮೊದಲೇ ಉಪವಾಸದ ಅಂಚಿನಲ್ಲಿ ನರಳುತ್ತಿದ್ದ ಪಂಚು ಹೆಂಡತಿಯ ದಹನ ಕ್ರಿಯೆಗಳನ್ನು ನೆರವೇರಿಸಿದ ಮೇಲೆ ತೀರ ಮುಳುಗಿಹೋದನು. ಶಾಂತಿ ಪಡೆಯಲು, ಒಬ್ಬ ಸನ್ಯಾಸಿಯ ಸೇವೆ ಮಾಡುತ್ತಾ ಮಕ್ಕಳ ಹಸಿವನ್ನು ಮರೆಯುವಷ್ಟು ವೇದಾಂತ ಸಂಪಾದಿಸಿದನು. ಕೆಲವು ಕಾಲ, ಪ್ರಪಂಚ ನಶ್ವರವೆಂದೂ, ಸುಖ ಇಲ್ಲದಿದ್ದರೆ, ದುಃಖವೂ ಮಾಯೆಯೆಂದೂ, ನಂಬಿದನು. ಒಂದು ರಾತ್ರಿ ಮಕ್ಕಳನ್ನು ಮುರುಕು ಗುಡಿಸಲಲ್ಲಿ ಬಿಟ್ಟು ಅಲೆದಾಡಲು ಹೊರಟನು.

ನನ್ನ ಮನಸ್ಸಿನಲ್ಲಿ ದೇವದಾನವರ ಸಮುದ್ರಮಥನ ನಡೆಯುತ್ತಿದ್ದುದರಿಂದ ಆ ಸಮಯದಲ್ಲಿ ಇದೊಂದೂ ನನಗೆ ತಿಳಿಯಲಿಲ್ಲ. ಪಂಚುವಿನ ತಬ್ಬಲಿ ಮಕ್ಕಳನ್ನು ತನ್ನ ಮನೆಯಲ್ಲಿಟ್ಟುಕೊಂಡು ಪೋಷಿಸುತ್ತಿದ್ದೇನೆಂದು ನನ್ನ ಗುರು ಹೇಳಲೂ ಇಲ್ಲ.

ಒಂದು ತಿಂಗಳಾದಮೇಲೆ ಸನ್ಯಾಸದ ಮೋಹ ಕಳೆದು ಕೊಂಡು ಪಂಚು ಹಿಂದಿರುಗಿದನು. ಅವನ ಹಿರಿಯಮಕ್ಕಳಿಬ್ಬರೂ ತಬ್ಬಿಕೊಂಡು,"ಇಷ್ಟುಕಾಲ ಎಲ್ಲಿ ಹೋಗಿದ್ದೆಯಪ್ಪಾ?" ಎಂದರು. ಚಿಕ್ಕಹುಡುಗ ತೊಡೆಯನ್ನೇರಿದನು. ಎರಡನೆಯ ಹುಡುಗಿ ಬೆನ್ನಿನಮೇಲೆ ಬಾಗಿ ಕುತ್ತಿಗೆಯನ್ನಪ್ಪಿದಳು; ಎಲ್ಲರೂ ಅತ್ತರು.

ಪಂಚು ನನ್ನ ಗುರುವಿನೊಡನೆ, "ಈ ಮಕ್ಕಳಿಗೆ ಅನ್ನ ಹಾಕುವ ಯೋಗ್ಯತೆ ನನಗಿಲ್ಲ, ಸ್ವಾಮಿ—ಓಡಿಹೋಗುವ ಧೈರ್ಯವಿಲ್ಲ. ಹೀಗೆ ವಿಧಿ ಕೈಕಾಲು ಕಟ್ಟಿ ಹೊಡೆಯಲು ನಾನೇನು ಪಾಪ ಮಾಡಿದ್ದೆ ?" ಎಂದು ಅತ್ತನು.

ಈ ಮಧ್ಯೆ ಅವನ ವ್ಯಾಪಾರ ಸಂಬಂಧಗಳೂ ಕಡಿದು ಹೋಗಿದ್ದುವು. ನನ್ನ ಗುರುವಿನ ಮನೆಯಲ್ಲೇ ನಿಂತನು. ಕಡೆಗೆ ನನ್ನ ಗುರು "ನೋಡು, ಪಂಚು ! ನಿನ್ನ ಗುಡಿಸಲನ್ನು ಸರಿಮಾಡ ದಿದ್ದರೇ ಬಿದ್ದೇ ಹೋಗುತ್ತೆ. ನಾನು ಸ್ವಲ್ಪ ದುಡ್ಡು ಕೊಡುತ್ತೇನೆ. ವ್ಯಾಪಾರ ಕುದುರಿಸಿ ಸ್ವಲ್ಪ ಸ್ವಲ್ಪವಾಗಿ ಹಿಂದಕ್ಕೆ ಕೊಡು," ಎಂದು ಹೇಳಬೇಕಾಯಿತು.

ಪಂಚುವಿಗೆ ಸಂತೋಷವಾಗಲಿಲ್ಲ—ಲೋಕದಲ್ಲಿ ದಾನ ಧರ್ಮಗಳೇ ಇಲ್ಲವೆ? ದುಡ್ಡು ಕೊಟ್ಟು, ನನ್ನ ಗುರು ರಶೀತಿ ಪಡೆಯಲು, ಇಂತಹ ಸಹಾಯದಿಂದ ಲಾಭವೇನು, ಎಂದು ಅವನಿಗೆ ತೋರಿತು. ಹೊರಗೆ ದಾನಕೊಟ್ಟು, ಒಳಗಿನ ಋಣ ಪಡೆಯಲು ನನ್ನ ಗುರುವಿಗೆ ಇಷ್ಟವಾಗಲಿಲ್ಲ. ಸ್ವಾಭಿಮಾನ ನಾಶವಾದರೆ, ಜಾತಿ ಹೋದಂತೆ ಎಂದು ಆತನ ಅಭಿಪ್ರಾಯ.

ಪತ್ರಕ್ಕೆ ರುಜುಹಾಕಿದ ಮೇಲೆ ಪಂಚುವಿಗೆ ನನ್ನ ಗುರುವಿ ನಲ್ಲಿದ್ದ ಮರ್ಯಾದೆ ಬಹಳ ಮಟ್ಟಿಗೆ ಕಡಮೆಯಾಯಿತು. ನನ್ನ ಗುರುವಿಗೂ ಅದೇ ಸಮಾಧಾನ. "ಮನುಷ್ಯರಲ್ಲಿ ಮರ್ಯಾದೆ ಇರಬೇಕು; ಪೂಜೆ ಮನುಷ್ಯನ ಯೋಗ್ಯತೆಗೆ ಮೀರಿದುದು," ಎಂದು ವಿವರಿಸಿದರು.

ಪಂಚು ಬಟ್ಟೆಯನ್ನು ಕೊಂಡು ಹಳ್ಳಿಯಲ್ಲಿ ಮಾರ ತೊಡಗಿದನು. ಅವನಿಗೆ ಸಿಕ್ಕುತ್ತಿದ್ದ ಅಕ್ಕಿ, ಸೆಣಬು ಮುಂತಾದುವುಗಳಿಂದಲೇ ಸಾಲ ತೀರಬೇಕಾಯಿತು. ಎರಡು ತಿಂಗಳಲ್ಲಿ ಸ್ವಲ್ಪ ಹಣ ತೀರಿಸಿದನು. ಗುರುವಿನಲ್ಲಿ ಮರ್ಯಾದೆಯೂ ಕಡಮೆಯಾಯಿತು. ಬರಿಯ ದುಡ್ಡಿನಾಸೆಯ ಮನುಷ್ಯನನ್ನು ದೇವರೆಂದು ಪೂಜಿಸುತ್ತಿದ್ದೆನೆಂದು ಅವನಿಗೆ ತೋರಿತು.

ಇಂತಹ ಸಮಯದಲ್ಲಿ ಸ್ವದೇಶಿ ಪ್ರವಾಹ ಅವನ ಮೇಲೆ ನುಗ್ಗಿ ಬಂತು.

೭

ಆಗ ರಜಾ ದಿನಗಳಾದುದರಿಂದ ನಮ್ಮ ಹಳ್ಳಿಯ ಅನೇಕ ಯುವಕರು ಸ್ಕೂಲು ಕಾಲೇಜುಗಳಿಂದ ಬಂದಿದ್ದರು. ಉತ್ಸಾಹದಿಂದ ಸಂದೀಪನ ಹಿಂಬಾಲಕರಾಗಿ ಕೆಲವರು ವಿದ್ಯಾಭ್ಯಾಸಕ್ಕೇ ತಿಲಾಂಜಲಿಕೊಟ್ಟರು. ಅನೇಕರು ವಿದ್ಯಾಭ್ಯಾಸಕ್ಕೆ ನನ್ನಿಂದ ಸಹಾಯ ಪಡೆಯುತ್ತಿದ್ದವರು. ಅವರೆಲ್ಲರೂ ಬಂದು ಸುಖಸಾರದ ಮಾರುಕಟ್ಟೆಗಳಿಂದ ವಿದೇಶಿ ವಸ್ತುಗಳನ್ನು ಬಹಿಷ್ಕರಿಸಬೇಕೆಂದು ನನಗೆ ಹೇಳಿದರು.

ಆಗುವುದಿಲ್ಲವೆಂದೆ.

ಅವರು ತಿರಸ್ಕಾರದಿಂದ " ಏಕೆ ಮಹಾರಾಜ? ನಿಮಗೆ ಕಂಬ ನಷ್ಟವಾಗುತ್ತೋ ? " ಎಂದರು.

ಅವರು ತಿರಸ್ಕಾರವನ್ನು ಲಕ್ಷಿಸದೆ, ನಷ್ಟ ನನಗಾಗುವುದಿಲ್ಲವೆಂದೂ, ಬಡವ್ಯಾಪಾರಿಗಳಿಗಾಗುವುದೆಂದೂ ಹೇಳಬೇಕೆಂದಿದ್ದಾಗ ನನ್ನ ಗುರು " ಹೌದು ನಷ್ಟ ಅವನದೇ—ನಿಮ್ಮದಲ್ಲ. ಅದು ಸ್ಪಷ್ಟ" ಎಂದರು.

" ಆದರೆ ದೇಶಕ್ಕಾಗಿ......"

" ದೇಶವೆಂದರೆ ಮಣ್ಣಲ್ಲ. ಅದರಲ್ಲಿರುವ ಜನ, " ಎಂದರು ನಮ್ಮ ಗುರು—" ಅವರಿಗೇನಾಗುತ್ತಿದೆಯೆಂಬ ಅರಿ

ವಾದರೂ ನಿಮಗಿದೆಯೋ? ಈಗ ಬಂದು ಅವರು ತಿನ್ನಬೇಕಾದ ಉಪ್ಪು, ಉಡಬೇಕಾದ ಬಟ್ಟೆಗಳನ್ನು ನಿರ್ಧರಿಸುತ್ತಿದ್ದೀರಿ. ಅವರು ಇಂತಹ ದಬ್ಬಾಳಿಕೆಗೇಕೆ ಬಗ್ಗಬೇಕು, ನಾವೇಕೆ ಒಪ್ಪಬೇಕು?"

"ಆದರೆ ನಾವೂ ಸ್ವದೇಶಿ ಉಪ್ಪು, ಸಕ್ಕರೆ, ಬಟ್ಟೆಗಳನ್ನೇ ಉಪಯೋಗಿಸುತ್ತಿದ್ದೇವೆ."

"ನಿಮ್ಮ ಹುಚ್ಚಿನ ಪ್ರೀತಿಗಾಗಿ ನೀವೇನಾದರೂ ಮಾಡಿಕೊಳ್ಳಿ. ನೀವು ಅನುಕೂಲಸ್ಥರು, ನಿಮಗೆ ಬೆಲೆಯ ಆಲೋಚನೆ ಇಲ್ಲ. ಬಡವರು ನಿಮಗಡ್ಡಿ ಬರುವುದಿಲ್ಲ; ನೀವು ಮಾತ್ರ ಅವರನ್ನು ಬಲವಂತ ಮಾಡುತ್ತೀರಿ. ಈಗಲೇ ಜೀವನದ ಪ್ರತಿ ಕ್ಷಣವೂ ಬರಿಯ ಬದುಕಿಗಾಗಿ ಒದ್ದಾಡುತ್ತಿದ್ದಾರೆ. ಕೆಲವು ಕಾಸುಗಳು ಅವರ ಜೀವನದಲ್ಲಿ ಎಷ್ಟು ಬದಲಾವಣೆ ಮಾಡಬಲ್ಲವೆಂಬುದನ್ನು ಕೂಡ ನೀವರಿಯಿರಿ. ಮೇಲ್ಮಟ್ಟದಲ್ಲಿ ಜೀವಿಸುತ್ತಿದ್ದು ಈಗ ನಿಮ್ಮ ಆಕ್ರೋಶ ತೀರಿಸಿಕೊಳ್ಳಲು ಅವರನ್ನು ಆಯುಧಗಳಾಗಿ ಮಾಡಿಕೊಳ್ಳಲು ಪ್ರಯತ್ನ ಪಡುತ್ತಿದ್ದೀರಿ. ಇದು ಹೇಡಿತನ."

ಅವರೆಲ್ಲರೂ ನನ್ನ ಗುರುವಿನ ಹಳೆಯ ಶಿಷ್ಯರಾಗಿದ್ದುದರಿಂದ, ಕೋಪ ಬಂದರೂ, ಮರ್ಯಾದೆಯನ್ನತಿಕ್ರಮಿಸಲಿಲ್ಲ. ನನ್ನ ಕಡೆ ತಿರುಗಿ, "ದೇಶದ ಉದ್ಧಾರದ ಮಾರ್ಗದಲ್ಲಿ ನೀವೊಬ್ಬರೇ ಕಂಟಕವಾಗುತ್ತೀರ, ಮಹಾರಾಜ್," ಎಂದರು.

"ಹಾಗೆ ಮಾಡಲು ನಾನು ಯಾರು? ದೇಶೋದ್ಧಾರಕ್ಕೆ ನನ್ನ ಜೀವವನ್ನೇ ಕೊಡಲು ನಾನು ಸಿದ್ಧ." ಎಂದೆ.

ಎಂ.ಎ. ವಿದ್ಯಾರ್ಥಿ ವಕ್ರವಾಗಿ ನಕ್ಕು, "ದೇಶೋದ್ಧಾರಕ್ಕೆ ನೀವೇನು ಮಾಡುತ್ತಿದ್ದೀರಿ, ಕೇಳಬಹುದೆ?" ಎಂದನು.

"ಸ್ವದೇಶಿ ನೂಲನ್ನು ತರಿಸಿ ಸುಖಸಾರ ಮಾರುಕಟ್ಟೆಯಲ್ಲಿ ಮಾರಾಟಕ್ಕಿಟ್ಟಿದ್ದೇನೆ. ನೆರೆಯ ಜಮೀನ್ದಾರರ ಮಾರುಕಟ್ಟೆಗಳಿಗೂ ಕಳುಹಿಸಿದ್ದೇನೆ."

"ಅಲ್ಲಿ ಹೋಗಿದ್ದೆವು, ಮಹಾರಾಜ; ಅದನ್ನು ಯಾರೂ ಕೊಂಡುಕೊಳ್ಳುತ್ತಿರಲಿಲ್ಲ."

"ಅದು ನನ್ನ ತಪ್ಪೂ ಅಲ್ಲ, ಮಾರು ಕಟ್ಟೆಯ ತಪ್ಪೂ ಅಲ್ಲ. ದೇಶವೆಲ್ಲಾ ನಿಮ್ಮಂತೆ ಪ್ರತಿಜ್ಞೆ ಮಾಡಿಲ್ಲ, ಅಷ್ಟೆ!"

ನನ್ನ ಗುರು, "ಅಷ್ಟೇ ಅಲ್ಲ. ನಿಮ್ಮ ಪ್ರತಿಜ್ಞೆ ಬೇರೆಯವರನ್ನು ಹಿಂಸೆಮಾಡಲು ಮಾತ್ರ. ನಿಮ್ಮಂತೆ ಪ್ರತಿಜ್ಞೆ ಮಾಡದ ವ್ಯಾಪಾರಿಗಳು ಈ ನೂಲನ್ನು ಕೊಳ್ಳಬೇಕು; ನೆಯ್ಗೆಯವರು ಅದನ್ನು ನೇಯಬೇಕು; ಅದು ಬೇಡದವರು ಅದನ್ನು ಕೊಂಡುಕೊಳ್ಳಬೇಕು. ಇದನ್ನು ಸಾಧಿಸಲು ನಿಮ್ಮ ಅನಾಂತರ, ಜಮಿನ್ದಾರರ ದಬ್ಬಾಳಿಕೆ. ಫಲಿತಾಂಶ, ಒಳ್ಳೆಯ ಹೆಸರು ನಿಮಗೆ, ತೊಂದರೆ ಅವರಿಗೆ!"

ಒಬ್ಬ ವಿಜ್ಞಾನ ವಿದ್ಯಾರ್ಥಿ, "ಇದರಲ್ಲಿ ನಿಮ್ಮ ತೊಂದರೆಯೇನೆಂದು ಕೇಳಬಹುದೋ?" ಎಂದನು.

"ಹೇಳಬೇಕೋ? ನಿಖಿಲನೇ ಆ ಸ್ವದೇಶಿ ನೂಲನ್ನು ಕೊಳ್ಳುವವನು. ಅದನ್ನು ನೇಯಿಸಲು ನೇಯ್ಗೆಯ ಶಾಲೆಯನ್ನು ಅವನೇ ತೆರೆಯಬೇಕಾಯಿತು. ಅವನ ವ್ಯಾಪಾರದ ಅನುಭವವನ್ನು ಹೇಳಬೇಕೆಂದರೆ, ಮಗ್ಗ ಬಿಟ್ಟು ಹೋಗುವ ವೇಳೆಗೆ ಅವುಗಳ ಬೆಲೆ ಸರಿಗೆಯ ಬಟ್ಟೆಯ ಬೆಲೆಯಾಗುತ್ತೆ. ಆದ್ದರಿಂದ ಅವನ ಕೋಣೆಗಳಿಗೇ ಅವು ಪರದೆಗಳಾಗಬೇಕಾಗುತ್ತೆ. ನಿಮ್ಮ ಪ್ರತಿಜ್ಞೆ ನಿಮಗೆ ಬೇಸರವಾದ ಮೇಲೆ ನೀವೇ ಆ ಬಟ್ಟೆಗಳನ್ನು ನೋಡಿ ನಗುತ್ತೀರಿ. ಅವುಗಳನ್ನು ನೋಡಿ ಸಂತೋಷಪಡಬೇಕಾದರೆ ವಿದೇಶೀಯರೇ ಬರಬೇಕು."

ನನ್ನ ಗುರು ಇಷ್ಟು ಉದ್ರೇಕಗೊಂಡುದನ್ನು ನಾನೆಂದೂ ನೋಡಿರಲಿಲ್ಲ. ನನ್ನ ಮೇಲಿನ ಪ್ರೀತಿಯಿಂದ, ಈ ನೋವು ಬಹಳ ದಿನಗಳಿಂದ ಆತನ ಹೃದಯವನ್ನು ಭಾರಮಾಡಿತ್ತು. ಈದಿನ ಶಾಂತತೆಯನ್ನು ಕಳೆದು ಕೊಂಡಿದ್ದರು.

ವೈದ್ಯಕೀಯ ವಿದ್ಯಾರ್ಥಿ, "ನೀವು ಹಿರಿಯರು. ನಿಮ್ಮೊಂದಿಗೆ ಚರ್ಚಿಸುವುದು ಸರಿಯಲ್ಲ. ವಿದೇಶಿ ಪದಾರ್ಥಗಳನ್ನು ಮಾರುಕಟ್ಟೆಯಿಂದ ಹೊರಗೆ ಹಾಕುವಿರೋ ಇಲ್ಲವೋ ? ಹೇಳಿಬಿಡಿ," ಎಂದನು.

"ಹೊರಗೆ ಹಾಕಲು ಅವು ನನ್ನವಲ್ಲ," ಎಂದೆ.

ಎಂ.ಎ ವಿದ್ಯಾರ್ಥಿ "ನಿಮಗೆ ನಷ್ಟವಾಗುತ್ತೆ," ಎಂದು ನಕ್ಕನು.

ನನ್ನ ಗುರು, "ನಷ್ಟ ಯಾರದೋ ಅವನೇ ನಿರ್ಧರಿಸಬೇಕು," ಎಂದರು.

"ವಂದೇ ಮಾತರಂ," ಎಂದು ಕೂಗುತ್ತ ಅವರೆಲ್ಲಾ ಹೊರಟು ಹೋದರು.

## ಅಧ್ಯಾಯ ೬

# ನಿಖಿಲನ ಕಥೆ

## ೮

ಕೆಲವು ದಿನದ ನಂತರ ನನ್ನ ಗುರು ಪಂಚುವನ್ನು ಕರೆದುಕೊಂಡು ಬಂದರು. ಜಮೀನ್ದಾರ ನೂರು ರೂಪಾಯಿ ದಂಡ ಹೊರಿಸಿ ಹೊರಕ್ಕೋಡಿಸುವ ಹೆದರಿಕೆ ಹಾಕಿದ್ದನಂತೆ.

" ಏನು ತಪ್ಪಿಗಾಗಿ ? "—ನಾನು ಪ್ರಶ್ನಿಸಿದೆ.

" ಪರದೇಶಿ ಬಟ್ಟೆಗಳನ್ನು ಮಾರುತ್ತಿದ್ದನಂತೆ. ಇದ್ದ ಬಟ್ಟೆಗಳನ್ನು ಮಾರಿ ಸಾಲ ತೀರಿಸಿದಮೇಲೆ ಪರದೇಶಿ ಬಟ್ಟೆಗಳನ್ನು ತರುವುದಿಲ್ಲವೆಂದೂ ಅದಕ್ಕೆ ಒಪ್ಪಿಕೊಳ್ಳಬೇಕೆಂದೂ ಪಂಚು ಜಮೀನ್ದಾರನನ್ನು ಬೇಡಿದನು. ಜಮೀನ್ದಾರ ಕೇಳದೆ, ಆಗಲೇ ಆ ಬಟ್ಟೆಗಳನ್ನು ಸುಡಬೇಕೆಂದು ನಿರ್ಬಂಧಿಸಿದನು. ಪಂಚು ರೋಷದಿಂದ, " ನನಗೆ ಸಾಧ್ಯವಿಲ್ಲ. ನೀವು ಹಣವಂತರು. ಕೊಂಡುಕೊಂಡು ಸುಟ್ಟುಬಿಡಿ " ಎಂದನು. ಜಮೀನ್ದಾರ ಹರೀಶಕುಂದು ಕೋಪದಿಂದ,—" ಅವನಿಗೆ ಬುದ್ಧಿ ಕಲಿಸಲು ಜೋಡಿನಿಂದ ಹೊಡೆಯಿರಿ " ಎಂದು ಕೂಗಿದನು. ಪಂಚು ದಂಡವನ್ನೂ ತೆರಬೇಕಾಯಿತು; ಏಟುಗಳನ್ನೂ ತಿನ್ನಬೇಕಾಯಿತು."

" ಬಟ್ಟೆ ಏನಾಯಿತು ? "

" ಎಲ್ಲಾ ಸುಟ್ಟುಬಿಟ್ಟರು."

" ಅಲ್ಲಿ ಬೇರೆ ಯಾರಿದ್ದರು ? "

" ತುಂಬಾ ಜನ—ವಂದೇ ಮಾತರಂ—ಎಂದು ಕೂಗುತ್ತಿದ್ದರು. ಸಂದೀಪನೂ ಇದ್ದ. ಆತ ಸ್ವಲ್ಪ ಬೂದಿ ತೆಗೆದುಕೊಂಡು, ಸೋದರರೇ, ಪರದೇಶಿ ವ್ಯಾಪಾರದ ಅಪರ ಕ್ರಿಯೆಗೆ—ದಹನ ಕ್ರಿಯೆಗೆ—ನಿಮ್ಮ ಹಳ್ಳಿ ಹಚ್ಚಿದ ಮೊದಲ ದಹನಾಗ್ನಿ

ಇದೇ. ಇದು ಪವಿತ್ರಭಸ್ಮ. ಸ್ವದೇಶಿ ಪ್ರತಿಜ್ಞೆಯ ಕುರುಹಾಗಿ ಇದನ್ನು ಮೈಗೆ ಸವರಿಕೊಳ್ಳಿ—ಎಂದನು."

"ಪಂಚು, ನೀನು ಪೋಲೀಸರಿಗೆ ತಿಳಿಸಬೇಕು."

"ಯಾರೂ ಸಾಕ್ಷಿಗಳಾಗುವುದಿಲ್ಲ."

"ಯಾರೂ ಆಗುವುದಿಲ್ಲವೇ ?—ಸಂದೀಪ !"—ಎಂದು ಕೂಗಿದೆ.

ಸಂದೀಪ ಹೊರಗೆ ಬಂದು, "ಏನಾಯಿತು ?" ಎಂದು ಕೇಳಿದನು.

"ಇವನ ಬಟ್ಟೆ ಸುಟ್ಟರೆಂದು ನೀನು ಸಾಕ್ಷ್ಯ ಕೊಡುವುದಿಲ್ಲವೆ ?"

ಸಂದೀಪ ನಕ್ಕು, "ನಾನು ಸಾಕ್ಷ್ಯ ಕೊಡುತ್ತೇನೆ—ಎದುರು ಪಕ್ಷದ ಕಡೆ," ಎಂದನು.

"ಹಾಗೆಂದರೇನು ? ಪಕ್ಷವೇನು ಬಂತು ? ನಿಜ ಹೇಳುವುದಿಲ್ಲವೆ ?"

"ನಡೆದದ್ದು ಮಾತ್ರ ನಿಜವೋ ?"

"ಮತ್ತೆ ಯಾವುದು ?"

"ನಡೆಯ ಬೇಕಾದದ್ದು! ನಾವು ಕಟ್ಟಬೇಕಾದ ಸತ್ಯಕ್ಕೆ ಎಷ್ಟೋ ಅಸತ್ಯಗಳ ಸಹಾಯ ಬೇಕು. ಪ್ರಪಂಚದಲ್ಲಿ ಮುಂದುವರಿದಿರುವವರು ಸತ್ಯವನ್ನು ಸೃಷ್ಟಿಸಿದ್ದಾರೆ—ಕಣ್ಣುಮುಚ್ಚಿ ಅದನ್ನು ಹಿಂಬಾಲಿಸಿಲ್ಲ."

"ಆದ್ದರಿಂದ—?"

"ಆದ್ದರಿಂದ ನಿಮಗೆ ಸುಳ್ಳೆಂದು ತೋರುವ ಸಾಕ್ಷ್ಯ ಕೊಡುತ್ತೇನೆ. ಚಕ್ರಾಧಿಪತ್ಯಗಳನ್ನು ಸ್ಥಾಪಿಸಿದವರೂ, ಸಮಾಜ ಸುಧಾರಕರೂ ಮತಪ್ರಚಾರಕರೂ ಹಾಗೆಯೇ ಮಾಡಿರುವುದು. ಅಧಿಕಾರ ನಡಸುವವರು ಅಸತ್ಯವನ್ನಾಡಲು ಹೆದರುವುದಿಲ್ಲ; ಸತ್ಯದ ಸಂಕೋಲೆ ಅದರ ಅಧಿಕಾರದರ್ಪಕ್ಕೆ ಸಿಕ್ಕುವವರಿಗೆ.

ಮಾತ್ರ ಮೋಸಲು. ನೀನು ಚರಿತ್ರೆ ಓದಿಲ್ಲವೇ? ಮಹದ್ರಾಜ ಕೀಯ ಸಮಸ್ಯೆಗಳು ಕುದಿಯುತ್ತಿರುವ ವಿಶಾಲವಾದ ಬಾಣಲೆ ಗಳಲ್ಲಿ ಅಸತ್ಯಗಳೇ ಮುಖ್ಯ ಉಪಕರಣವೆಂದರಿಯೆಯಾ?

"ರಾಜಕೀಯದ ಅಡಿಗೆಯೇನೋ ದೊಡ್ಡದಾಗಿ ನಡೆಯು ತ್ತಿದೆ. ಆದರೆ—"

"ನನಗೆ ಗೊತ್ತು. ನೀನು ಆ ಪಾಕಸಾಧನೆಯಲ್ಲಿ ಭಾಗ ವಹಿಸುವುದಿಲ್ಲ. ಅಲ್ಲಿ ತಯಾರಾಗುವ ಕಲಸುಮೇಲೋಗರವನ್ನು ಗಂಟಲಲ್ಲಿ ತುರುಕಿಸಿಕೊಳ್ಳುವವರಲ್ಲಿ ನೀನೊಬ್ಬ. ಬಂಗಾಳ ವನ್ನು ಭಾಗಮಾಡಿ, ನಿಮ್ಮ ಅನುಕೂಲಕ್ಕಾಗಿ ಎನ್ನುತ್ತಾರೆ ಅಧಿಕಾರಿಗಳು. ವಿದ್ಯೆಯ ಬಾಗಿಲುಗಳನ್ನು ಮುಚ್ಚಿ ನಿಮ್ಮ ಮಟ್ಟವನ್ನು ಸರಿಪಡಿಸುವುದಕ್ಕೆನ್ನುತ್ತಾರೆ. ನೀವು ಮಾತ್ರ ಮೂಲೆಯಲ್ಲಿ ಮುಲುಗುವ ಒಳ್ಳೆ ಹುಡುಗರಾಗಿರುತ್ತೀರಿ. ಕೆಟ್ಟವ ರಾದ ನಾವು ಮಾತ್ರ ಅಸತ್ಯದ ರಕ್ಷಣೆಯ ಕೋಟೆಯನ್ನೆಬ್ಬಿಸಲು ಸಾಧ್ಯವೇನೋ ನೋಡುತ್ತೇವೆ."

ನನ್ನ ಗುರು, "ಚರ್ಚೆಯಿಂದ ಪ್ರಯೋಜನವಿಲ್ಲ, ನಿಖಿಲ. ಜೀವನದ ಅಂತರಾಳದಲ್ಲಿ ಸತ್ಯವನ್ನು ಅನುಭವಿಸದವರು ಸತ್ಯ ವನ್ನು ಮರೆಯಿಂದ ಬೆಳಕಿಗೆ ತರುವುದೇ ಮನುಷ್ಯನ ಆದರ್ಶ ವೆಂದೂ, ಅದನ್ನು ಮರೆಸುವಂತೆ ಕಸ ತುಂಬಬಾರದೆಂದೂ, ಹೇಗೆ ತಿಳಿಯಬಲ್ಲರು?"

ಸಂದೀಪ ನಕ್ಕನು: "ಸರಿ! ಉಪಾಧ್ಯಾಯನಿಗೆ ತಕ್ಕ ಭಾಷಣ. ಇಂತಹ ವಿಚಾರಗಳನ್ನು ಪುಸ್ತಕದಲ್ಲಿ ಓದಿದ್ದೇನೆ. ಆದರೆ ವಾಸ್ತವ ಪ್ರಪಂಚದಲ್ಲಿ ಮನುಷ್ಯನ ಮುಖ್ಯ ಕೆಲಸ ಕಸ ತುಂಬುವುದೇ. ಈ ವಿದ್ಯೆಯಲ್ಲಿ ಪರಿಣತರಾದವರು ವ್ಯವಹಾರದಲ್ಲಿ ಅಗಾಧವಾದ ಅಸತ್ಯಗಳನ್ನು ಹೇಳುತ್ತಾರೆ; ರಾಜಕೀಯದ ಲೆಕ್ಕದ ಪುಸ್ತಕಗಳಲ್ಲಿ ಸುಳ್ಳು ಲೆಕ್ಕ ಬರೆಯುತ್ತಾರೆ; ಪತ್ರಿಕೆಗಳಿಂದ ಅಸತ್ಯವನ್ನು ಹರಡುತ್ತಾರೆ, ರೋಗ ಹರಡುವ ಕ್ರಿಮಿಗಳಂತಹ

ಪ್ರಚಾರಕರನ್ನು ಅಸತ್ಯ ಹರಡಲು ಹೊರದೇಶಗಳಿಗೆ ಕಳುಹಿಸು ತ್ತಾರೆ. ನಾನು ಇಂತಹ ಮಹದ್ವ್ಯಕ್ತಿಗಳ ನಮ್ರ ಸೇವಕ. ನಾನು ಕಾಂಗ್ರೆಸ್ ಪಕ್ಷ ಸೇರಿದ್ದಾಗ ಶೇಕಡ ಹತ್ತು ಸತ್ಯ ದೊಂದಿಗೆ, ತೊಂಬತ್ತು ಪಾಲು ಅಸತ್ಯ ಬೆರೆಸಲು ಹಿಂಜರಿಯು ತ್ತಿರಲಿಲ್ಲ. ಈಗ ಆ ಪಕ್ಷವನ್ನು ಬಿಟ್ಟರೂ ಮನುಷ್ಯನ ಧ್ಯೇಯ ಜಯವೇ ಹೊರತು ಸತ್ಯವಲ್ಲವೆಂಬ ಮುಖ್ಯ ವಿಚಾರವನ್ನು ಮರೆತಿಲ್ಲ."

"ವಾಸ್ತವವಾದ ಜಯ" ಎಂದು ನನ್ನ ಗುರು ತಿದ್ದಿದರು.

"ಇರಬಹುದು. ನೆಲವನ್ನು ಅಗೆದು ಹುಡಿಮಾಡಿ, ಅಸ ತ್ಯದ ಹೊಲವನ್ನು ಉತ್ತರೆ ನಿಜವಾದ ವಿಜಯ ಫಲಿಸುವುದು. ಸತ್ಯ, ಹುಳುಗಳಿಗೆ ಆಹಾರವಾದ ಕಳೆಯ ಗಿಡಗಳಂತೆ ತಾನೇ ಬೆಳೆಯುತ್ತದೆ."

–ಎಂದು, ಸಂದೀಪ ಕೊಠಡಿಯಿಂದಾಚೆಗೆ ಹೋದನು.

ನನ್ನ ಗುರು ನನ್ನ ಕಡೆ ನೋಡಿ ನಕ್ಕರು. "ಸಂದೀಪ ನಾಸ್ತಿಕನಲ್ಲ. ನಿಖಿಲ! ಆತನ ಮತ, ಬೆಳಕಿಲ್ಲದ ಚಂದ್ರನ ಹಿಮ್ಮೊಗದಂತೆ ಸತ್ಯದ ಹಿಂಭಾಗ."

ನಾನು—"ಅದರಿಂದಲೇ ಅವನ ವಾದಗಳಿಗೆ ಒಪ್ಪದಿದ್ದರೂ ಅವನನ್ನು ಕಂಡರೆ ನನಗೆ ವಿಶ್ವಾಸ. ಈಗಲೂ ಅವನು ನನ್ನನ್ನು ನೋಯಿಸಿದ್ದರೂ, ಮುಂದೆಯೂ ನೋಯಿಸುವನಾದರೂ ಅವ ನನ್ನು ತಿರಸ್ಕರಿಸಲಾರೆ."

ಗುರು—"ನನಗೂ ಅರ್ಥವಾಗುತ್ತಿದೆ. ಅವನನ್ನು ಹೇಗೆ ಸಹಿಸಿಕೊಂಡಿದ್ದೀಯೆಂದು ವಿಸ್ಮಯಪಡುತ್ತಿದ್ದೆ. ನೀನು ಕೈಲಾಗ ದವನೆಂದೂ ಒಂದೊಂದು ಸಲ ಎನ್ನಿಸಿತು. ಈಗ ನಿಮ್ಮ ಪ್ರಾಸ ಬೇರೆಯಾದರೂ ತಾಳ ಒಂದೇ ಎಂದು ತಿಳಿಯಿತು."

ನಾನು—"ನನ್ನ ವಿಚಾರದಲ್ಲಿ ವಿಧಿ ಸರಳರಗಳೆಯಲ್ಲಿ "ಗತ ಸ್ವರ್ಗ"ವನ್ನು ಬರೆಯಲು ಮನಸ್ಸು ಮಾಡಿರುವುದರಿಂದ

ಪ್ರಾಸಕಟ್ಟುವ ಸ್ನೇಹಿತನ ಅಗತ್ಯವಿಲ್ಲ."

ಗುರು—" ಪಂಚುವಿನ ಗತಿಯೇನು ? "

ನಾನು—" ಹರೀಶ ಆತನನ್ನು ಓಡಿಸಬೇಕೆಂದಿದ್ದಾನೆ ಎಂದಿರಿ. ಅವನ ಭೂಮಿಯನ್ನು ನಾನು ಕೊಂಡುಕೊಂಡರೆ ಅವನು ನನ್ನ ಒಕ್ಕಲಾಗುತ್ತಾನೆ."

ಗುರು—"ಅವನ ದಂಡ ? "

ನಾನು—" ಅವನು ನನ್ನ ಒಕ್ಕಲಾದಮೇಲೆ ಆ ಜಮಿನ್ದಾರ ದಂಡವನ್ನು ಹೇಗೆ ವಸೂಲ್ಮಾಡುತ್ತಾನೆ ? "

ಗುರು—" ಸುಟ್ಟ ಅವನ ಬಟ್ಟೆಯ ಗಂಟು ? "

ನಾನು—" ಬೇರೆ ತರಿಸಿಕೊಡುತ್ತೇನೆ. ನನ್ನ ಒಕ್ಕಲು ವ್ಯಾಪಾರಕ್ಕೆ ಅಡ್ಡಿ ಬರುವವನಿಗೆ ಬಹಳ ಧೈರ್ಯವಿರಬೇಕು."

ಪಂಚು—ಅಳುಮೋರೆಯಿಂದ, " ನೀವು ಧನಿಕರು, ಕಾದಾಡುತ್ತೀರಿ. ಪೋಲೀಸಿನವರು ಹದ್ದುಗಳಂತೆ ಎರಗುತ್ತಾರೆ. ಜನರೆಲ್ಲಾ ತಮಾಷೆ ನೋಡುತ್ತಿರುತ್ತಾರೆ. ಸಾವಿಗೆ ಮಾತ್ರ ನಾನೇ ಬಲಿಯಾಗಬೇಕಾಗುತ್ತದೆ."

ನಾನು—" ನಿನಗೇನು ತೊಂದರೆಯಾಗುತ್ತೆ ? "

" ನನ್ನ ಮನೆ ಮಕ್ಕಳನ್ನೆಲ್ಲಾ ಸುಟ್ಟುಬಿಡುತ್ತಾರೆ. "

ನನ್ನ ಗುರು—" ನಿನ್ನ ಮಕ್ಕಳನ್ನು ನಾನು ನೋಡಿಕೊಳ್ಳುತ್ತೇನೆ. ನಿನಗೆ ಬೇಕಾದ ವ್ಯಾಪಾರ ಮಾಡು ಯಾರೂ ನಿನಗೆ ತೊಂದರೆ ಕೊಡುವುದಿಲ್ಲ " ಎಂದರು.

ಆದಿನವೇ ಪಂಚುವಿನ ಭೂಮಿಯನ್ನುಕೊಂಡೆ. ತೊಂದರೆಗೆ ಆರಂಭವಾಯಿತು.

ಪಂಚುವಿನ ಆಸ್ತಿ ಅವನ ತಾತನಿಂದ ಬಂದುದು. ಇದು ಎಲ್ಲರಿಗೂ ತಿಳಿದಿದ್ದ ವಿಚಾರ. ಆದರೆ ಈಗ ಒಬ್ಬ ಚಿಕ್ಕಮ್ಮ ಆಸ್ತಿಗೆ ಹಕ್ಕುದಾರಳಾಗಿ ಹುಟ್ಟಿಕೊಂಡು ತನ್ನ ಸಾಮಾನು ಸಹಿತ, ವಿಧವೆಯಾದ ಸೊಸೆಯೊಡನೆ ಪಂಚುವಿನ ಮನೆಯಲ್ಲಿ ನೆಲಸಿದಳು.

ಪಂಚುವಿಗೆ ಗಾಬರಿಯಾಯಿತು. "ನಮ್ಮ ಚಿಕ್ಕಮ್ಮ ಸತ್ತು ಯಾವುದೋ ಕಾಲವಾಯಿತು," ಎಂದು ಪ್ರತಿಭಟಿಸಿದನು.

ಅವನ ಚಿಕ್ಕಪ್ಪನ ಮೊದಲ ಹೆಂಡತಿ ಸತ್ತಳೆಂದೂ ಇವಳು ಎರಡನೆಯ ಹೆಂಡತಿಯೆಂದೂ ಹೇಳಿದರು.

ಪಂಚು, "ಚಿಕ್ಕಮ್ಮನಿಗೆ ಮೊದಲೇ ಚಿಕ್ಕಪ್ಪ ಸತ್ತ. ಮದುವೆಯಾಗಲು ಹೊತ್ತೆಲ್ಲಿತ್ತು ?" ಎಂದನು.

ಅದು ಸುಳ್ಳೆಂದರು. ಇವಳನ್ನು ಮೊದಲ ಹೆಂಡತಿ ಬದುಕಿದ್ದಾಗಲೇ ಮದುವೆ ಮಾಡಿಕೊಂಡಿದ್ದನೆಂದರು. ಸವತಿಯೊಡನೆ ಇರಲು ಇಷ್ಟವಿಲ್ಲದೆ ಗಂಡ ಸಾಯುವವರೆಗೂ ತಂದೆಯ ಮನೆಯಲ್ಲೇ ಇದ್ದಳೆಂದೂ, ಅನಂತರ ಬೃಂದಾವನಕ್ಕೆ ಸನ್ಯಾಸಿನಿಯಾಗಿ ಹೋದಳೆಂದೂ, ಈಗ ಇಲ್ಲಿಗೆ ಬಂದಳೆಂದೂ ತಿಳಿಸಿದರು. ಈ ವಿಚಾರಗಳೆಲ್ಲಾ ಹರೀಶನ ಅಧಿಕಾರಿಗಳಿಗೆ, ಒಕ್ಕಲುಗಳಿಗೆ ಚೆನ್ನಾಗಿ ತಿಳಿದಿದ್ದುವು. ಜಮೀನ್ದಾರ ಕರೆದರೆ ಮದುವೆಯಲ್ಲಿ ಊಟಮಾಡಿದವರು ಕೂಡ ಸಾಕ್ಷಿಗೆ ಸಿದ್ಧರಾಗುತ್ತಿದ್ದರು.

## ೬

ಒಂದು ದಿನ ನಾನು ಬಹಳ ಕೆಲಸದಲ್ಲಿದ್ದಾಗ ವಿಮಲೆ ಕರೆ ಕಳುಹಿಸಿದಳು. ನನಗೆ ಗಾಬರಿಯಾಯಿತು.

"ಯಾರು ಕರೆದವರು ?" ಎಂದು ಪ್ರಶ್ನಿಸಿದೆ ಆಳನ್ನು.

"ರಾಣಿಯಮ್ಮಾವರು."

"ದೊಡ್ಡ ರಾಣಿಯವರೆ ?"

"ಇಲ್ಲ ಸ್ವಾಮಿ, ಚಿಕ್ಕ ರಾಣಿಯವರು."

ಚಿಕ್ಕರಾಣಿ ! ಆಕೆ ನನಗೆ ಕರೆಕಳುಹಿಸಿ ಶತಮಾನ ಕಾಲವಾದಂತಿತ್ತು. ಕೆಲಸ ನಿಲ್ಲಿಸಿ ಒಳಗೆ ಹೋದೆ. ಕೋಣೆಗೆ ಹೋದಾಗ ವಿಮಲೆ ಅಲಂಕಾರ ಮಾಡಿಕೊಂಡಂತಿತ್ತು. ಈಚೆಗೆ

ಅಲಕ್ಷ್ಯದಿಂದ ಬೇಸರಗೊಂಡಂತಾಗಿದ್ದ ಕೋಣೆ ಮೊದಲಿನ ಶಿಸ್ತನ್ನು ಪಡೆದಿತ್ತು. ವಿಮಲೆಯನ್ನು ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿ ನಿಂತೆ.

ಮುಖ ಕೆಂಪಾಗಿ, ಒಂದು ಕ್ಷಣ ಎಡಗೈ ಬಳೆಗಳನ್ನು ಬಲಗೈಯಿಂದ ಆಡಿಸುತ್ತಾ ಇದ್ದಳು. ಥಟ್ಟನೆ ಮೌನ ಮುರಿದು "ಇಲ್ಲಿ ನೋಡಿ! ಬಂಗಾಳದಲ್ಲೆಲ್ಲ ನಮ್ಮ ಮಾರುಕಟ್ಟೆಯಲ್ಲಿ ಮಾತ್ರ ವಿದೇಶಿ ಬಟ್ಟೆಗಳ ವ್ಯಾಪಾರಕ್ಕೆ ಅನುಮತಿ ಕೊಡ ಬಹುದೋ?" ಎಂದಳು.

"ಏನು ಮಾಡಬೇಕು?"

"ಹೊರಗೆ ಹಾಕಿಸಿ."

"ಆದರೆ ಆ ಪದಾರ್ಥಗಳು ನನ್ನವಲ್ಲ."

"ಮಾರುಕಟ್ಟೆ ನಿಮ್ಮದಲ್ಲವೋ?"

"ಅದು ವ್ಯಾಪಾರಿಗಳಿಗೇ ಹೆಚ್ಚು ಸೇರಿದ್ದು."

"ಸ್ವದೇಶಿ ಪದಾರ್ಥಗಳನ್ನು ಮಾರಲಿ."

"ನನಗೂ ಅದೇ ಇಷ್ಟ. ಆದರೆ, ಅವರು ಮಾರದಿದ್ದರೆ?"

"ಅವರಿಗೆಷ್ಟು ಧೈರ್ಯ! ನೀವಲ್ಲವೆ...."

"ಈಗ ನನಗೆ ಬಹಳ ಕೆಲಸವಿದೆ. ಚರ್ಚೆಗೆ ಅವಕಾಶ ವಿಲ್ಲ. ಆದರೆ ದಬ್ಬಾಳಿಕೆ ನನ್ನಿಂದಾಗದು."

"ಸ್ವಂತ ಲಾಭಕ್ಕಾದರೆ ಅದು ದಬ್ಬಾಳಿಕೆ. ಆದರೆ ದೇಶ ಕ್ಕಾಗಿ...."

"ದೇಶಕ್ಕಾಗಿ ದಬ್ಬಾಳಿಕೆ ಮಾಡಿದರೆ ದೇಶದ ಮೇಲೆ ಮಾಡಿದಂತೆ. ಆದರೆ ನಿನಗೆ ಅದೆಲ್ಲಾ ಅರ್ಥವಾಗುವುದಿಲ್ಲ." ಇಷ್ಟು ಹೇಳಿ ಹೊರಕ್ಕೆ ಬಂದೆ.

ಇದ್ದಕ್ಕಿದ್ದಂತೆ ಜಗತ್ತು ಹೊಸದಾಗಿ ರಂಜಿಸಿತು. ಭೂಮಿ ಆಕಾಶದಲ್ಲಿ ಹಗಲು ರಾತ್ರಿಗಳೆಂಬ ಮಣಿಗಳನ್ನೆಣಿಸುತ್ತಾ ಹೊಸ ಶಕ್ತಿಯಿಂದ ತಿರುಗಲಾರಂಭಿಸಿ, ಜೀವ ಪೋಷಣೆಯನ್ನು ಭಾರ

ವೆಂದು ಲೆಕ್ಕಿಸದೆ, ಮುನ್ನುಗ್ಗುತ್ತಿರುವಂತೆ ತೋರಿತು. ಅನಂತ ವಾದ ಕೆಲಸ; ಅನಂತ ಶಕ್ತಿ! ಅದನ್ನು ಯಾರು ತಡೆಯಬಲ್ಲರು. ಜೀವದೊಳಗಿಂದ ಚಿಲುಮೆಯಂತೆ ಆನಂದ ಆಗಸಕ್ಕೆ ಚಿಮ್ಮಿತು.

ಈ ಆನಂದಕ್ಕೆ ಕಾರಣವೇನೆಂದು ಪ್ರಶ್ನಿಸಿಕೊಂಡೆ. ಮೊದಲು ಉತ್ತರ ಸಿಕ್ಕಲಿಲ್ಲ. ಹಗಲು ರಾತ್ರಿ ನಾನು ಸಿಕ್ಕಿ ಒಡ್ದಾಡುತ್ತಿದ್ದ ಕಟ್ಟುಗಳಿಂದ ಬಿಡುಗಡೆ ಹೊಂದಿದೆನೆಂದು ಅನಂತರ ತಿಳಿಯಿತು. ನನ್ನ ಮನಸ್ಸು ತಿಳಿಯಾಯಿತು. ವಿಮಲೆಯ ವಿಚಾರವೆಲ್ಲಾ ಚಿತ್ರದಂತೆ ಸ್ಫುಟವಾಯಿತು. ಆ ಅನುಮತಿಯನ್ನು ನನ್ನಿಂದ ಪಡೆಯಲು ವಿಮಲೆ ಅಲಂಕರಿಸಿ ಕೊಂಡಿದ್ದಳು. ಆದುವರೆಗೂ ವಿಮಲೆಯ ಅಲಂಕಾರ ವಿಮಲೆ ಯಿಂದ ಬೇರೆಯಾದುದೆಂದು ನಾನು ತಿಳಿದಿರಲಿಲ್ಲ. ಈದಿನ ಅವಳು ಕೂದಲನ್ನು ಎತ್ತಿಕಟ್ಟಿದ ರೀತಿ ಅದನ್ನು ಬರಿಯ ಅಲಂಕಾರವಾಗಿ ಮಾಡಿತು. ಅವಳ ವ್ಯಕ್ತಿತ್ವದ ಮೋಹದಿಂದ ಅಮೂಲ್ಯವಾಗಿದ್ದ ವಸ್ತು, ಇಂದು ಅಗ್ಗದ ಸರಕಾಗಿತ್ತು.

ಆ ಮುರಿದ ಗೂಡಿನಂತಿದ್ದ ಕೋಣೆಯಿಂದ ಸೂರ್ಯನ ಸ್ವರ್ಣಪ್ರಭೆಗೆ ಬಂದೆ. ಮನೆಯ ಮುಂದಿದ್ದ ಕೆಂಪುಹೂ ಗಿಡ ಗಳ ಸಾಲು ಆಗಸವನ್ನು ಕೆಂಪಗೆ ಮಾಡಿತ್ತು. ಹಕ್ಕಿಗಳು ಚಿಲಿ ಪಿಲಿಗುಟ್ಟುತ್ತಿದ್ದುವು. ದೂರದಲ್ಲಿ ಎತ್ತಿನಗಾಡಿ ನಿಂತಿತ್ತು. ಒಂದು ಬಿಚ್ಚಿದ ಎತ್ತು ಮೇಯುತ್ತಿತ್ತು. ಇನ್ನೊಂದು ಹುಲ್ಲಿನ ಮೇಲೆ ಸುಖವಾಗಿ ಮಲಗಿರಲು ಕಾಗೆ ಅದರ ಮೇಲಿನ ಹುಳು ಗಳನ್ನು ಕುಕ್ಕುತ್ತಿತ್ತು.

ನಾನು ಭೂದೇವಿಯ ನಿತ್ಯ ಜೀವನದ ಸರಳತೆಗೆ ಹತ್ತಿರ ವಾದಂತೆ ತೋರಿತು. ಹೂವಿನ ಪರಿಮಳದಿಂದ ಆಕೆಯ ಬಿಸಿಯು ಸಿರು ನನ್ನನ್ನು ತಾಗಿದಂತಾಯಿತು. ಜಗತ್ತಿನಿಂದ ಮಧುರ ಸ್ತೋತ್ರ ಹೊರಟಂತಾಗಿ, ನಾನೂ ಬಿಡುಗಡೆ ಪಡೆದಂತಾದೆ.

ಧ್ಯೇಯಗಳು ತೋರುವ ಬಿಡುಗಡೆಯನ್ನು ಹುಡುಕು

ವುದೇ ಪುರುಷರ ಕರ್ತವ್ಯ. ದಾರಿತೋರುವ ಧ್ವಜವನ್ನು ನೀಡು ವಾಕೆಯೇ ನಮಗೆ ತಕ್ಕ ಸ್ತ್ರೀ. ಮನೆಯಲ್ಲಿ ಮಾಯಾಪಾಶದಿಂದ ಬಿಗಿಯುವ ಸ್ತ್ರೀಯ ಮುಸುಕನ್ನು ಸರಿಸಿ ಅವಳ ನಿಜಸ್ಥಿತಿ ಯನ್ನು ತಿಳಿಯಬೇಕು. ನಮ್ಮ ಆಸೆ ಅಭಿಲಾಷೆಗಳನ್ನು ಅವಳಿಗೆ ಹೊದಿಸದೆ, ಆದರ್ಶಸಾಧನೆಗೆ ಅವಳು ಅಡ್ಡಿ ಬರದಂತೆ ನೋಡಿ ಕೊಳ್ಳಬೇಕು.

ಈದಿನ ಗೆಲುವಿನ ನಂಬಿಕೆಯಿದೆ. ಸರಳತೆಯ ಬಾಗಿಲನ್ನು ಮುಟ್ಟಿದ್ದೇನೆ. ವಸ್ತುಗಳ ನಿಜಸ್ಥಿತಿಯನ್ನರಿತಿದ್ದೇನೆ. ನಾನು ಸ್ವತಂತ್ರನಾಗಿದ್ದೇನೆ. ಬೇರೆಯವರಿಗೆ ಸ್ವಾತಂತ್ರ್ಯ ನೀಡುತ್ತೇನೆ. ಕೆಲಸದಲ್ಲಿ ಕೈವಲ್ಯ ಕಾಣುತ್ತೇನೆ.

ಒಂದೊಂದು ಬಾರಿ ಹೃದಯ ಮರುಗಬಹುದು; ಆದರೆ ಈಗ, ನೋವಿನ ಸತ್ಯವನ್ನರಿತಿರುವಾಗ ಅದನ್ನು ಅಲಕ್ಷಿಸುತ್ತೇನೆ. ಅದು ನನ್ನೊಬ್ಬನ ಚಿಂತೆಯಾಗಿರುವಾಗ ಅದಕ್ಕೆ ಬೆಲೆಯೇನು ? ಜಗತ್ತಿನ ನೋವನ್ನು ತಲೆಯಲ್ಲಿ ಧರಿಸುತ್ತೇನೆ.

ಸತ್ಯವೇ, ಕಾಪಾಡು ! ಮಾಯೆಯ ಕೃತಕ ಸ್ವರ್ಗಕ್ಕಾಗಿ ನಾನು ಬಯಸದಂತೆ ಮಾಡು. ಒಬ್ಬಂಟಿಗನಾದರೂ, ನಿನ್ನ ಹಾದಿಯಲ್ಲಿ ನಡೆಯುವಂತೆ ಆಶೀರ್ವದಿಸು. ಸತ್ಯದ ಭೇರಿ ನನ್ನನ್ನು ವಿಜಯಕ್ಕೊಯ್ಯಲಿ.

## ಸಂದೀಪನ ಕಥೆ

### ೭

ವಿಮಲೆ ನನಗೆ ಹೇಳಿ ಕಳುಹಿಸಿದಳು; ಸ್ವಲ್ಪಹೊತ್ತು ಆಕೆಗೆ ಮಾತು ಹೊರಡಲಿಲ್ಲ. ಕಣ್ಣುತುಂಬಿ ಬರುತ್ತಿತ್ತು. ನಿಖಿಲ ಆಕೆಯ ಮಾತಿಗೆ ಒಪ್ಪಲಿಲ್ಲವೆಂದು ತಿಳಿದೆ. ತನ್ನ ಮಾತು ಖಂಡಿತವಾಗಿ ನಡೆಯುವುದೆಂದು ಆಕೆ ಹೆಮ್ಮೆಯಿಂದಿದ್ದರೂ

ನನಗೆ ನಂಬಿಕೆಯಿರಲಿಲ್ಲ. ಸ್ತ್ರೀ ಪುರುಷನ ದೌರ್ಬಲ್ಯವನ್ನು ಬಲ್ಲಳು; ಆದರೆ ಆತನ ಶಕ್ತಿಯ ಮೂಲವನ್ನರಿಯಳು. ಸ್ತ್ರೀ ಪುರುಷರ ಸ್ವಭಾವ ಒಬ್ಬರೊಬ್ಬರಿಗೆ ಅಷ್ಟುಗಹನವಾಗಿಲ್ಲದಿದ್ದರೆ ವಿಧಾತ ಬೇರೆಬೇರೆಯಾಗಿ ಸೃಷ್ಟಿಸಿ ವೃಥಾ ಆಯಾಸಪಡುತ್ತಿದ್ದನೆ ?

ಅಯ್ಯೋ ಹೆಮ್ಮೆಯೇ! ಕೆಲಸ ನಡೆಯದಿದ್ದುದಕ್ಕಿಂತ, ತಾನು ಎಷ್ಟೋ ಕಷ್ಟದಿಂದ ಕೇಳಿದ ಬೇಡಿಕೆ ನಿರಾಕರಿಸಲ್ಪಟ್ಟುದು ಆಕೆಗೆ ಹೆಚ್ಚು ನೋವುಂಟುಮಾಡಿತ್ತು. ಸ್ತ್ರೀಯ ಅಪಂಭಾವದಲ್ಲಿ ಎಷ್ಟು ಬಣ್ಣ, ಚಲನೆ, ಸೂಚನೆ, ವಂಚನೆಗಳು ಮಿಳಿತವಾಗಿರುತ್ತವೆ! ಆಕೆ ಪುರುಷನಿಗಿಂತ ವೈಯಕ್ತಿಕವಾಗಿರುವುದೇ ಆಕೆಯ ಸೌಂದರ್ಯದ ಗುಟ್ಟು. ಪುರುಷನನ್ನು ವಿಧಾತ ಶಾಲೆಯ ಉಪಾಧ್ಯಾಯನಂತೆ, ನಿಯಮ ತತ್ವಗಳಿಗನುಸಾರವಾಗಿ ಸೃಷ್ಟಿಸಿದನು. ಸ್ತ್ರೀಯನ್ನು ಸೃಷ್ಟಿಸುವಾಗ ಉಪಾಧ್ಯಾಯ ಪ್ರವೃತ್ತಿಯನ್ನು ಮರೆತು ಕಲೆಗಾರನಾಗಿ ಬಣ್ಣ ಕುಂಚಗಳನ್ನು ಹಿಡಿದನು.

ವಿಮಲೆ ಹೆಮ್ಮೆಮುರಿದು, ಗುಡುಗು ಸಿಡಿಲುಗಳಿಂದ ಭಾರವಾದ ಕಾರ್ಮೋಡದಂತೆ ಕಣ್ಣೀರು ಸುರಿಸುತ್ತಾ ನಿಂತಿದ್ದ ಸೌಂದರ್ಯವನ್ನು ನೋಡಿ, ತಡೆಯಲಾರದೆ ಹತ್ತಿರ ಹೋಗಿ ಕೈಹಿಡಿದೆ. ಅದು ಕಂಪಿಸುತ್ತಿದ್ದರೂ ಆಕೆ ಹಿಂದಕ್ಕೆಳೆದುಕೊಳ್ಳಲಿಲ್ಲ. "ವಿಮಲೆ, ನಾವಿಬ್ಬರೂ ಸಹೋದ್ಯೋಗಿಗಳು; ನಮ್ಮ ಧ್ಯೇಯ ಒಂದೇ. ಕುಳಿತು ಮಾತನಾಡೋಣ," ಎಂದೆ.

ಆಕೆ ಪೀಠಕ್ಕೆ ನನ್ನನ್ನು ಹಿಂಬಾಲಿಸಿದಳು. ಆದರೆ ಆಶ್ಚರ್ಯ! ಆ ಸಮಯದಲ್ಲಿ ಪದ್ಮಾನದಿಯ ದುರ್ದಮ್ಯ ಪ್ರವಾಹ ಸಣ್ಣ ಅಡಚಣೆಯಿಂದ ತಡೆದು ನಿಲ್ಲುವಂತೆ ನನ್ನ ಸಡಿಲಿದ ಮನಸ್ಸು ತಡೆಯನ್ನರಿತಿತು. ನಾನು ವಿಮಲೆಯ ಕೈಹಿಡಿದಾಗ ನರನರಗಳಲ್ಲೂ ಸಂಗೀತ ಮೊಳಗಿತು. ಆದರೆ ಮೊದಲ ನಡೆಯಲ್ಲೇ ಸ್ವರ ಮೈತ್ರಿ ತಪ್ಪಿತು.

ಅಡ್ಡಿ ಬಂದುದೇನು? ಇಂತಹುದೇ ಎಂದು ಹೇಳಲು ಸಾಧ್ಯವಿಲ್ಲ; ಅನೇಕ ಕಾರಣಗಳ ಸಿಕ್ಕು ಅಸ್ಪಷ್ಟವಾಗಿ ಅಡ್ಡಿ ಮಾಡಿತು. ನನಗೆ ನನ್ನ ಸ್ವಭಾವದ ಅರಿವೇ ಇಲ್ಲ. ಅದ ರಿಂದಲೇ ನನಗೆ ನನ್ನ ಆಕರ್ಷಣೆ. ನನ್ನ ಸ್ಥಿತಿ ನನಗೆ ಸಂಪೂರ್ಣ ವಾಗಿ ತಿಳಿದರೆ ಎಲ್ಲವನ್ನೂ ತ್ಯಜಿಸಿ, ಬ್ರಹ್ಮಾನಂದ ಪಡೆಯು ವೆನು.

ಕುಳಿತುಕೊಂಡಾಗ ವಿಮಲೆಯ ಮುಖ ಬಿಳಿಚಿಕೊಂಡು ಹೋಗಿತ್ತು. ಎಂತಹ ಸಂದಿಗ್ಧ ಸಮಯ. ಯಾವುದೋ ಬೆಂಕಿ ತನ್ನನ್ನು ನಾಶಮಾಡದೆ, ಸರಿದು ಹೋಗಿತ್ತೆಂದು ಅವಳೂ ತಿಳಿದಿರಬೇಕು. ಉಲ್ಕಾಪಾತ ಹಾದುಹೋಗಿತ್ತು; ಅದರ ಬಾಲದ ಜ್ವಾಲೆಯಿಂದಲೇ ಆಕೆ ಸೊರಗಿ ಹೋಗಿದ್ದಳು. ಆಕೆಗೆ ಧೈರ್ಯ ಹೇಳಲು—

"ತೊಂದರೆಗಳಿಗೆ ಹೆದರದೆ ಹೊಡೆದಾಡಬೇಕಲ್ಲವೆ, ರಾಣಿ?" ಎಂದೆ.

ವಿಮಲೆ ಸಣ್ಣ ಧ್ವನಿಯಲ್ಲಿ, "ಹೌದು" ಎಂದಳು.

"ಕಾರ್ಯಕ್ರಮವನ್ನು ನಿರ್ಧರಿಸೋಣ," ಎಂದು ಒಂದು ಕಾಗದ ಸೀಸದ ಕಡ್ಡಿಯನ್ನು ತೆಗೆದೆ. ಕಲ್ಕತ್ತೆಯಲ್ಲಿ ನಮ್ಮ ಪಂಗಡವನ್ನು ಸೇರಿದವರ ಹೆಸರುಗಳನ್ನೆಲ್ಲಾ ಬರೆದು, ಅವರು ಮಾಡಬೇಕಾದ ಕೆಲಸವನ್ನು ಗುರುತುಮಾಡತೊಡಗಿದೆ. ವಿಮಲೆ ಬೇಸರದಿಂದ "ಈಗ ಬೇಡ. ಸಂಜೆ ಬರುತ್ತೇನೆ." ಎಂದು ಎದ್ದುಹೋದಳು. ಆಕೆಯ ಮನಸ್ಸಿನ ಸ್ಥಿತಿಯಲ್ಲಿ ಏನು ಮಾಡಲೂ ಸಾಧ್ಯವಿರಲಿಲ್ಲ. ಒಂಟಿಯಾಗಿ ಮಲಗಿ ಅಳಲು ಹೋಗಿರಬಹುದು.

ಆಕೆ ಹೊರಟು ಹೋದಮೇಲೆ, ಸೂರ್ಯಾಸ್ತವಾಗುವಾಗ ಮೋಡಗಳು ವರ್ಣರಂಜಿತವಾಗುವಂತೆ ನನ್ನ ಮನಸ್ಸಿನ ಉದ್ವೇಗ ಹೆಚ್ಚಿತು. ಸುಸಂಧಿಯನ್ನು ಕಳೆದುಕೊಂಡೆನೆಂದು ಪಶ್ಚಾತ್ತಾಪ

ವಾಯಿತು. ನಾನು ಎಂತಹ ಹೇಡಿ! ಅದನ್ನು ನೋಡಿಯೇ ಆಕೆ ಬೇಸರದಿಂದ ಹೊರಟು ಹೋಗಿರಬೇಕು. ತಪ್ಪೇನು?

ಈ ಆಲೋಚನೆಗಳಲ್ಲಿ ಮಗ್ನನಾಗಿದ್ದಾಗ ಒಬ್ಬ ಆಳು ಬಂದು, ಅಮೂಲ್ಯ ಬಂದನೆಂದು ಹೇಳಿದನು. ಕಳುಹಿಸಿಬಿಡ ಬೇಕೆನ್ನುವಷ್ಟರಲ್ಲಿ ಒಳಕ್ಕೆ ಬಂದು ಬಿಟ್ಟನು. ಬಟ್ಟೆ ಸಕ್ಕರೆ ಉಪ್ಪುಗಳ ವಿಚಾರದಲ್ಲಿ ಅನೇಕ ಕಡೆಗಳಲ್ಲಿ ನಡೆಯುತ್ತಿದ್ದ ಹೋರಾಟಗಳನ್ನು ಚರ್ಚಿಸಿದೆವು; ವಾತಾವರಣ ತಿಳಿಯಾಯಿತು. ನಿದ್ರೆಯಿಂದ ಎಚ್ಚತ್ತಂತಾಗಿ, ಹೋರಾಟಕ್ಕೆ ಸಿದ್ಧನಾಗಿ ತಟ್ಟನೆ ಎದ್ದೆ. "ವಂದೇ ಮಾತರಂ."

ವರ್ತಮಾನಗಳು ಅನೇಕ ವಿಧವಾಗಿದ್ದುವು. ಹರೀಶ ಕುಂದುವಿನ ಒಕ್ಕಲುಗಳಾದ ವ್ಯಾಪಾರಿಗಳಲ್ಲನೇಕರು ನಮ್ಮ ಕಡೆ ಸೇರಿದ್ದರು. ನಿಖಿಲನ ಹುದ್ದೇದಾರರೂ ಅನೇಕರು ಗುಟ್ಟಾಗಿ ನಮಗೆ ಸಹಾಯಮಾಡುತ್ತಿದ್ದರು. ತಮ್ಮಲ್ಲಿದ್ದ ಬಟ್ಟೆಮಾರಲು ಅವಕಾಶಕೊಟ್ಟರೆ ತಪ್ಪುಕಾಣಿಕೆ ಕೊಡುವುದಾಗಿ ಮಾರವಾಡಿ ವರ್ತಕರು ಮಾತುಕೊಟ್ಟಿದ್ದರು. ಕೆಲವು ಮುಸಲ್ಮಾನ ವರ್ತಕರು ಮಾತ್ರ ಬಗ್ಗಿರಲಿಲ್ಲ.

ಅವರಲ್ಲೊಬ್ಬನು ಜರ್ಮನಿ ಶಾಲು ಕೆಲವನ್ನು ಮನೆಗೆ ತೆಗೆದುಕೊಂಡು ಹೋಗುತ್ತಿದ್ದನು. ನಮ್ಮ ಹುಡಗನೊಬ್ಬನು ಅವುಗಳನ್ನು ಹಿಡಿದು ಸುಡಲು ತೊಂದರೆಗಾರಂಭವಾಯಿತು: ಸ್ವದೇಶಿ ಶಾಲುಗಳನ್ನು ಬದಲಾಗಿ ಕೊಡುವುದಾಗಿ ಹೇಳಿದೆವು. ಆದರೆ ಅಗ್ಗದ ಶಾಲುಗಳೆಲ್ಲಿ ಸಿಕ್ಕುವುವು? ಕಾಶ್ಮೀರ ಶಾಲು ಗಳನ್ನು ಕೊಡಲಾದೀತೆ? ಅವನು ದೂರು ಹೇಳಲು, ನಿಖಿಲ ನ್ಯಾಯಸ್ಥಾನಕ್ಕೆ ಹೋಗುವಂತೆ ಸಲಹೆ ಮಾಡಿದನು. ಆದರೆ ನಿಖಿಲನ ಜನರೂ ನಮ್ಮ ಕಡೆ ಸೇರಿದ್ದುದರಿಂದ ಅದನ್ನು ಅಲ್ಲಿಗೇ ತಡೆದರು.

ಪರದೇಶಿ ಬಟ್ಟೆಗಳಿಗೆ ಬದಲಾಗಿ ಸ್ವದೇಶಿ ಬಟ್ಟೆಗಳನ್ನು

ಕೊಡುತ್ತ, ಜತೆಗೆ ಕೋರ್ಟಿನ ವ್ಯವಹಾರಗಳಲ್ಲೂ ತೊಡಗಬೇಕಾದರೆ ಹಣವೆಲ್ಲಿಂದ ಬರಬೇಕು? ವಿದೇಶಿ ಪದಾರ್ಥಗಳನ್ನು ಸುಟ್ಟಷ್ಟೂ ಅವಕ್ಕೆ ಗಿರಾಕಿ ಹೆಚ್ಚಿ ಪರದೇಶೀಯರ ಲಾಭ ಹೆಚ್ಚುತ್ತಿದೆ. ನವಾಬನೊಬ್ಬನು ಒಡೆಯುವ ಗಾಜಿನ ಶಬ್ದದ ಮೋಹಕ್ಕೆ ಆಸೆಪಟ್ಟು ಗೊಂಚಲು ದೀಪಗಳನ್ನೊಡೆದು ಮಾಲೀಕನಿಗೆ ಹಣ ಕೊಡುತ್ತಿದ್ದಂತಾಗಿದೆ, ನಮ್ಮ ಸ್ಥಿತಿ."

ಇನ್ನೊಂದು ಸಮಸ್ಯೆ: ಉಣ್ಣೆಬಟ್ಟೆಗಳಲ್ಲಿ ಅಗ್ಗವಾದ,ಅಂದವಾದ ಸ್ವದೇಶಿ ಮಾಲು ಇಲ್ಲದಿರುವುದರಿಂದ ಪರದೇಶಿ ಉಣ್ಣೆ ಬಟ್ಟೆಗಳ ಮೇಲೆ ಮಾತ್ರ ಬಹಿಷ್ಕಾರ ಹಾಕದಿರೋಣವೆ ?

" ಇನ್ನುಮೇಲೆ ಬಟ್ಟೆ ಸುಟ್ಟವರಿಗೆಲ್ಲಾ ಬದಲು ಸ್ವದೇಶಿ ಬಟ್ಟೆಕೊಡಲು ಸಾಧ್ಯವಿಲ್ಲ. ಶಿಕ್ಷೆ ಮಾಲೀಕರಿಗೆ ನಮಗಲ್ಲ. ಅವರು ಕೊರ್ಟಿಗೆ ಹೋದರೆ ಅವರ ಉಗ್ರಾಣಗಳನ್ನು ಸುಡೋಣ. ಗಾಬರಿಯೇ, ಅಮೂಲ್ಯ ? ಬಟ್ಟೆಗಳ ದೀಪಾವಳಿಯಿಂದ ನಾನು ಆನಂದಪಡುತ್ತೇನೆಂದು ತಿಳಿಯಬೇಡ. ಇದು ಯುದ್ಧ. ನೋವುಂಟುಮಾಡಲು ಹೆದರಿಕೆಯಾದರೆ, ಪ್ರಣಯ ಪ್ರಸಂಗಗಳಿಗೆ ಹೋಗು. ಇಂತಹ ಕೆಲಸ ನಿನ್ನಿಂದಾಗುವುದಿಲ್ಲ "— ಎಂದೆ.

ಪರದೇಶಿ ಪದಾರ್ಥಗಳ ವಿಚಾರದಲ್ಲಿ ಯಾವ ವಿಧವಾದ ಸಂಧಾನಕ್ಕೂ ಅವಕಾಶವಿಲ್ಲವೆಂದು ನಿರ್ಧರಿಸಿದೆ. ಈ ಬಣ್ಣದ ಪರದೇಶಿ ಶಾಲುಗಳಿಲ್ಲದಿದ್ದ ಕಾಲದಲ್ಲಿ ನಮ್ಮ ರೈತರು ಸಾಧಾರಣ ಹತ್ತಿ ಬಟ್ಟೆಗಳಿಂದ ತೃಪ್ತರಾಗುತ್ತಿದ್ದಂತೆ ಪುನಃ ಇರಲು ಕಲಿಯಬೇಕು. ಅವು ವಿದೇಶಿಯಷ್ಟು ಸೊಗಸಾಗಿ ಕಾಣದಿರಬಹುದು. ಆದರೆ ಅಂತಹ ಆಲೋಚನೆಗಳಿಗೆ ಅದು ಕಾಲವಲ್ಲ.

ಪರದೇಶಿ ವಸ್ತುಗಳನ್ನು ಸಾಗಿಸುವುದಿಲ್ಲವೆಂದು ಅನೇಕ ಜನ ದೋಣಿ ನಡೆಸುವವರು ಒಪ್ಪಿಕೊಂಡಿದ್ದರು. ಆದರೆ ಮಿರ್‌ಜಾನ್ ಇನ್ನೂ ಬಗ್ಗಿರಲಿಲ್ಲ.

ನನ್ನ ವ್ಯವಸ್ಥಾಪಕನನ್ನು—" ಅವನ ದೋಣಿ ಮುಳುಗಿಸಲು ಸಾಧ್ಯವಿಲ್ಲವೆ ? "—ಎಂದು ಕೇಳಿದೆ.

" ಅದೇನು, ಸುಲಭದ ಕೆಲಸ. ಆದರೆ ಆಮೇಲೆ ನನ್ನ ತಲೆಗೆ ಬಂದರೆ ? "

" ಬರುವ ಹಾಗೇಕೆ ಮಾಡುತ್ತೀ ? ಒಂದು ವೇಳೆ ಅಂತಹ ಸಂದರ್ಭ ಬಂದರೆ ನಾನಿಲ್ಲವೆ ? "

ಸಾಮಾನುಗಳನ್ನು ಮಾರುಕಟ್ಟೆಗೆ ಸಾಗಿಸಿ ಮಿರ್‌ಜಾನ್ ದೋಣಿಯನ್ನು ದಡಕ್ಕೆ ಬಿಗಿದಿದ್ದನು. ನನ್ನ ವ್ಯವಸ್ಥಾಪಕ ಏರ್ಪಡಿಸಿದ್ದ ವಿನೋದ ನೋಡಲು ಎಲ್ಲರೂ ಹೋಗಿದ್ದುದರಿಂದ ದೋಣಿಯ ಬಳಿ ಯಾರೂ ಇರಲಿಲ್ಲ. ಕತ್ತಲಾದಮೇಲೆ ದೋಣಿಯಲ್ಲಿ ತೂತುಮಾಡಿ, ಏನೇನೊ ತುಂಬಿ ಕಟ್ಟಿಬಿಚ್ಚಲು ಅದು ನಡು ನೀರಿನಲ್ಲಿ ಮುಳುಗಿತು.

ಮಿರ್‌ಜಾನನಿಗೆ ಎಲ್ಲಾ ಅರ್ಥವಾಯಿತು. ಕ್ಷಮೆ ಬೇಡಲು ಅಳುತ್ತಾ ನನ್ನ ಬಳಿಗೆ ಬಂದನು. " ತಪ್ಪು ನನ್ನದೇ ಸ್ವಾಮಿ—" ಎಂದು ಪ್ರಾರಂಭಿಸಿದನು.

" ಇದ್ದಕ್ಕಿದ್ದಂತೆ ಅದು ಹೇಗೆ ತಿಳಿಯಿತು ? " ಎಂದೆ.

ಅವನು ನೇರವಾದ ಉತ್ತರ ಕೊಡದೆ, " ದೋಣಿಗೆ ೨೦೦೦ರೂ. ಬೆಲೆ. ತಪ್ಪಾಯಿತು. ಈ ಸಲ ನೀವು ಕ್ಷಮಿಸಿದರೆ, ಇನ್ನೆಂದಿಗೂ—" ಎಂದು ಕಾಲಮೇಲೆ ಬಿದ್ದನು.

ಹತ್ತುದಿನ ಬಿಟ್ಟುಬರಲು ಹೇಳಿ ಕಳುಹಿಸಿದೆ. ಆ ಎರಡು ಸಾವಿರ ರೂಪಾಯಿ ಕೊಡಲು ಸಾಧ್ಯವಾದರೆ ಅವನು ನಮ್ಮ ದಾಸಾನುದಾಸನಾಗುವನು. ಅವನಿಂದ ಬಹಳ ಸಹಾಯವಾಗಬಹುದು. ಅಪಾರ ಸಂಪತ್ತಿಲ್ಲದೆ ಮುಂದುವರಿಯಲು ಸಾಧ್ಯವೇ ಇಲ್ಲ.

ಸಂಜೆ ವಿಮಲೆ ಕೋಣೆಗೆ ಬಂದಾಗ ನಾನು ಎದ್ದು " ರಾಣಿ ! ಎಲ್ಲಾ ಸಿದ್ಧವಾಗಿದೆ ; ಜಯ ಕೈಸೇರುತ್ತಿದೆ.

ಆದರೆ ಹಣ ಬೇಕು " ಎಂದೆ.

" ಎಷ್ಟು ಹಣ ? "

" ಬಹಳವಲ್ಲ. ಆದರೆ ಹೇಗಾದರೂ ಬೇಕೇ ಬೇಕು."

" ಎಷ್ಟು ? "

" ಐವತ್ತು ಸಾವಿರ ರೂಪಾಯಾದರೆ ಸಧ್ಯಕ್ಕೆ ಸಾಕು."

ವಿಮಲೆಗೆ ಗಾಬರಿಯಾದರೂ ತೋರಗೊಡದಿರಲು ಪ್ರಯತ್ನಿಸಿದಳು. ಪುನಃ ಹೇಗೆ ಸೋಲನ್ನೊಪ್ಪಿಯಾಳು ?

ನಾನು, " ರಾಣಿ ! ಈ ಅಸಾಧ್ಯವನ್ನು ಸಾಧ್ಯವಾಗಿಸಲು ನಿನ್ನಿಂದ ಮಾತ್ರ ಸಾಧ್ಯ. ಈಗಾಗಲೇ ಹಾಗೆಮಾಡಿದ್ದೀ ! ನಿನ್ನ ಶಕ್ತಿಯೆಷ್ಟೆಂಬುದನ್ನು ತೋರಿಸಲು ನನಗೆ ಸಾಧ್ಯವಾಗಿದ್ದರೆ ! ಆದರೆ ಈಗ ಸಮಯವಲ್ಲ. ಈಗ ಹಣ ಬೇಕು." ಎಂದೆ.

" ದೊರಕಿಸಿ ಕೊಡುತ್ತೇನೆ."

ಒಡವೆಗಳನ್ನು ಮಾರಬೇಕೆಂಬ ಆಲೋಚನೆ ಅವಳಿಗೆ ಬಂದಿತ್ತು. ಆದುದರಿಂದ, " ನಿಮ್ಮ ಒಡವೆ ಮುಂದಕ್ಕೆ ಬೇಕಾಗಬಹುದು." ಎಂದೆ.

ವಿಮಲೆ ಮೌನದಿಂದ ಸ್ವಲ್ಪಹೊತ್ತು ನನ್ನನ್ನು ದಿಟ್ಟಿಸಲು " ಈ ಹಣ ನಿಮ್ಮ ಯಜಮಾನರ ಪೆಟ್ಟಿಗೆಯಿಂದ ಬರಬೇಕು," ಎಂದೆ.

ವಿಮಲೆಗೆ ಗಾಬರಿಯಾಗಿ, " ಅದನ್ನು ಹೇಗೆ ಕೊಡುವುದು ? " ಎಂದಳು.

" ಆ ಹಣ ನಿಮ್ಮದೇ ಅಲ್ಲವೆ ? "

ಆಕೆಯ ಹೆಮ್ಮೆಗೆ ಪುನಃ ಏಟುಕೊಟ್ಟಂತಾಗಿ, " ಅಲ್ಲ" ಎಂದಳು.

" ಅಲ್ಲದಿದ್ದರೆ ಆತನದೂ ಅಲ್ಲ. ದೇಶದ ಹಣ ; ಕಷ್ಟ ಸಮಯದಲ್ಲಿ ಅದರಿಂದ ಕಸಿದುಕೊಂಡಿದ್ದಾನೆ."

" ಆದರೆ ಅದು ನಮ್ಮ ಕೈಸೇರುವ ಬಗೆಯೇನು ? "

" ಹೇಗಾದರೂ ಕೊಟ್ಟೇ ಕೊಡಬೇಕು. ಹೇಗೆಂಬುದು, ನಿಮಗೇ ತಿಳಿದಿರಬೇಕು. ಅದು ಯಾವ ಜನನಿಯ ಸ್ವತ್ತೋ ಆಕೆಗೆ ಸೇರಿಸಬೇಕು. ವಂದೇ ಮಾತರಂ ! ಈ ಮಂತ್ರ ಆತನ ಕಬ್ಬಿಣದ ಪೆಟ್ಟಿಗೆಯ ಬಾಗಿಲನ್ನು ತೆಗೆಯುತ್ತದೆ ; ಕೋಣೆಯ ಗೋಡೆಗಳನ್ನು ಮುರಿಯುತ್ತದೆ; ಅದರ ಕರೆಗೆ ಓಗೊಡದವರ ಹೃದಯಗಳನ್ನು ಮುರಿಯುತ್ತದೆ. ನೀವೂ ವಂದೇ ಮಾತರಂ ಎನ್ನಿ, ವಿಮಲಾ "—ಎಂದೆ.

" ವಂದೇ ಮಾತರಂ ! "

## ಅಧ್ಯಾಯ ೭

# ಸಂದೀಪನ ಕಥೆ

## ೮

ನಾವು ಪುರುಷರು, ರಾಜರು, ನಮಗೆ ಕಾಣಿಕೆ ಬೇಕು ! ಸೃಷ್ಟಿಯ ಆದಿಯಿಂದ ಭೂಮಿಯನ್ನು ಸೂರೆ ಮಾಡುತ್ತಿದ್ದೇವೆ. ನಾವು ಕೇಳಿದಷ್ಟಕ್ಕೂ ಆಕೆ ಬಗ್ಗುತ್ತಿದ್ದಾಳೆ. ಪುರಾತನ ಕಾಲ ದಿಂದ ಹಣ್ಣು ಕಿತ್ತು ಮರ ಕಡಿದು, ಭೂಮಿ ಅಗೆದು, ಮೃಗ ಪಕ್ಷಿ ಜಲಚರಗಳನ್ನು ಕೊಲ್ಲುತ್ತಿದ್ದೇವೆ. ಸಮುದ್ರದ ಆಳದಿಂದ, ಭೂಮಿಯೊಳಗಿಂದ, ಮೃತ್ಯುವಿನ ದವಡೆಯಿಂದ ಸಂತತವಾಗಿ ಕಿತ್ತುಕೊಳ್ಳುತ್ತಿದ್ದೇವೆ. ಪ್ರಕೃತಿ ಮಾತೆಯ ಯಾವ ಸಂಪತ್ತೂ ನಮ್ಮ ಕೊಳ್ಳೆಯಿಂದ ತಪ್ಪಿಸಿಕೊಂಡಿಲ್ಲ. ಪುರುಷರ ಸ್ವಾಮ್ಯಕ್ಕೆ ಮನ್ನಣೆ ಕೊಡುವುದೇ ಭೂಮಿಯ ಆನಂದ. ತ್ಯಾಗದಿಂದ ಫಲ ವತ್ತಾಗಿ, ಸುಂದರವಾಗಿ ಪರಿಪೂರ್ಣವಾಗಿದೆ ಭೂಮಿ. ಇಲ್ಲ ದಿದ್ದರೆ ಅವಳ ಮುತ್ತು ವಜ್ರಗಳು ಬೆಳಕನ್ನು ಕಾಣದೆ, ಪ್ರಕೃತಿ ಹೃದಯ ಕವಾಟವನ್ನು ಮುಚ್ಚಿ, ತನ್ನನ್ನೇ ತಾನರಿಯದೆ ನಾಶ ವಾಗುತ್ತಿದ್ದಳು.

ಹಾಗೆಯೇ ಅಧಿಕಾರ ಬಲದಿಂದ ನಾವು, ಪುರುಷರು, ಸ್ತ್ರೀಯರ ಸುಪ್ತ ಶಕ್ತಿಗಳನ್ನೆಚ್ಚರಿಸಲು ಸಮರ್ಥರಾಗಿದ್ದೇವೆ. ನಮ್ಮ ಅಂಕೆಯಲ್ಲಿದ್ದೇ ತಮ್ಮ ಶಕ್ತಿಯನ್ನು ಗಳಿಸಿಕೊಂಡಿದ್ದಾರೆ. ಸಂತಸದ ವಜ್ರಗಳನ್ನೂ, ದುಃಖದ ಮುತ್ತುಗಳನ್ನೂ ನಮಗೆ ಕೊಟ್ಟು ತಮ್ಮ ಸಂಪತ್ತನ್ನು ಪಡೆದಿದ್ದಾರೆ. ಪುರುಷರು ಸ್ವೀಕರಿಸಿ ದರೆ ಕೊಟ್ಟಂತೆ; ಸ್ತ್ರೀಯರು ಕೊಟ್ಟರೆ ಪಡೆದಂತೆ.

ಆದರೆ ನಾನು ವಿಮಲೆಯಲ್ಲಿ ಯಾಚಿಸಿರುವುದು ದೊಡ್ಡ ವಿಚಾರ. ಮೊದಲು ನನಗೇ ಅಳುಕುಂಟಾಯಿತು. ಒಳಗೊಳ ಗಿನ ಅಕಾರಣ ಸಂಘರ್ಷಣೆ ಮನುಷ್ಯ ಬುದ್ಧಿಯ ಸ್ವಭಾವ.

ಬಹಳ ಕಷ್ಟದ ಕೆಲಸ ಹೇಳಿದೆನೆಂದು, ಅವಳನ್ನು ಹಿಂದಕ್ಕೆ ಕರೆದು, ಈ ತೊಂದರೆಗಳಿಗೆಲ್ಲಾ ಸಿಕ್ಕಿಸಿ ಹಿಂಸೆಮಾಡುವ ಇಷ್ಟ ವಿಲ್ಲವೆಂದು ಹೇಳಬೇಕೆಂದಿದ್ದೆ. ಪುರುಷ ಪೀಡಿಸಬೇಕೆಂದೂ, ಸ್ತ್ರೀಯ ತಾಟಸ್ಥ್ಯವನ್ನು ಕದಲಿಸಿ ಅವಳ ಇರುವಿಕೆಯನ್ನು ಅರ್ಥ ಪೂರ್ಣಮಾಡಬೇಕೆಂದೂ, ದುಃಖದ ಅನಂತ ಆಳವನ್ನು ಕಡೆದು ಲೋಕವನ್ನು ಸುಖಿಯಾಗಿ ಮಾಡಬೇಕೆಂದೂ ಒಂದು ಕ್ಷಣ ಮರೆತೆ. ಇದರಿಂದಲೇ ಪುರುಷನ ಕೈಗಳು ಬಲಯುತ, ಅವನ ಹಿಡಿತ ಬಿಗಿ !

ನಾನು, ಸಂದೀಪ ಏನನ್ನಾದರೂ ತ್ಯಾಗವನ್ನು ಅವಳಿಂದ ಅಪೇಕ್ಷಿಸಬೇಕೆಂದೂ, ಸಾವಿಗೆ ಆಹ್ವಾನ ಕೊಡಬೇಕೆಂದೂ ವಿಮಲೆ ಹೃದಯಾಂತರಾಳದಿಂದ ತೀವ್ರವಾಗಿ ಬಯಸುತ್ತಿದ್ದಳು. ಇಲ್ಲ ದಿದ್ದರೆ ಅವಳಿಗೆ ಸುಖವೆಲ್ಲಿಯದು ? ಸೌಮ್ಯ ಸುಖದ ಬೇಸರ ಕಳೆದು, ಒಂದು ಸಾರಿ ಮನಸಾರೆ ಅಳಲು ನನಗಾಗಿ ಇಷ್ಟು ವರ್ಷ ಗಳೂ ಅವಳು ಕಾದಿರಲಿಲ್ಲವೆ ? ನನ್ನ ಮೊದಲ ದರ್ಶನದಿಂದಲೇ ಅವಳ ದುಃಖದ ದಿನಗಳ ಕಾರ್ಮೋಡಗಳು ಕವಿಯಲಾರಂಭಿಸಿ ದುವು. ಅವಳಲ್ಲಿ ಕನಿಕರಪಟ್ಟು, ದುಃಖದಿಂದ ರಕ್ಷಿಸಿದರೆ ನಾನು ಪುರುಷನಾಗಿ ಜನಿಸಿದುದರ ಉದ್ದೇಶವೇನು ?

ನಾನು ಹಿಂದೆಗೆದುದರ ನಿಜವಾದ ಕಾರಣ, ಹಣವನ್ನು ಕೇಳಿದುದು. ಹಣ ಪುರುಷನಿಗೆ ಸೇರಿದ್ದು ; ಸ್ತ್ರೀಗಲ್ಲ. ಆದುದ ರಿಂದ ಹಣ ಕೇಳಿದರೆ ಭಿಕ್ಷೆ ಬೇಡಿದಂತೆ. ಅದರಿಂದಲೇ ಅಷ್ಟು ಹೆಚ್ಚು ಹಣ ಕೇಳಬೇಕಾಯಿತು. ಒಂದೆರಡು ಸಾವಿರಗಳನ್ನು ಕೇಳಿದ್ದರೆ ಕಳ್ಳತನದಂತೆ. ಐವತ್ತು ಸಾವಿರ ದರೋಡೆಕಾರನ ವೈಶಿಷ್ಟ್ಯಪಡೆದಿದೆ.

ಸಂಪತ್ತು ನನ್ನದಾಗಬೇಕಾಗಿತ್ತು. ಪುನಃ ಪುನಃ ನನ್ನ ಅನೇಕ ಅಪೇಕ್ಷೆಗಳು ದುಡ್ಡಿನ ಅಭಾವದಿಂದ ತಡೆಗಟ್ಟಿ ನಿಲ್ಲ ಬೇಕಾಗಿವೆ. ಇದು ನನಗೆ ತಕ್ಕುದಲ್ಲ. ಇದು ನನ್ನ ವಿಧಿಯ

ಅನ್ಯಾಯವಲ್ಲ; ಹೇಯ ಅಭಿರುಚಿ! ನನ್ನಂತಹವನು ಮನೆ ಬಾಡಿಗೆಗಾಗಲಿ, ಮಧ್ಯಮ ತರಗತಿಯ ರೈಲುಗಾಡಿಯ ಟಿಕೆಟ್ಟಿಗಾಗಲಿ ಒದ್ದಾಡುವುದು ಬರೀ ತೊಂದರೆಯಲ್ಲ—ಅಸಹ್ಯ !

ನಿಖಿಲನ ಆಸ್ತಿ ಅವನಿಗೆ ಅನಾವಶ್ಯಕ. ಅವನು ಬಡವನಾಗಿದ್ದರೂ ಅಯುಕ್ತವಾಗಿರಲಿಲ್ಲ. ಅವನ ಗುರುವಿನೊಂದಿಗೆ ಬಡತನದ ಸಾಧಾರಣ ಸ್ಥಿತಿಯಲ್ಲಿ ಸಂತೋಷವಾಗಿಯೇ ಇರುತ್ತಿದ್ದನು.

ಒಂದೇ ಒಂದು ಸಲ ಐವತ್ತು ಸಹಸ್ರರೂಪಾಯಿಗಳನ್ನು ದೇಶಕ್ಕೋಸ್ಕರ, ನನ್ನ ತೃಪ್ತಿಗಾಗಿ ತೂರುವ ಅವಕಾಶವುಂಟಾದರೆ ! ನಾನು ಹುಟ್ಟಿನಲ್ಲಿ ನವಾಬ; ಈ ಬಡತನದ ವೇಷವನ್ನು ಬಿಸುಟು ಒಂದು ದಿನವಾದರೂ ನನ್ನ ನಿಜರೂಪದಲ್ಲಿ ಕಾಣಬೇಕೆಂಬುದೇ ನನ್ನ ಕನಸು.

ವಿಮಲೆಗೆ ೫೦,೦೦೦ ರೂ. ಸಿಕ್ಕುವುದು ಅನುಮಾನ; ಸಿಕ್ಕಿದರೂ ಒಂದೆರಡು ಸಾವಿರ ಸಿಕ್ಕಬಹುದು. ಊಟವಿಲ್ಲದಿರುವುದಕ್ಕಿಂತ ಅರೆ ಹೊಟ್ಟೆ ಊಟ ಸಿಕ್ಕಿದರೂ ವಾಸಿ.

ಈ ಸ್ವಂತ ವಿಚಾರಗಳನ್ನು ಮುಂದೆ ಆಲೋಚಿಸಬಹುದು. ನನ್ನನ್ನು ಕರೆಯುತ್ತಿದ್ದಾರೆ—ಏನೋ ನಡೆದಿರಬೇಕು....

ಮಿರ್ ಜಾನನ ದೋಣಿ ಮುಳುಗಿಸಿದವನನ್ನು ಪೋಲೀಸರು ಪತ್ತೆ ಮಾಡಿದ್ದಾರಂತೆ. ಆದರೆ ಅವನು ಅನುಭವಸ್ಥ. ಪೋಲೀಸರಿಗೆ ಅವನಿಂದ ಪ್ರಯೋಜನವಾಗಲಾರದು. ಆದರೂ ಹೇಗೆ ಹೇಳುವುದು ? ನಿಖಿಲನಿಗೂ ರೋಷ ಉಕ್ಕಿದೆ. ಅವನ ವ್ಯವಸ್ಥಾಪಕನ ಮಾತು ನಡೆಯದಿರಬಹುದು. "ನಾನು ತೊಂದರೆಗೆ ಸಿಕ್ಕಿದರೆ ನಿಮ್ಮನ್ನೂ ಎಳೆಯ ಬೇಕಾಗುತ್ತದೆ." ಎಂದು ಒಂದು ದಿನ ಅವನು ಹೇಳಿದನು.

"ನನ್ನನ್ನು ಹೇಗೆ ಎಳೆಯುವೆ ?" ನಾನೆಂದೆ.

"ನಿಮ್ಮ ಮತ್ತು ಅಮೂಲ್ಯ ಬಾಬುವಿನ ಪತ್ರಗಳು ನನ್ನ

ಬಳಿ ಇವೆ."

ನನ್ನ ಪತ್ರ ಈ ಉಪಯೋಗಕ್ಕೆ ಬರುವುದೆಂದು ನನಗೆ ತಿಳಿದಿರಲಿಲ್ಲ.

ಈಗ ಅನೇಕ ವಿಚಾರಗಳ ಅನುಭವವಾಗುತ್ತಿದೆ.

ಈಗ ಪೋಲೀಸರಿಗೆ ಲಂಚಕೊಟ್ಟು, ಮಿರ್ ಜಾನನ ಬಾಯನ್ನೂ ಹಣದಿಂದ ಮುಚ್ಚಬೇಕು. ಈ ದೇಶಸೇವೆಯ ವ್ಯವಹಾರದ ಹೆಚ್ಚು ಹಣ ನಿಖಿಲನ ವ್ಯವಸ್ಥಾಪಕನ ಜೇಬು ಸೇರುತ್ತಿರುವಂತಿವೆ. ಆದರೆ ಅವನೂ ನನ್ನಂತೆ ಗಟ್ಟಿಯಾಗಿ "ವಂದೇ ಮಾತರಂ," ಎಂದು ಕೂಗುತ್ತಿರುವುದರಿಂದ ಕಣ್ಣು ಮುಚ್ಚಿಕೊಂಡಿರಬೇಕಾಗಿದೆ.

ಈ ಕೆಲಸಕ್ಕೆ ಇಂತಹ ಒಡಕು ಪಾತ್ರೆಗಳ ಆವಶ್ಯಕತೆ ಇದೆ. ಎಲ್ಲರಲ್ಲೂ ನೀತಿಯ ತತ್ವಗಳು ಹುದುಗಿರುತ್ತವೆ. ವ್ಯವಸ್ಥಾಪಕನ ಮೇಲೆ ರೇಗಿ ಅವನ ಮೋಸವನ್ನು ದೂಷಿಸಬೇಕೆನ್ನಿಸಿತು. ದೇವರಿದ್ದರೆ ಆ ಭಗವಂತನಿಗೆ ನನ್ನ ವಿವೇಕಕ್ಕಾಗಿ ಋಣಿಯಾಗಿದ್ದೇನೆ. ನಾನು ಬೇರೆಯವರನ್ನು ಮೋಸಗೊಳಿಸಬಲ್ಲೆ; ನನ್ನನ್ನು ಮೋಸ ಮಾಡಲಾರೆ. ಆದುದರಿಂದ ನನ್ನ ಕೋಪವಾರಿತು.

ನಿಜವಾದುದು ಒಳ್ಳೆಯದೂ ಅಲ್ಲ, ಕೆಟ್ಟದೂ ಅಲ್ಲ; ಬರೀ ಸತ್ಯ; ಅದೇ ವಿಜ್ಞಾನ. ಕೆರೆ, ಭೂಮಿ ಹೀರದೆ ಬಿಟ್ಟ ನೀರಲ್ಲವೆ. ವಂದೇ ಮಾತರಂ ತತ್ವದ ಕೆಳಗಡೆ, ಎಲ್ಲಾ ಪ್ರಾಪಂಚಿಕ ವ್ಯವಹಾರಗಳ ಕೆಳಗಿರುವಂತೆ, ಕೊಚ್ಚೆ ಇದೆ. ಅದರ ಹೀರುವ ಶಕ್ತಿಯನ್ನು ಲೆಕ್ಕಿಸಬೇಕು. ವ್ಯವಸ್ಥಾಪಕ ತನಗೆ ಬೇಕಾದುದನ್ನು ತೆಗೆದುಕೊಳ್ಳುತ್ತಾನೆ; ನನಗೂ ಬೇಕಾದ ವಿಚಾರಗಳಿವೆ. ಈ ಚಿಕ್ಕ ಅಪೇಕ್ಷೆಗಳು ಆ ಮಹದಾಕಾಂಕ್ಷೆಯ ಭಾಗಗಳು. ಕುದುರೆಗೆ ಹುಲ್ಲುಹಾಕಿ ಚಕ್ರಗಳಿಗೆ ಎಣ್ಣೆ ಹಾಕಬೇಕು, ರಥ ನಡೆಸಬೇಕಾದರೆ.

ಹಣ ಬೇಕು; ಶೀಘ್ರವಾಗಿ ಬೇಕು. ಕಾಯಲು ಸಾಧ್ಯ

ವಿಲ್ಲದುದರಿಂದ ಸಿಕ್ಕಿದ್ದನ್ನು ಬಾಚಿಕೊಳ್ಳಬೇಕು. ತಾತ್ಕಾಲಿಕ ವಾದುದು ಪರಿಣಾಮವನ್ನು ನುಂಗುವುದೆಂದು ಬಲ್ಲೆ; ಈ ದಿನ ಸಿಕ್ಕ ಬಹುದಾದ ಐದು ಸಾವಿರ ನಾಳಿನ ಐವತ್ತು ಸಾವಿರವನ್ನು ನುಂಗ ಬಹುದು. ಆದರೆ ಶಿಕ್ಷೆಯನ್ನು ಅನುಭವಿಸಬೇಕು. ಸಂಯಮದ ಹಾದಿಯಲ್ಲಿ ನಡೆಯುವವರು ತ್ಯಾಗವೆಂಬುದನ್ನರಿಯರೆಂದು ನಾನೇ ನಿಖಿಲನನ್ನು ಅನೇಕ ಸಲ ಹಾಸ್ಯಮಾಡಿದ್ದೇನೆ. ನಮ್ಮಂತಹ ದುರಾಶಾಪರರೇ ಹೆಜ್ಜೆ ಹೆಜ್ಜೆಗೂ ಆಸೆಯನ್ನಡಗಿಸಬೇಕಾಗುವುದು!

ಮಹಾ ಪಾಪಗಳಲ್ಲಿ ಆಸೆ ಪುರುಷನಿಗೆ ತಕ್ಕುದು–ಹೇಡಿ ಗಳಿಗಾಗಿಯೇ ಇರುವ ಮೋಹ ಅವನಿಗೆ ಅಡಚಣೆಯನ್ನುಂಟು ಮಾಡುತ್ತದೆ. ಮೋಹ ಭೂತ ಭವಿಷ್ಯತ್ತುಗಳಿಂದ ಮನುಷ್ಯ ನನ್ನು ಮುಸುಕಿ ಈಗ ಹಾದಿ ಕಾಣದಂತೆ ಮಾಡುತ್ತದೆ. ದೂರದ ಕರೆಗೆ ಕಾದು, ಆಸನ್ನವಾದುದನ್ನು ಅಲಕ್ಷ್ಯ ಮಾಡುವವರು, ಪ್ರಿಯನ ಕನಸಿನಲ್ಲಿ ಮುಳುಗಿದ ಶಕುಂತಲೆಯಂತೆ. ಅತಿಥಿಗೆ ಆದರ ಸಿಕ್ಕದೆ, ಆಶಿಸಿದ ವಸ್ತು ಸಿಕ್ಕದಂತೆ ಶಾಪ ತಗಲುತ್ತದೆ.

ಆ ದಿನ ವಿಮಲೆಯ ಕೈಯ್ಯನ್ನು ಸ್ಪರ್ಶಿಸಿದೆ. ಆ ನೆನಪು ಅವಳ ಮನಸ್ಸಿನಲ್ಲೂ, ನನ್ನ ಮನಸ್ಸಿನಲ್ಲೂ ಕಂಪಿಸುತ್ತಿದೆ. ಪುನಃ ಪುನಃ ಹಾಗೆ ಮಾಡಿ ಅದರ ಪುಳಕ ಭಾವವನ್ನು ಮರೆಸ ಬಾರದು. ಸಂಗೀತ ಚರ್ಚೆಗಿಳಿಯುವಂತಾಗಬಾರದು. ಈಗ "ಏಕೆ" ಎಂಬ ಪ್ರಶ್ನೆ ಅವಳ ಮನಸ್ಸಿನಲ್ಲಿಲ್ಲ. ಮಾಯೆಯ ಆವಶ್ಯಕತೆ ಇರುವ ವಿಮಲೆಗೆ ಅದನ್ನು ತಪ್ಪಿಸಬಾರದು.

ನನಗೆ ಸಧ್ಯ ಬಹಳ ಕೆಲಸವಿರುವುದರಿಂದ ರಾಗದ ಮದ್ಯದ ನೊರೆಯಿಂದಲೇ ತೃಪ್ತನಾಗಬೇಕಾಗಿದೆ! ಅಯ್ಯೋ ಆಸೆಯ ಜೀವ! ನಿನ್ನ ದುರಾಸೆಯನ್ನಡಗಿಸಿಕೋ, ಸೂಚನೆಯ ಮಿದು ಭೇದಗಳೆಲ್ಲಾ ಅಭ್ಯಾಸವಾಗುವವರೆಗೂ ಮಾಯೆಯ ವೀಣೆ ಯನ್ನು ನುಡಿಸಲು ಕಲಿ. ಪಾತ್ರೆಯ ಕಡೆಯ ಹನಿಯತನಕ ಕುಡಿಯುವ ಸಮಯವಿನ್ನೂ ಬಂದಿಲ್ಲ.

೯

ನಮ್ಮ ಕೆಲಸ ಬೇಗ ಸಾಗುತ್ತಿದೆ. ಮುಸಲ್ಮಾನರು ನಮ್ಮ ಬಂಧುಗಳೆಂದು ಗಂಟಲು ಹರಿಯುವವರೆಗೂ ನಾವು ಕೂಗಿದರೂ ಅವರು ತೀರ ನಮ್ಮ ಕಡೆ ಸೇರುವುದಿಲ್ಲವೆಂಬ ಅರಿವುಂಟಾಗುತ್ತಿದೆ. ಅವರನ್ನು ಅಡಗಿಸಿ ನಾವೇ ಯಜಮಾನರೆಂದು ತೋರಿಸಿ ಕೊಡ ಬೇಕು. ಈಗ ಅವರು ಹಲ್ಲು ಕಡಿಯುತ್ತಿದ್ದರೂ ನಾಳೆ ನಾವು ಹೇಳಿದಂತೆ ಕುಣಿಯುತ್ತಾರೆ.

ನಿಖಿಲ—“ಐಕ್ಯ ಭಾರತದ ಕಲ್ಪನೆ ನಿಜವಾಗಿದ್ದರೆ ಮುಸಲ್ಮಾನರೂ ಅದರಲ್ಲಿ ಅವಶ್ಯ ಭಾಗ,” ಎನ್ನುತ್ತಾನೆ.

“ಆದರೆ ಅವರನ್ನು ಸರಿಯಾದ ಸ್ಥಳದಲ್ಲಿಡದಿದ್ದರೆ ತೊಂದರೆ ಕೊಡುತ್ತಲೇ ಇರುತ್ತಾರೆ,”—ನಾನೆಂದೆ.

“ತೊಂದರೆ ತಪ್ಪಿಸಲು ತೊಂದರೆಯನ್ನುಂಟು ಮಾಡ ಬೇಕೋ ?”

“ಹಾಗಾದರೆ ನಿನ್ನ ಆಲೋಚನೆಯೇನು ?”

“ಜಗಳ ತಪ್ಪಿಸಲು ಇರುವುದೊಂದೇ ದಾರಿ.”

ನಿಖಿಲನ ಮಾತುಗಳೆಲ್ಲಾ ಸಜ್ಜನರ ಕತೆಗಳಂತೆ ನೀತಿ ಬೋಧೆಯಲ್ಲಿ ಕೊನೆಗಾಣುತ್ತವೆ. ಇಷ್ಟು ಕಾಲ ನೀತಿಗಳನ್ನು ಕೇಳಿಯೂ ಅವನಿಗೆ ಅವುಗಳಲ್ಲಿ ನಂಬಿಕೆ ಇರುವುದೇ ಆಶ್ಚರ್ಯ! ಅವನೆಂದೆಂದಿಗೂ ಶಾಲೆಯ ಹುಡುಗನೇ. ಅವನ ಒಂದೇ ಸದ್ಗುಣವೆಂದರೆ ನಿಷ್ಕಾಪಟ್ಯ. ಅಂತಹವರಿಂದ ಒದಗುವ ತೊಂದರೆಯೇನೆಂದರೆ, ಸಾವಿನ ಸತ್ಯವನ್ನೂ ಒಪ್ಪದೆ, ಅನಂತರದ ಜೀವನದ ವಿಚಾರವಾಗಿ ಆಲೋಚಿಸುತ್ತಿರುತ್ತಾರೆ.

ನನ್ನ ಆಲೋಚನೆ ಫಲಕಾರಿಯಾದರೆ ದೇಶವೇ ಹತ್ತಿ ಉರಿದೀತು. ಮಾತೆಯನ್ನು ಪ್ರತ್ಯಕ್ಷವಾಗಿ ಕಾಣುವವರೆಗೆ ನಮ್ಮ ಜನರಲ್ಲಿ ದೇಶಭಕ್ತಿ ಉತ್ಪನ್ನವಾಗಲಾರದು. ಅವಳು ದೇವಿ ಯಾಗಬೇಕು. ನನ್ನ ಸ್ನೇಹಿತರು “ಹೊಸದೊಂದು ವಿಗ್ರಹವನ್ನು

ನಿರ್ಮಿಸೋಣ," ಎಂದರು. ನಾನು, "ಹಾಗಾಗುವುದಿಲ್ಲ. ಇರುವ ವಿಗ್ರಹವನ್ನೇ ನಾಡದೇವಿಯಾಗಿ ಮಾಡಿ ಅಭ್ಯಾಸದ ಕಾಲುವೆಗಳಲ್ಲಿ ಜನರ ದೇಶ ಭಕ್ತಿ ಹರಿಯುವಂತೆ ಮಾಡಬೇಕು," ಎಂದೆ.

ನಿಖಿಲನಿಗೆ ಇದೂ ಸಮ್ಮತವಾಗಲಿಲ್ಲ. "ಸತ್ಯ ಸಾಧನೆಗೆ ಸ್ವಪ್ನ ಸೃಷ್ಟಿಯ ಸಹಾಯವನ್ನಪೇಕ್ಷಿಸಬಾರದು." ಎಂದನು.

"ಸಣ್ಣ ಬುದ್ಧಿಗೆ ಈ ಕಾಲ್ಪನಿಕ ಸೃಷ್ಟಿ ಅಗತ್ಯ. ಪ್ರಪಂಚ ದಲ್ಲಿ ಹೆಚ್ಚು ಜನ ಈ ಗುಂಪಿಗೆ ಸೇರಿದವರು. ತಮ್ಮ ದೌರ್ಬಲ್ಯ ವನ್ನರಿತೇ ಜನರು ಎಲ್ಲೆಲ್ಲಿಯೂ ಈ ಕಲ್ಪನೆಯ ವಿಗ್ರಹಗಳನ್ನು ಆರಾಧಿಸುತ್ತಿರುವರು."

"ಹಾಗಲ್ಲ. ನಮ್ಮ ಮೋಹ ಹರಿಯಲು ದೇವರು ಅಗತ್ಯ" —ಎಂದನು ನಿಖಿಲ "ಭ್ರಮೆಯನ್ನು ಸ್ಥಿರಪಡಿಸುವ ದೇವತೆಗಳು ಮಿಥ್ಯಾ ದೇವರುಗಳು."

"ಅದರಿಂದೇನು ? ಕಾರ್ಯ ನಡೆಯದಿರುವುದಕ್ಕಿಂತ ಸುಳ್ಳು ದೇವರ ಸೃಷ್ಟಿಯಾದರೂ ಮೇಲು. ನಮ್ಮ ಭ್ರಮೆಗಳು ಶಕ್ತಿಯುತ ವಾಗಿದ್ದರೂ ಅವುಗಳಿಂದ ಸಹಾಯ ಪಡೆಯದಿರುವುದು ನಮ್ಮ ದೌರ್ಭಾಗ್ಯ. ಬ್ರಾಹ್ಮಣರನ್ನು ನಾವೆಲ್ಲಾ ದೇವತೆಗಳೆಂದು ಪೂಜಿಸಿ ನಮಸ್ಕರಿಸಿದರೂ ಅವರಿಂದ ಏನೂ ಸಹಾಯವಾಗುತ್ತಿಲ್ಲ. ತಲೆಯ ಮೇಲಾಗಲಿ ಬೆನ್ನ ಮೇಲಾಗಲಿ ಬೇರೆಯವರ ಕಾಲು ಧೂಳನ್ನು ಧರಿಸಿ, ಉರುಳಾಡದಿದ್ದರೆ ಏನನ್ನೂ ಮಾಡಲಾರದ ಜನರಿದ್ದಾರೆ. ಇಷ್ಟು ದಿನವೂ ಬ್ರಾಹ್ಮಣರನ್ನು ನಂಬಿದ್ದಕ್ಕೆ ಈ ಜನರಿಂದ ಕೆಲಸ ತೆಗೆಯುವ ಶಕ್ತಿ ಅವರಿಗಿಲ್ಲದಿದ್ದರೆ ಪ್ರಯೋಜನ ವೇನು ?"

ಆದರೆ ನಿಖಿಲನಿಗೆ ಇದೊಂದೂ ಅರ್ಥವಾಗುವುದಿಲ್ಲ. ಅವನ ಸತ್ಯ ಪಕ್ಷಪಾತ ಅಂಥದು. ಸತ್ಯವೆಂಬುದು ಇದೆಯೆಂದೇ ಅವನ ನಂಬಿಕೆ. ನಿಜವಾಗಿ ಅಸತ್ಯವಿರುವಲ್ಲಿ, ಸತ್ಯವೂ ಇದೆ

ಯೆಂದು ಅವನಿಗೆ ವಿವರಿಸಲು ಎಷ್ಟೋ ಸಲ ಪ್ರಯತ್ನಿಸಿದ್ದೇನೆ. ಇದು ನಮ್ಮ ಪೂರ್ವಿಕರಿಗೆ ತಿಳಿದಿದ್ದುದರಿಂದಲೇ ಅವರು ಧೈರ್ಯವಾಗಿ ಬುದ್ಧಿ ಹೀನರಿಗೆ ಅಸತ್ಯವೇ ಸತ್ಯವೆಂದು ಸಾರಿದರು. ದೇಶವನ್ನು ದೇವಿಯೆಂದೆಣಿಸುವವರಿಗೆ ಆಕೆಯ ವಿಗ್ರಹವೇ ಸತ್ಯವಾಗಿ ತೋರುವುದು. ನಮ್ಮ ಸ್ವಭಾವ ಮೂಢ ನಂಬಿಕೆಗಳಿಂದಾಗಿ ನಮಗೆ ದೇಶದ ಸತ್ಯವನ್ನು ತಿಳಿಯುವ ಶಕ್ತಿಯಿಲ್ಲ. ಆದರೆ ಆಕೆಯ ವಿಗ್ರಹದಲ್ಲಿ ನಂಬಿಕೆಯಿದೆ. ನಿಜವಾದ ಕಾರ್ಯದಲ್ಲಿ ಆಸಕ್ತಿಯುಳ್ಳವರು ಇದನ್ನು ಮರೆಯಲಾಗದು.

ನಿಖಿಲನಿಗೆ ಕೋಪ ಬಂತು. "ಸತ್ಯ ಮಾರ್ಗದಲ್ಲಿ ನಡೆಯುವುದನ್ನು ಬಿಟ್ಟು ಆಕಾಶದಿಂದ ಅದ್ಭುತ ಪ್ರಸಾದ ಉದುರುವುದೆಂದು ಕಾದಿರುವೆ. ಶತಮಾನಗಳಿಂದ ಮರೆತಿದ್ದ ದೇಶ ಸೇವೆಯನ್ನು ಜನರಲ್ಲಿ ತುಂಬಲು ವಿಗ್ರಹಮಾಡಿ ವರಗಳಿಗಾಗಿ ಕೈಚಾಚಲು ಹವಣಿಸುತ್ತಿರುವೆ," ಎಂದನು.

"ನಾವು ಅಸಾಧ್ಯವಾದುದನ್ನು ಆಗ ಮಾಡಬೇಕಾಗಿರುವುದರಿಂದ ನಮ್ಮ ದೇಶ ದೇವಿಯಾಗಬೇಕಾಗಿದೆ."

"ಹೌದು. ಕೆಲಸಮಾಡುವ ಅಪೇಕ್ಷೆಯಿಲ್ಲ. ಇರುವುದೆಲ್ಲಾ ಕದಲದೆ ಇದ್ದು ಅಮಾನುಷ ಪರಿಣಾಮ ಕಾಣಬೇಕು."

ನನಗೂ ಬೇಸರವಾಗಿ—"ಈ ನೀತಿ ಬೋಧೆ ಸಾಕು. ಇವು ಅರಿಯದ ಮಕ್ಕಳ ಹಾಲು. ನಾವು ಈಗ ಬೆಳೆದಿದ್ದೇವೆ. ನಾವು ಬಿತ್ತದ ಬೆಳೆ ಸುತ್ತಲು ಬೆಳೆಯುತ್ತಿರುವುದು ಕಾಣುವುದಿಲ್ಲವೆ? ಇದು ಯಾವ ಶಕ್ತಿಯಿಂದ? ಪ್ರತ್ಯಕ್ಷಳಾಗುತ್ತಿರುವ ನಮ್ಮ ನಾಡ ದೇವಿಯ ಶಕ್ತಿ. ಆ ದೇವಿಗೆ ರೂಪು ಕೊಡುವುದು ವಿಭೂತಿ ಪುರುಷರ ಕೆಲಸ. ಪ್ರತಿಭಾವಂತರು ಚರ್ಚಿಸುವುದಿಲ್ಲ, ಸೃಷ್ಟಿಸುತ್ತಾರೆ. ದೇಶದ ಕಲ್ಪನೆಗೆ ನಾನು ರೂಪ ಮಾತ್ರ ಕೊಡುತ್ತೇನೆ. ದೇವಿ ನನಗೆ ಕನಸಿನಲ್ಲಿ ದರ್ಶನ ಕೊಟ್ಟಳೆಂದು ಸಾರುತ್ತೇನೆ. ಆಕೆಯ ಪೂಜೆಯಲ್ಲಿ ಶ್ರದ್ಧೆಯಿಡಮದೇ ಅವರ

ಅಧಃಪತನಕ್ಕೆ ಕಾರಣವೆಂದು ಬ್ರಾಹ್ಮಣರಿಗೆ ಹೇಳುತ್ತೇನೆ. ನೀನು ಸುಳ್ಳೆನ್ನುವೆಯೋ? ಅಲ್ಲ–ಇದೇ ಸತ್ಯ—ನನ್ನ ಬಾಯಿಂದ ಕೇಳಬೇಕೆಂದು ಅನೇಕ ವರ್ಷಗಳಿಂದ ದೇಶ ಕಾದಿರುವುದು ಈ ಸತ್ಯವನ್ನೇ. ಆದರ ಮಹತ್ಪರಿಣಾಮ ನಿನಗೇ ತಿಳಿಯುವುದು."

ನಿಖಿಲ, "ನನ್ನ ಭಯವೇನೆಂದರೆ—ನನ್ನ ಆಯುಸ್ಸು ಪರಿಮಿತ. ನೀನು ಹೇಳುವುದೇ ಕಡೆಯ ಪರಿಣಾಮವಲ್ಲ. ಮುಂದೆ ಆಗಬಹುದಾದ ಪರಿಣಾಮಗಳು ಈಗಲೇ ತಿಳಿಯು ವುದಿಲ್ಲ."

"ನಾನು ಸದ್ಯದ ಪರಿಣಾಮಕ್ಕೇ ಪ್ರಯತ್ನಿಸುತ್ತಿರುವುದು." — ಎಂದೆ.

"ನನಗೆ ಬೇಕಾದ ಪರಿಣಾಮ ಎಲ್ಲಾ ಕಾಲಕ್ಕೂ ಸಂಬಂಧಿಸಿದುದು." ಎಂದನು ನಿಖಿಲ.

ನಿಖಿಲನಿಗೆ ಬಂಗಾಳದ ಶ್ರೇಷ್ಠ ಪ್ರಸಾದವಾದ ಕಲ್ಪನಾ ಶಕ್ತಿ ಇರಬಹುದು. ಆದರೆ ಅದನ್ನು ಪ್ರಾಮಾಣಿಕತೆ ಬಿಗಿದು ಕೊಲ್ಲುತ್ತಿದೆ. ಬಂಗಾಳದ ದುರ್ಗಾಪೂಜೆ ಎಂತಹ ಸಾಧನೆ! ಬಂಗಾಳವನ್ನು, ದೇಶವನ್ನು ಮುಸಲ್ಮಾನರ ಹಿಡಿತದಿಂದ ಬಿಡಿಸ ಬೇಕೆಂದು ಪ್ರಾರ್ಥಿಸುತ್ತಿದ್ದ ಕಾಲದಲ್ಲಿದ್ದ ದೇಶಭಕ್ತಿಯ ರೂಪವೇ ಶಕ್ತಿಯ ಅವತಾರವಾಯಿತು. ದುರ್ಗಾದೇವಿ ರಾಜ ಕೀಯ ದೇವಿಯೆಂದೇ ನನ್ನ ನಂಬಿಕೆ. ಧ್ಯೇಯ ಸಾಧನೆಗೆ ಇಂತಹ ಅಸಾಮಾನ್ಯ ರೂಪು ಕೊಡಲು ಭಾರತದ ಬೇರೆ ಯಾವ ಪ್ರಾಂತ್ಯಕ್ಕೆ ಸಾಧ್ಯವಾಗಿದೆ?

ನಿಖಿಲನ ಉತ್ತರದಿಂದ ಅವನ ಕಲ್ಪನಾ ಶಕ್ತಿ ಪೂರ್ತಿ ನಾಶವಾಯಿತೆಂದು ತಿಳಿಯಿತು: ಮುಸಲ್ಮಾನರ ಆಳ್ವಿಕೆಯಲ್ಲಿ ಮರಾಟಿಯವರೂ ಸಿಕ್ಕರೂ ಆಯುಧಗಳನ್ನು ಹಿಡಿದು ಧ್ಯೇಯಕ್ಕೆ ಹೊಡೆದಾಡಿದರು. ಆದರೆ ಬಂಗಾಳಿಯವನು ದೇವಿಯ ಕೈಗೆ ಆಯುಧಗಳನ್ನು ಕೊಟ್ಟು ಮಂತ್ರಗಳನ್ನು ಹೇಳಿ ತೃಪ್ತನಾದನು.

ಅವನ ದೇಶ ನಿಜವಾದ ದೇವಿಯಾಗಿರದಿದ್ದುದರಿಂದ ಅವನಿಗೆ ಸಿಕ್ಕಿದ ಪ್ರಸಾದ ಕೋಣ ಮೇಕೆಗಳ ಕಡಿದ ರುಂಡಗಳು. ಸತ್ಯ ಮಾರ್ಗದಲ್ಲಿ ದೇಶದ ಹಿತವನ್ನು ಸಾಧಿಸಲು ಹೊರಟಾಗ ದೇಶಕ್ಕಿಂತ ದೊಡ್ಡವನಾದ ಭಗವಂತ ಫಲ ಕೊಡುತ್ತಾನೆ."— ಎಂದನು ನಿಖಿಲ.

ದುರದೃಷ್ಟವಶಾತ್, ಬರಹದಲ್ಲಿ ನಿಖಿಲನ ಮಾತುಗಳು ಚೆನ್ನಾಗಿಯೇ ಕಾಣುತ್ತವೆ. ಆದರೆ ನನ್ನ ಮಾತುಗಳು ಕಾಗದದ ಬರೆಹಕ್ಕಲ್ಲ; ದೇಶದ ಹೃದಯದ ಮೇಲೆ ಗೀರಬೇಕಾದುವು. ಪಂಡಿತ ವ್ಯವಸಾಯ ಶಾಸ್ತ್ರವನ್ನು ಬರೆಯುತ್ತಾನೆ; ರೈತ ನೇಗಿಲಿನಿಂದ ಭೂಮಿಯೊಳಕ್ಕೆ ತನ್ನ ಪ್ರಯತ್ನವನ್ನು ಊರುತ್ತಾನೆ.

## ೧೦

ಪುನಃ ವಿಮಲೆಯನ್ನು ನೋಡುತ್ತಲೇ ಧೈರ್ಯದಿಂದಲೇ ಮಾತನಾಡಿದೆ. " ಯುಗಾಂತರಗಳಿಂದ ಪೂಜೆಗಾಗಿ ಜನ್ಮವೆತ್ತಿರುವ ನಾವು ಮೂರ್ತಿಯ ಸಾಕ್ಷಾದ್ದರ್ಶನವಿಲ್ಲದೆ ಹೃತ್ಪೂರ್ವಕವಾಗಿ ಆ ದೇವನಲ್ಲಿ ನಂಬಿಕೆಯಿಡಲು ಶಕ್ತರಾಗಿದ್ದೇವೆಯೆ? ನಿನ್ನನ್ನು ನೋಡದಿದ್ದರೆ ರಾಷ್ಟ್ರದ ಐಕ್ಯತೆಯನ್ನು ಅರಿಯಲು ನನಗೆ ಸಾಧ್ಯವಾಗುತ್ತಿರಲಿಲ್ಲವೆಂದು ಎಷ್ಟು ಸಲ ಹೇಳಿದ್ದೇನೆ! ನಿನಗೆ ಅರ್ಥವಾಯಿತೋ ಇಲ್ಲವೋ. ಸ್ವರ್ಗದಲ್ಲಿ ದೇವರು ಕಾಣದಿರಬಹುದು. ಭೂಮಿಯಲ್ಲಿ ಮಾನವದೃಷ್ಟಿಗೆ ಸಿಕ್ಕುತ್ತಾರೆ."

ವಿಮಲೆ ವಿಚಿತ್ರವಾಗಿ ನನ್ನನ್ನು ದೃಷ್ಟಿಸಿ ನೋಡಿ, " ನನಗೆ ಅರ್ಥವಾಯಿತು ಸಂದೀಪ್," ಎಂದಳು.

ಇದೇ ಮೊದಲಬಾರಿ ಅವಳು ನನ್ನನ್ನು ಬರೀ ಸಂದೀಪನೆಂದು ಕರೆದುದು.

" ಅರ್ಜುನ ಕೃಷ್ಣನನ್ನು ತನ್ನ ಸಾರಥಿಯೆಂದು ತಿಳಿದಿದ್ದ. ಆದರೆ ವಿಶ್ವರೂಪ ಸಂದರ್ಶನವಾದ ದಿನ ಅರ್ಜುನನಿಗೆ ಸತ್ಯದ ಅರಿವಾಯಿತು.

ನಿನ್ನ ವಿಶ್ವರೂಪವನ್ನು ನಾನು ರಾಷ್ಟ್ರದಲ್ಲಿ ಕಂಡಿದ್ದೇನೆ. ಗಂಗಾ ಬ್ರಹ್ಮಪುತ್ರಾ ನದಿಗಳು ನಿನ್ನ ಕತ್ತನ್ನು ಸುತ್ತಿರುವ ಚಿನ್ನದ ಸರಗಳು. ನದಿಯ ಕಪ್ಪು ನೀರಿನ ದಡವನ್ನಾವರಿಸುವ ಕಾಡುಗಳಲ್ಲಿ ಕಾಡಿಗೆಯಿಂದ ಕಪ್ಪಾದ ನಿನ್ನ ಕಣ್ಣೆವೆಗಳನ್ನು ಕಂಡಿದ್ದೇನೆ. ಹಸುರು ಪೈರಿನ ಮೇಲೆ ಆಡುವ ನೆರಳು ಬೆಳಕು ಗಳನ್ನು ನಿನ್ನ ಸೀರೆಯ ಬಣ್ಣದ ಚಂಚಲ ಹೊಳಪಿನಲ್ಲಿ ಕಾಣು ತ್ತೇನೆ. ಆಗಸವನ್ನು, ಮರಳು ಕಾಡಿನಲ್ಲಿ ಬಾಯ್ಬಿಡುವ ಕೆನ್ನಾ ಲಗೆಯ ಸಿಂಹದಂತೆ, ಮೇಲುಸಿರು ಬಿಡುವಂತೆ ಮಾಡುವ ಬೇಸ ಗೆಯ ಬಿಸಿಲಿನ ಝಳವೇ ನಿನ್ನಕ್ರೂರ ತೇಜಸ್ಸು. ದೇವಿ ಭಕ್ತನಿಗೆ ಇಂತಹ ಅಸಾಧಾರಣ ರೂಪದಲ್ಲಿ ದರ್ಶನ ಕೊಟ್ಟಿರುವುದರಿಂದ ಆಕೆಯ ಆರಾಧನೆಯನ್ನು ದೇಶಾದ್ಯಂತ ಹರಡುವ ಕೆಲಸ ನನ್ನದು. ಆಗ ದೇಶಕ್ಕೆ ಹೊಸ ಉಸಿರು ಬರುತ್ತದೆ. ಪ್ರತಿ ದೇವಾಲಯ ದಲ್ಲಿಯೂ ನಿನ್ನ ವಿಗ್ರಹವೇ. ಆದರೆ ಇದನ್ನು ನನ್ನ ಜನರರಿ ಯರು. ನಿನ್ನ ಹೆಸರಿನಲ್ಲಿ ಅವರನ್ನು ಕೂಗಿ ನಂಬದಿರಲು ಸಾಧ್ಯ ವಾಗದ ವಿಗ್ರಹವೊಂದನ್ನು ಅವರ ಪೂಜೆಗಾಗಿ ನಿರ್ಮಿಸುತ್ತೇನೆ. ಈ ವರವನ್ನು ದಯಪಾಲಿಸು, ಶಕ್ತಿಕೊಡು."

ವಿಮಲೆ ದೃಷ್ಟಿ ತಗ್ಗಿಸಿ ಶಿಲಾಪ್ರತಿಮೆಯಂತೆ ಕುಳಿತಳು. ನಾನು ಹಾಗೆಯೇ ಮಾತನ್ನು ಮುಂದುವರಿಸಿದ್ದರೆ ಅವಳು ಪರ ವಶಳಾಗುತ್ತಿದ್ದಳು. ನಾನು ನಿಲ್ಲಿಸಲು ಕಣ್ಣುಗಳನ್ನು ಅಗಲ ವಾಗಿ ತೆರೆದು ಎಚ್ಚರ ತಪ್ಪಿದವಳಂತೆ "ವಿನಾಶದ ಹಾದಿಯ ಪಥಿಕನೇ, ನಿನ್ನನ್ನು ತಡೆಗಟ್ಟಲು ಯಾರಿಗೆ ಸಾಧ್ಯ? ನಿನ್ನ ಬಯಕೆಗಳ ಹಾದಿಯಲ್ಲಿ ಅಡ್ಡಬರಲು ಯಾರಿಗೂ ಸಾಧ್ಯವಿಲ್ಲ ವೆಂದು ನಾನರಿಯೆನೇ? ರಾಜರು ಕಿರೀಟಗಳನ್ನು ನಿನ್ನ ಪಾದ ಗಳಿಗರ್ಪಿಸುವರು; ಧನಿಕರು ತಮ್ಮ ಧನವನ್ನು ನಿನಗಾಗಿ ಸೂರೆ ಮಾಡುವರು; ಬೇರೆ ಏನೂ ಇಲ್ಲದವರು ಪ್ರಾಣಗಳನ್ನೇ ಅರ್ಪಿ ಸಲು ಬೇಡುವರು. ನನ್ನ ದೊರೆಯೇ, ನನ್ನ ದೇವರೇ! ನನ್ನಲ್ಲಿ

ನೀನೇನು ಕಂಡಿದ್ದೀಯೋ ನಾನರಿಯೆ. ಆದರೆ ನಿನ್ನ ವೈಭವದ ಅತಿಶಯವನ್ನು ನನ್ನ ಹೃದಯದಲ್ಲಿ ಕಂಡಿದ್ದೇನೆ. ಅದರ ಎದು ರಿಗೆ ನಾನು ಯಾರು, ಎಷ್ಟರವಳು? ವಿನಾಶದ ಭಯಂಕರ ಶಕ್ತಿಯೇ! ನೀನು ಕೊಲ್ಲುವವರೆಗೂ ನನಗೆ ನಿಜವಾದ ಜನ್ಮ ವಿಲ್ಲ. ಇನ್ನು ತಡೆಯಲು ಸಾಧ್ಯವಿಲ್ಲ. ನನ್ನ ಹೃದಯ ಬಿರಿಯು ತ್ತಿದೆ! "

ವಿಮಲೆ ಪೀಠದಿಂದ ಜಾರಿ, ನನ್ನ ಕಾಲಮೇಲೆ ಬಿದ್ದು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

ಇದೇ ಜಗತ್ತನ್ನು ನಿಗ್ರಹಿಸುವ ಮೋಹನವಿದ್ಯೆ. ಅಸ್ತ್ರ ವಿಲ್ಲ ಶಸ್ತ್ರವಿಲ್ಲ-ಎದುರಿಸಲಾಗದ ಸೂಚನೆಯ ಮಾಯೆ! ಅದರ ಜಯ! "ಸತ್ಯಮೇವ ಜಯತೆ" ಎನ್ನುವವರಾರು? ಮಾಯೆ ಯಿಂದಲೇ ಜಯ. ಹತ್ತು ಹಸ್ತಗಳಿಂದ ಕೂಡಿದ ಸಿಂಹ ವಾಹನೆಯಾದ ದೇವಿಯನ್ನು ಸೃಷ್ಟಿಸಿದ ಬಂಗಾಳಿಗೆ ಇದು ತಿಳಿ ದಿತ್ತು. ಲೋಕವನ್ನು ಮೋಹದಿಂದ ಗೆಲ್ಲಲು ಬಂಗಾಳ ಈಗ ಹೊಸ ವಿಗ್ರಹವನ್ನು ಸೃಷ್ಟಿಸಬೇಕಾಗಿದೆ. ವಂದೇ ಮಾತರಂ!

ವಿಮಲೆಯನ್ನು ಮೃದುವಾಗಿ ಮೇಲಕ್ಕೆತ್ತಿ, ಸುಧಾರಿಸಿ ಕೊಳ್ಳಲು ಸಮಯಕೊಡದೆ ಪುನಃ ಪ್ರಾರಂಭಿಸಿದೆ. "ರಾಣಿ! ದೇವಿ ತನ್ನ ಪೂಜೆ ದೇಶದಲ್ಲಿ ಹರಡುವ ಕೆಲಸವನ್ನು ನನ್ನ ಮೇಲೆ ಹೊರಿಸಿದ್ದಾಳೆ. ಆದರೆ, ಅಯ್ಯೋ, ನಾನು ಬಡವ."

ವಿಮಲೆಯ ಮುಖವಿನ್ನೂ ಕೆಂಪಾಗಿತ್ತು; ಕಣ್ಣು ಮಸಕಾ ಗಿತ್ತು; ಬಾಯಿ ತೊದಲುತ್ತಿತ್ತು. "ನೀನು ಬಡವನೇ? ನಮ್ಮ ಎಲ್ಲರ ಸಂಪತ್ತೂ ನಿನ್ನದೇ ಅಲ್ಲವೆ? ನನ್ನ ಒಡವೆಗಳಿರುವುದೇಕೆ? ಎಲ್ಲವನ್ನೂ ನಿನ್ನ ಪೂಜೆಗಾಗಿ ಕಿತ್ತುಕೋ. ಅವುಗಳಿಂದ ನನಗೇ ನಾಗಬೇಕು?"

ಹಿಂದೊಂದು ಸಲ ವಿಮಲೆ ಒಡವೆಗಳನ್ನು ನೀಡಿದ್ದಳು. ನನಗೆ ಸಾಧಾರಣವಾಗಿ ಸಂಕೋಚವಿಲ್ಲದಿದ್ದರೂ, ಅವುಗಳನ್ನು

ತೆಗೆದುಕೊಳ್ಳಲಿಲ್ಲ. ಈ ಅಳುಕಿಗೆ ಕಾರಣ ನನಗೆ ತಿಳಿಯಿತು. ಪುರುಷ ಸ್ತ್ರೀಗೆ ಒಡವೆಗಳನ್ನು ಕೊಡಬೇಕು; ಅವನೇ ತೆಗೆದು ಕೊಂಡರೆ ಪುರುಷತ್ವಕ್ಕೇ ಗಾಸಿ.

ಆದರೆ ನನ್ನ ಸ್ವಪ್ರತಿಷ್ಠೆಗೆ ಸ್ಥಳವಿಲ್ಲ. ನನಗಾಗಿ ಅವುಗಳನ್ನು ತೆಗೆದುಕೊಳ್ಳುತ್ತಿಲ್ಲ. ಅವು ದೇವಿಯ ಪೂಜೆಗೆ. ದೇಶ ಹಿಂದೆಂದೂ ಕಾಣದಂತಹ ಪೂಜೆ ಸಲ್ಲಿಸಬೇಕು. ಚರಿತ್ರೆಯಲ್ಲೊಂದು ಹೆಗ್ಗುರುತಾಗಬೇಕು. ಅದೇ ಜನಾಂಗಕ್ಕೆ ನಾನು ಕೊಡುವ ಆಸ್ತಿ. ಮೂಢರು ದೇವರುಗಳನ್ನು ಪೂಜಿಸುತ್ತಾರೆ. ಸಂದೀಪ ಅವುಗಳನ್ನು ಸೃಷ್ಟಿಸುತ್ತಾನೆ.

ಆದರೆ ಇವೆಲ್ಲಾ ದೂರದ ಮಾತು. ಈಗಿನ ಮಾತೇನು? ಮೂರು ಸಾವಿರವಂತೂ ಬೇಕೇಬೇಕು. ಐದು ಸಾವಿರ ಸಿಕ್ಕಿದರೆ ಮೇಲು. ಆದರೆ ಕಲ್ಪನೆಯ ಮಟ್ಟದಿಂದ ತಟ್ಟನೆ ಇಳಿದು ಹಣದ ಮಾತೆತ್ತುವುದು ಹೇಗೆ? ಆದರೆ ಕಾಲ ಓಡುತ್ತಿದೆ.

ಅನುಮಾನವನ್ನೆಲ್ಲಾ ಮೆಟ್ಟಿ ಎದ್ದು ನಿಂತು—"ರಾಣಿ! ನಮ್ಮ ಹಣದ ಚೀಲ ಬರಿದಾಗಿದೆ. ಕೆಲಸ ನಿಲ್ಲುವ ಹಾಗಿದೆ," ಎಂದೆ.

ವಿಮಲೆ ಹಿಂಜರಿದಳು. ಅವಳು ೫೦,೦೦೦ ದ ವಿಚಾರ ಚಿಂತಿಸುತ್ತಿದ್ದಳು. ಈ ಭಾರ ಹೊತ್ತು, ರಾತ್ರಿ ನಿದ್ದೆಗೆಟ್ಟು, ಅವಳೆಷ್ಟು ನರಳಿದಳೋ! ತನ್ನ ಪ್ರೀತಿಯ ಭಕ್ತಿಯನ್ನು ಅವಳು ಬೇರೆ ಹೇಗೆ ತೋರಿಸಲಾದೀತು? ತನ್ನ ಹೃದಯವನ್ನು ನನ್ನ ಪಾದಕ್ಕರ್ಪಿಸಲಾರದೆ ಈ ಹೆಚ್ಚು ಹಣದಿಂದ ತನ್ನ ಭಕ್ತಿ ಪ್ರದರ್ಶಿಸಲು ಪ್ರಯತ್ನಿಸುತ್ತಿದ್ದಳು. ಅವಳ ಸಂಕಟವನ್ನು ನೋಡಿ ನನಗೆ ದುಃಖವಾಗುತ್ತದೆ. ಏಕೆಂದರೆ ಈಗ ಅವಳು ನನ್ನವಳು. ಗಿಡದ ಬೇರುಗಳನ್ನು ಕಿತ್ತದ್ದಾಗಿದೆ. ಈಗ ಎಚ್ಚರಿಕೆಯಿಂದ ಕಾಪಾಡಬೇಕಾಗಿದೆ.

"ರಾಣಿ, ಈಗ ಆ ಐವತ್ತುಸಾವಿರ ಬೇಕಾಗಿಲ್ಲ. ಐದು

ಅಥವಾ ಮೂರು ಸಾಕು," ಎಂದೆ.

ಅವಳ ಮನಸ್ಸು ಹಗುರವಾಗಿ, ಸಂತೋಷದಿಂದ "ತರುತ್ತೇನೆ" ಎಂದಳು. ಅವಳ ಧ್ವನಿ ವೈಷ್ಣವ ಸಂಗೀತದಲ್ಲಿ ರಾಧೆ

"ಪೂವನ್ನು–ಮೂಲೋಕದೊಳುತ್ತಮವೆನಿಪುದನು
ಧರಿಸುವೆನು ಜಡೆಯಲ್ಲಿ ನೆನೆನೆನೆದು ಇನಿಯನನು."

ಎಂದು ಹಾಡಿದಂತಿತ್ತು. ಅದೇ ಹಾಡು, ಅದೇ ಧ್ವನಿ—ಐದು ಸಾವಿರ ತರುತ್ತೇನೆ—ಆ ಪುಷ್ಪ ಮುಡಿಯುತ್ತೇನೆ.

ಕೊಳಲಿನ ಕಿರುದನಿಯಲ್ಲಿ ಈ ಸಂಗೀತ ಮಧುರವಾಗಿರುತ್ತದೆ. ದುರಾಸೆಯಿಂದ ಕೊಳಲನ್ನು ಅಮುಕಿದರೆ "ಏಕೆ? ಏತಕ್ಕಾಗಿ? ಹೇಗೆ ತರುವುದು?" ಎಂಬ ಪ್ರಶ್ನೆಗಳು ಬರಬಹುದು. ಅವುಗಳೊಂದೂ ರಾಧೆಯ ಸಂಗೀತದೊಡನೆ ಮೇಳ ಹೊಂದುವುದಿಲ್ಲ. ನಾನು ಹೇಳಿದಂತೆ ಮಾಯೆಯೊಂದೇ ಸತ್ಯ—ಅದೇ ಕೊಳಲು. ಸತ್ಯ ಅವರ ಬರಿವ್ಯೆ. ಈಗೀಗ ನಿಖಿಲನಿಗೆ ಆ ಶೂನ್ಯತೆಯು ಅರಿವಾಗುತ್ತಿದೆ. ಅವನ ಮುಖ ನೋಡಿದರೆ ನನಗೇ ದುಃಖವಾಗುತ್ತದೆ. ಆದರೆ ನಿಖಿಲ ಸತ್ಯ ಬೇಕೆಂದು ಹಂಬಲಿಸುತ್ತಿದ್ದ; ನಾನು ಮಾಯೆಯನ್ನು ಹಿಡಿತದಿಂದ ಬಿಡುವುದಿಲ್ಲವೆಂದು ಹೆಮ್ಮೆ ಪಟ್ಟೆ. ಇಬ್ಬರಿಗೂ ತಕ್ಕ ಪ್ರತಿಫಲ ಸಿಕ್ಕಿದೆ; ದೂರುವುದೇಕೆ?

ವಿಮಲೆಯ ಹೃದಯವನ್ನು ಮಾಯಾದರ್ಶಲೋಕದಲ್ಲಿ ನಿಲ್ಲಿಸಲು ಹಣದ ಮಾತನ್ನು ನಿಲ್ಲಿಸಿದೆ. ರಾಕ್ಷಸ ಸಂಹಾರಿಣಿಯಾದ ದೇವಿಯ, ಅವಳ ಪೂಜೆಯು, ಮಾತಿಗೆ ಹಿಂದಿರುಗಿದೆ. ಎಲ್ಲಿ, ಎಂದು, ಪೂಜಾ ಸಮಾರಂಭ ನಡೆಸುವುದು? ನಿಖಿಲನ ಜಹಗೀರಿಯಲ್ಲಿರುವ ರೂಯಿಮಾರಿಯಲ್ಲಿ ವರ್ಷಕ್ಕೊಂದು ಸಲ ಜಾತ್ರೆ ನಡೆಯುತ್ತದೆ. ಸಾವಿರಾರು ಯಾತ್ರಿಕರು ಸೇರುತ್ತಾರೆ. ಅಲ್ಲಿ ಈ ದೇವಿಯ ಪೂಜೆಯ ಪ್ರಾರಂಭೋತ್ಸವ ನಡೆಸಿದರೆ ಬಹಳ ಚೆನ್ನಾಗಿರುತ್ತದೆ.

ವಿಮಲೆಯ ಉತ್ಸಾಹ ಉಕ್ಕಿ ಹರಿಯಿತು. ಇದು ಪರದೇಶಿ ವಸ್ತ್ರ ಸುಡುವುದಲ್ಲ, ಜನರ ಉಗ್ರಾಣಗಳ ಲೂಟಿಯಲ್ಲ, ನಿಖಿಲನೂ ಆಕ್ಷೇಪಿಸಲಾರನು—ಎಂದುಕೊಂಡಳು. ಆದರೆ ನಾನು ಒಳಗೊಳಗೇ ನಕ್ಕೆ. ಇವರಿಬ್ಬರೂ, ಒಂಬತ್ತು ವರ್ಷಕಾಲ ಹಗಲಿರುಳೂ ಒಬ್ಬರೊಡನೊಬ್ಬರಿದ್ದರೂ ಒಬ್ಬರ ವಿಚಾರ ಇನ್ನೊಬ್ಬರರಿಯರು. ಮನೆಯ ವಿಚಾರ ಸ್ವಲ್ಪ ತಿಳಿದಿರಬಹುದು. ಹೊರಗಿನ ವಿಚಾರ ಏನೇನೂ ತಿಳಿಯರು. ಮನೆಯ ಜೀವನ ಹೊರಗಿನ ಜೀವನದೊಂದಿಗೆ ಸಮರಸವಾಗಿ ಬೆರೆಯುವುದೆಂದಿದ್ದರು. ಆದರೆ ಇಷ್ಟುದಿನದ ಅಜಾಗರೂಕತೆಯನ್ನು ಸರಿಪಡಿಸಲು ಸಾಧ್ಯವಿಲ್ಲವೆಂದು ಈಗ ತಿಳಿದಿದ್ದಾರೆ.

ಏನಾದರೇನು ? ತಪ್ಪು ಮಾಡಿದವರು ಅನುಭವಿಸಲಿ. ಅದರ ಚಿಂತೆ ನನಗೇಕೆ ? ವಿಮಲೆಯನ್ನು ಗಾಳಿಯ ಗುಳ್ಳೆಯಂತೆ ಕಲ್ಪನೆಯ ಆಕಾಶದಲ್ಲಿ ಇನ್ನೂ ಎತ್ತರದಲ್ಲಿ ಹಾರಿಸುತ್ತಿರಲು ನನಗೂ ಕಷ್ಟ. ಕೆಲಸ ಮುಂದುವರಿಸುವುದೇ ಉತ್ತಮ.

ವಿಮಲೆ ಎದ್ದು ಬಾಗಿಲ ಬಳಿ ಹೋಗಲು ಆಕಸ್ಮಿಕವಾಗಿ " ಹಣದ ವಿಚಾರ....? " ಎಂದೆ.

ವಿಮಲೆ ನಿಂತು. " ತಿಂಗಳ ಕೊನೆಯಲ್ಲಿ ಹಣ ಬಂದಾಗ," ಎಂದಳು.

" ಅದು ತುಂಬಾ ನಿಧಾನವಾಗುತ್ತದೆ. "

" ಯಾವಾಗ ಬೇಕು ? "

" ನಾಳೆ. "

" ನಾಳೆಯೇ ಕೊಡುತ್ತೇನೆ. "

# ಅಧ್ಯಾಯ ೮

# ನಿಖಿಲನ ಕಥೆ

## ೧೦

ಪತ್ರಿಕೆಗಳಲ್ಲಿ ನನ್ನನ್ನು ಮೂರಿ ಕಾಗದಗಳೂ ಲೇಖನಗಳೂ ಬರುತ್ತಿವೆ; ವ್ಯಂಗ್ಯ ಚಿತ್ರಗಳೂ ಪದ್ಯಗಳೂ ಬರುವುವಂತೆ. ಹಾಸ್ಯದಿಂದ ಕೂಡಿ ಹರಡಿದ ಸುಳ್ಳು ದೇಶವನ್ನೇ ಕ್ಷೋಭೆಗೊಳಿಸುತ್ತಿದೆ. ಮಣ್ಣೆರಚಿದರೆ ನಿರಪರಾಧಿ ಪಥಿಕನ ಮೇಲೇ ಬೀಳುವುದೆಂದು ಅವರಿಗೆ ತಿಳಿದಿದೆ.

ನನ್ನ ಒಕ್ಕಲುಗಳೆಲ್ಲರೂ ಸ್ವದೇಶಿ ಪ್ರೇಮಿಗಳಾದರೂ ನನ್ನ ಹೆದರಿಕೆಯಿಂದ ಸುಮ್ಮನಿದ್ದಾರಂತೆ. ಬಹಿರಂಗವಾಗಿ ಸ್ವದೇಶಿಗೆ ಉತ್ತೇಜನ ಕೊಟ್ಟವರನ್ನು ನಾನು ಹಿಂಸಿಸಿದೆನಂತೆ. ನನಗೆ ಪೋಲೀಸರೂ, ಮೇಜಿಸ್ಟ್ರೇಟರೂ ಸ್ನೇಹಿತರಂತೆ; ಅವರ ಸಹಾಯದಿಂದ ನಾನು ಪರದೇಶಿ ಪ್ರಶಸ್ತಿ ಪಡೆಯುವೆನಂತೆ.

ಕುಂದು ಚಕ್ರವರ್ತಿಗಳಂತಹ ದೇಶಪ್ರೇಮಿಗಳ ಪ್ರಶಂಸೆಗಳೂ ಪತ್ರಿಕೆಗಳನ್ನು ತುಂಬಿವೆ. ಅಂತಹ ದೇಶಭಕ್ತರು ಹೆಚ್ಚಾಗಿದ್ದಿದ್ದರೆ ಮ್ಯಾಂಚೆಸ್ಟರ್ ಗಿರಣಿಗಳು ವಂದೇ ಮಾತರಂ ರಾಗಕ್ಕೆ ತಮ್ಮ ಸಾವಿನ ಗೀತೆಯನ್ನು ತಾವೇ ಹಾಡುತ್ತಿದ್ದುವಂತೆ.

ಕಾಂಗ್ರೆಸ್ಸಿಗೆ ಬೆಂಬಲವೀಯದಿದ್ದುದರಿಂದ ಕೆಲವು ಜಮಿನ್ದಾರರ ಖಜಾನೆಗಳನ್ನು ಸುಟ್ಟರು. ಅವರ ಹೆಸರುಗಳನ್ನು ಕೆಂಪು ಶಾಯಿಯಲ್ಲಿ ಪಟ್ಟಿಬರೆದು ನನಗೆ ಕಳುಹಿಸಿದರು. ದೇಶವನ್ನು ಶುದ್ಧಿಗೊಳಿಸಲು ಪವಿತ್ರವಾದ ಅಗ್ನಿ ಉರಿಯುತ್ತಿದೆಯಂತೆ. ದೇಶದ ಸುಪುತ್ರರಲ್ಲದವರ ವಿನಾಶಕ್ಕಾಗಿ ಬೇರೆ ಪ್ರಯತ್ನಗಳೂ ನಡೆಯುತ್ತಿರುವುವಂತೆ. ಪತ್ರಕ್ಕೆ ಸರಿಯಾದ ಸಹಿ ಇರಲಿಲ್ಲ.

ಇದೆಲ್ಲಾ ನಮ್ಮ ವಿದ್ಯಾರ್ಥಿಗಳ ಕೆಲಸವೆಂದು ನನಗೆ ತಿಳಿದಿತ್ತು. ಅವರನ್ನು ಕರೆ ಕಳುಹಿಸಿ ಕಾಗದ ತೋರಿಸಿದೆ.

ಸ್ವದೇಶಿಯ ವಿಜಯಕ್ಕಾಗಿ ಏನನ್ನೂ ಮಾಡಲು ಹೆದರದ ದೇಶಭಕ್ತರ ತಂಡವೊಂದು ರಚಿತವಾಗಿದೆಯೆಂದು ತಾನೂ ಕೇಳಿರುವುದಾಗಿ ಬಿ.ಎ. ವಿದ್ಯಾರ್ಥಿ ಗಂಭೀರವಾಗಿ ತಿಳಿಸಿದನು.

" ನಮ್ಮ ಜನ ಒಬ್ಬನು ಈ ಪುಂಡರಿಗೆ ಬಗ್ಗಿದರೂ ದೇಶಕ್ಕೆ ಅಪಜಯುವಲ್ಲವೆ ? "—ಎಂದು ಕೇಳಿದೆ.

ಚರಿತ್ರೆಯ ವಿದ್ಯಾರ್ಥಿ " ಅದು ಹೇಗೆ ಮಹಾರಾಜ ? " ಎಂದನು.

ನಾನು " ನಮ್ಮ ದೇಶ ಭಯದಿಂದ—ದೇವರ ಭಯದಿಂದ ಹಿಡಿದು ಪೋಲೀಸರ ಹೆದರಿಕೆಯವರೆಗೂ- ಸಾವಿನ ಬಾಗಿಲನ್ನು ಮುಟ್ಟಿದೆ. ನೀವು ಬಿಡುಗಡೆಯ ಹೆಸರಿನಲ್ಲಿ ಬೇರೊಂದು ಭಯದ ಭೂತವನ್ನು ಎತ್ತಿ ನಿಲ್ಲಿಸಿದರೆ, ದೇಶದ ಹೇಡಿತನದ ಮೇಲೆ ದಬ್ಬಾಳಿಕೆಯಿಂದ ನಿಮ್ಮ ಸ್ವಾತಂತ್ರ್ಯ ಧ್ವಜವನ್ನೆತ್ತಿದರೆ, ನಿಜವಾದ ದೇಶಭಕ್ತ ಯಾವನೂ ನಿಮ್ಮ ಆಜ್ಞೆಗೆ ತಲೆ ಬಾಗಲಾರನು."

ಚರಿತ್ರೆಯ ವಿದ್ಯಾರ್ಥಿ. " ಸರ್ಕಾರಕ್ಕೆ ಹೆದರಿಕೆಯಿಂದ ತಲೆಬಾಗದ ದೇಶ ಯಾವುದಾದರೂ ಇದೆಯೆ ? "

ಅದಕ್ಕೆ ನಾನು—" ಯಾವ ದೇಶದ ಸ್ವಾತಂತ್ರ್ಯದ ಮಿತಿಯನ್ನಾದರೂ ಈ ಹೆದರಿಕೆಯ ಆಡಳಿತದ ಪ್ರಮಾಣದಿಂದ ಅಳೆಯಬಹುದು. ದುಷ್ಟರನ್ನೂ ದರೋಡೆಕಾರರನ್ನೂ ಹೆದರಿಸಲು ಮಾತ್ರ ಸರ್ಕಾರವಿದ್ದಾಗ ಅಷ್ಟುಮಟ್ಟಿಗೆ ಮನುಷ್ಯನನ್ನು ಮನುಷ್ಯನ ದಬ್ಬಾಳಿಕೆಯಿಂದ ಆ ಸರ್ಕಾರ ಬಿಡುಗಡೆಮಾಡಿದೆ ಎನ್ನಬಹುದು. ಆದರೆ ಜನರ ಅಲಂಕಾರ, ವ್ಯವಹಾರ, ಆಹಾರ, ಎಲ್ಲವನ್ನೂ ಭಯ ನಿರ್ಧರಿಸಬೇಕಾದರೆ ಅಲ್ಲಿಗೆ ಮನುಷ್ಯನ ಮನೋಸ್ವಾತಂತ್ರ್ಯ ನಾಶವಾದಂತೆ, ವ್ಯಕ್ತಿ ಸ್ವಾತಂತ್ರ್ಯ ಬುಡ

ಮುಟ್ಟ ಉರುಳಿದಂತೆ,"—ಎಂದೆ.

ಚರಿತ್ರೆಯ ವಿದ್ಯಾರ್ಥಿ—"ವ್ಯಕ್ತಿಗಳನ್ನು ಹಾಗೆ ಬಲವಂತಕ್ಕೊಳಪಡಿಸುವುದು ಬೇರೆ ದೇಶಗಳಲ್ಲೂ ಕಾಣಬರುವುದಿಲ್ಲವೆ ? "

ನಾನು—"ಇಲ್ಲವೆಂದವರಾರು ? ದಾಸ್ಯವನ್ನು ಹೆಚ್ಚಿಸಿದಷ್ಟೂ ಮನುಷ್ಯ ತನ್ನನ್ನು ನಾಶಪಡಿಸಿಕೊಂಡಿದ್ದಾನೆಂಬುದು ಮಾತ್ರ ಸತ್ಯ. "

ಒಬ್ಬ ಎಂ. ಎ. ಪದವೀಧರ,—"ಗುಲಾಮ ವ್ಯಾಪಾರ ಮನುಷ್ಯ ಸ್ವಭಾವದಲ್ಲಿಯೇ ಇದೆಯೆಂಬುದು ಇದರಿಂದ ವ್ಯಕ್ತಪಡುವುದಿಲ್ಲವೆ ? " ಎಂದನು.

ಮತ್ತೊಬ್ಬ ಪದವೀಧರ–"ಸಂದೀಪ ಬಾಬು ಎಲ್ಲವನ್ನೂ ವಿವರಿಸಿದ್ದಾರೆ. ನಿಮ್ಮ ನೆರೆಯ ಜಮೀನ್ದಾರ ಹರೀಶ ಕುಂದುವನ್ನೇ ಉದಾಹರಣೆಗಾಗಿ ತೆಗೆದುಕೊಳ್ಳಿ. ಆತನ ಜಮೀನಿನಲ್ಲಿ ಒಂದುತೊಲ ಪರದೇಶಿ ಉಪ್ಪು ಸಿಕ್ಕುವುದಿಲ್ಲ. ಏತಕ್ಕೆ ? ಆತ ಯಾವಾಗಲೂ ನಿರ್ದಾಕ್ಷಿಣ್ಯವಾಗಿ ಆಡಳಿತ ನಡೆಸಿದ್ದಾನೆ. ಸ್ವಭಾವತಃ ಗುಲಾಮರಾಗಿರುವವರಿಗೆ ಶಕ್ತನಾದ ಯಜಮಾನನಿಲ್ಲದಿರುವುದು ದೌರ್ಭಾಗ್ಯ. " ಎಂದನು.

ಮತ್ತೊಬ್ಬ, "ನೀವು ಇಲ್ಲೇ ಇರುವ ಜಮೀನ್ದಾರ ಚಕ್ರವರ್ತಿಯವರ ಪುಂಡು ಒಕ್ಕಲ ಸಮಾಚಾರ ಕೇಳಿಲ್ಲವೆ ? ಅವನು ತೀರ ನಾಶವಾಗುವವರೆಗೂ ನ್ಯಾಯಸ್ಥಾನ ಬಿಡಲಿಲ್ಲ. ಊಟಕ್ಕಿಲ್ಲದೆ ಹೆಂಡತಿಯ ಬೆಳ್ಳಿಯ ನಗಗಳನ್ನು ಮಾರಲು ಪ್ರಯತ್ನಿಸಿದಾಗ ಕೊಳ್ಳಲು ಯಾರಿಗೂ ಧೈರ್ಯವಾಗಲಿಲ್ಲ. ಆಮೇಲೆ ಚಕ್ರವರ್ತಿಯ ವ್ಯವಸ್ಥಾಪಕ ಐದು ರೂಪಾಯಿಗೆ ಎಲ್ಲವನ್ನೂ ಕೇಳಿದನು. ಅವುಗಳ ಬೆಲೆ ಮೂವತ್ತಕ್ಕಿಂತ ಹೆಚ್ಚಾಗಿದ್ದರೂ ಅವನು ಅಷ್ಟಕ್ಕೇ ಕೊಡಬೇಕಾಯಿತು.

ನಗಗಳನ್ನು ತೆಗೆದುಕೊಂಡು ವ್ಯವಸ್ಥಾಪಕ ಆ ಐದು

ರೂಪಾಯಿಗಳನ್ನೂ ಬಾಡಿಗೆಗೆ ತೆಗೆದುಕೊಂಡಿರುವುದಾಗಿ ಹೇಳಿದನು. ನಮಗೂ ಬೇಸರವಾಯಿತು. ಆದರೆ ಸಂದೀಪ ಬಾಬು, ಬದುಕಿರುವವರ ಸಹಾಯವನ್ನು ಬೇಡವೆಂದರೆ ಶ್ಮಶಾನದ ಶವಗಳಿಂದ ಕೆಲಸ ಸಾಗಿಸಬೇಕಾದೀತೆಂದು ಹೇಳಿದರು. ಈ ಜನ ತಮಗೇನುಬೇಕು, ಹೇಗೆ ಪಡೆಯಬೇಕು, ಎಂದು ತಿಳಿದವರು— ಅವರು ಆಳಲು ಹುಟ್ಟಿದವರು. ಆಸೆಯಿಲ್ಲದವರು ಇಂಥವರ ಆಸೆಗಳನ್ನನುಸರಿಸಿಯೇ ಬದುಕಬೇಕು. ಅವರಿಬ್ಬರು ಜಮೀನ್ದಾರರನ್ನೂ ಸಂದೀಪ ಬಾಬು ನಿಮ್ಮೊಂದಿಗೆ ಹೋಲಿಸಿದರು. ನಿಮಗೆಷ್ಟು ಒಳ್ಳೆಯ ಅಪೇಕ್ಷೆಯಿದ್ದರೂ ನಿಮ್ಮ ಜಹಗೀರಿಯಲ್ಲಿ ಸ್ವದೇಶಿಯನ್ನು ಸ್ಥಾಪಿಸಲು ನೀವು ಶಕ್ತರಾಗುವುದಿಲ್ಲವೆಂದು ಹೇಳಿದರು "— ಎಂದನು.

ನಾನು—" ಸ್ವದೇಶಿಗಿಂತ ಹೆಚ್ಚಾದುದನ್ನು ಸ್ಥಾಪಿಸುವ ಆಸೆ ನನಗಿದೆ. ಒಣಗಿದ ಕೊರಡುಗಳು ನನಗೆ ಬೇಕಾಗಿಲ್ಲ. ಜೀವಂತ ವೃಕ್ಷಗಳು ಬೇಕು. ಅವು ಬೆಳೆಯಲು ಸಮಯಬೇಕು"— ಎಂದೆ.

ಇತಿಹಾಸದ ವಿದ್ಯಾರ್ಥಿ ವ್ಯಂಗ್ಯವಾಗಿ—" ನಿಮಗೆ ಕೊರಡೂ ಸಿಕ್ಕುವುದಿಲ್ಲ; ವೃಕ್ಷವೂ ಇಲ್ಲ. ದೊರಕಬೇಕಾದರೆ ಕಿತ್ತುಕೊಳ್ಳಬೇಕೆಂದು ಸಂದೀಪಬಾಬು ಬೋಧಿಸುವುದು ಸರಿಯಾಗಿದೆ. ಶಾಲೆಯಲ್ಲಿ ಹೇಳಿಕೊಡುವ ನೀತಿಗೆ ಇದು ವ್ಯತಿರಿಕ್ತವಾಗಿರುವುದರಿಂದ ಕಲಿಯಲು ಕಷ್ಟವಾಗುತ್ತದೆ. ಹರೀಶ ಕುಂದುವಿನ ಒಕ್ಕಲೊಬ್ಬನಿಗೆ ಗೇಣಿಕೊಡಲು ಏನೂ ಇಲ್ಲದಿರಲು ಅಧಿಕಾರಿ ಅವನ ಹೆಂಡತಿಯನ್ನೇ ಮಾರಿಸಿದುದನ್ನು ಕಣ್ಣಾರೆ ಕಂಡಿದ್ದೇನೆ. ಕೊಂಡುಕೊಳ್ಳುವವರು ಬೇಕಾದಷ್ಟು ಜನರಿದ್ದುದರಿಂದ ಬಾಡಿಗೆ ವಸೂಲಾಯಿತು. ಅವನ ಗೋಳನ್ನು ನೋಡಿ ನನಗೆ ಅನೇಕ ರಾತ್ರಿಗಳು ನಿದ್ರೆಬರಲಿಲ್ಲ. ಅದು ಹೇಗಾದರೂ ಸಾಲಗಾರನ ಹೆಂಡತಿಯನ್ನಾದರೂ ಮಾರಿ ತನ್ನ ಹಣ ಪಡೆಯು

ವವನು ನನಗಿಂತ ಶಕ್ತನೆಂಬ ಅರಿವು ನನಗುಂಟಾಯಿತು. ನನ್ನಿಂದ ಅದು ಸಾಧ್ಯವಿಲ್ಲ—ನಾನು ಅಶಕ್ತ, ಎಂಬುದನ್ನು ಒಪ್ಪುತ್ತೇನೆ; ನನ್ನ ಕಣ್ಣಿನಲ್ಲಿ ನೀರು ಬರುತ್ತದೆ. ದೇಶವನ್ನು ರಕ್ಷಿಸಲು ಇಂತಹ ಚಕ್ರವರ್ತಿ, ಕುಂದು ಮತ್ತು ಅವರ ಅಧಿಕಾರಿಗಳಿಂದಲೇ ಸಾಧ್ಯ."

ನನಗೆ ಬೇಸರವಾಯಿತು: "ನೀನು ಹೇಳುವುದು ಸತ್ಯವಾದರೆ ಇಂತಹ ಕುಂದು ಚಕ್ರವರ್ತಿಗಳಿಂದ ದೇಶವನ್ನು ರಕ್ಷಿಸಬೇಕಾದುದು ನನ್ನ ಕರ್ತವ್ಯ. ನಮ್ಮ ರಕ್ತಗತವಾಗಿರುವ ದಾಸ್ಯ ಈ ಸಮಯದಲ್ಲಿ ಭಯಂಕರ ದಬ್ಬಾಳಿಕೆಯಾಗಿ ಹೊರಬರುತ್ತಿದೆ. ಹೆದರಿಕೆಗೆ ತಲೆಬಾಗುವುದು ನಿಮಗೆ ಅಭ್ಯಾಸವಾಗಿ ಬೇರೆಯವರನ್ನು ಅಂಕೆಯಲ್ಲಿಡುವುದು ನಿಮಗೊಂದು ವ್ರತವಾಗಿದೆ. ಈ ಭಯಂಕರ ಕ್ರೌರ್ಯ ಅಶಕ್ತತೆಗಳನ್ನೆದುರಿಸುವುದೇ ನನ್ನ ವ್ರತ."

ಈ ಸರಳವಾದ ಹೇಳಿಕೆ, ಸತ್ಯವನ್ನು ವಿರೂಪಮಾಡಲು ಮಾತ್ರ ತಿಳಿದ ಬಿ.ಎ., ಎಂ.ಎ. ವಿದ್ಯಾರ್ಥಿಗಳಿಗೆ ಅರ್ಥವಾಗಲಿಲ್ಲ.

## ನಿಖಿಲನ ಕಥೆ

### ೧೧

ಪಂಚುವಿನ ಸುಳ್ಳು ಚಿಕ್ಕಮ್ಮನ ವಿಚಾರ ತೊಂದರೆಗಿಟ್ಟುಕೊಂಡಿತು. ಸುಳ್ಳೆಂದು ಸ್ಥಾಪಿಸಲು ಕಷ್ಟ; ನಿಜವಾಗಿ ನಡೆದ ಸಂಗತಿಗೆ ಸಾಕ್ಷಿಗಳು ಸಿಕ್ಕುವುದು ಕಷ್ಟವಾದರೂ ನಡೆಯದ ಸಂಗತಿಗೆ ಪ್ರಮಾಣಗಳನ್ನು ಸಿದ್ಧಪಡಿಸುವುದು ಸುಲಭ. ಈ ಎಲ್ಲಾ ಏರ್ಪಾಟುಗಳೂ ಪಂಚುವಿನ ಜಮೀನನ್ನು ನಾನು ಕೊಂಡುಕೊಂಡುದು ಅಕ್ರಮವೆಂದು ತೋರಿಸುವ ಸಲುವಾಗಿ.

ಬೇರೆ ಯಾವ ದಾರಿಯೂ ಕಾಣದೆ, ಪಂಚುವಿಗೆ ನನ್ನ ಭೂಮಿಯಲ್ಲೇ ಗುಡಿಸಲು ಕಟ್ಟಿಕೊಡಬೇಕೆಂದು ಆಲೋಚಿಸಿದೆ. ಆದರೆ ನನ್ನ ಗುರು ಒಪ್ಪಲಿಲ್ಲ. ಈ ದುಷ್ಟ ಕಾರುಬಾರುಗಳಿಗೆ ತಲೆಬಾಗಕೂಡದೆಂದು ಹೇಳಿ, ಆ ವಿಚಾರದ ಇತ್ಯರ್ಥವನ್ನು ಅವರೇ ವಹಿಸಿಕೊಂಡರು. ಈ ಅನ್ಯಾಯಗಳನ್ನೆದುರಿಸಲು ಆತನಿಗೆ ಹೇಗೆ ಸಾಧ್ಯವೆಂದು ನನಗೆ ತಿಳಿಯಲಿಲ್ಲ. ಸಾಯಂಕಾಲ ಎಂದಿನಂತೆ ಆತ ಬರಲಿಲ್ಲ. ಸಾಮಾನು ಕಟ್ಟಿಕೊಂಡು ಕೆಲವು ದಿನಗಳೊಳಗಾಗಿ ಹಿಂದಿರುಗಿ ಬರುವುದಾಗಿ ಹೇಳಿ ಎಲ್ಲಿಗೋ ಹೋದರೆಂದು ಆಳು ಹೇಳಿದನು. ಆತನು ಪಂಚುವಿನ ಚಿಕ್ಕಪ್ಪನ ಹಳ್ಳಿಯಲ್ಲಿ ಸಾಕ್ಷಿಗಳನ್ನು ಹುಡುಕಲು ಹೋಗಿರಬಹುದೆಂದೂ, ಅದು ಎಷ್ಟು ನಿರರ್ಥಕವಾದ ಅನ್ವೇಷಣವೆಂದೂ ಎಂದು ಕೊಂಡೆ.

ದಿನವೆಲ್ಲಾ ಕೆಲಸದಲ್ಲಿ ಇರವನ್ನು ಮರೆಯುತ್ತೇನೆ. ಸಂಜೆ ಯಾಗುತ್ತಾ ಆಕಾಶವನ್ನು ಮುಸುಕುವ ಕತ್ತಲೆ ನನ್ನ ಹೃದಯ ವನ್ನೂ ಆವರಿಸುತ್ತದೆ. ಮನೆಯನ್ನೇ ಆಶ್ರಯಿಸಿರುವ ಮನಸ್ಸು ಹೊರ ಪ್ರಪಂಚವನ್ನು ಗಮನಿಸದಿರಬಹುದು. ಆದರೆ ಬಯಲಿ ನಲ್ಲಿ ಗಿಡಗಳ ಕೆಳಗೆ ಜೀವಿಸುವ ನನ್ನ ಮನಸ್ಸು ಗಾಳಿಯಲ್ಲಿ ತೇಲಿ ಬರುವ ಸಂದೇಶಗಳನ್ನು ಗ್ರಹಿಸಿ, ಬೆಳಕು ಕತ್ತಲೆಗಳ ಶ್ರುತಿಗೆ ಹೃದಯಾಂತರಾಳದಿಂದ ಮೂರ್ದನಿ ಕೊಡಬಲ್ಲುದು.

ಬೆಳಕಿನಲ್ಲಿ, ಸಾವಿರಾರು ಕೆಲಸ ಕಾರ್ಯಗಳ ನಡುವೆ ಜೀವನ ತುಂಬಿರುವಂತೆ ಭಾಸವಾಗುವುದು. ಆದರೆ ಆಗಸದ ಬಣ್ಣಗಳು ಅಳಿದು, ಸ್ವರ್ಗದ ಕಿಟಕಿಗಳ ಮೇಲೆ ಮುಸುಕೆಳೆದಾಗ ಸಂಜೆ, ಹೊರಗಿನ ಪ್ರಪಂಚವನ್ನಳಿಸಿ, ಕತ್ತಲನ್ನೆಲ್ಲಾ ಏಕೈಕ ವ್ಯಕ್ತಿಯಿಂದ ತುಂಬುವುದಕ್ಕಾಗಿಯೆ ಸಂಜೆ ಮೂಡುವುದೆಂದು ನನ್ನ ಹೃದಯ ಉಸಿರುತ್ತದೆ. ಭೂಮಿ, ಆಕಾಶ, ನೀರು-ಎಲ್ಲಾ ಸೃಷ್ಟಿಯ ಗುರಿಯೂ ಇದಾಗಿರುವಾಗ ಇದನ್ನು ಅರ್ಥಮಾಡಿ

ಕೊಳ್ಳುವಷ್ಟು ಕಾಠಿಣ್ಯ ನನ್ನಲ್ಲಿಲ್ಲ. ಪ್ರಿಯೆಯ ಕಪ್ಪು ಕಣ್ಣಿನ ದೃಷ್ಟಿಯಂತೆ ಕತ್ತಲೆ ಗಾಢವಾದಾಗ, ಕರ್ಮಕ್ಷೇತ್ರವೊಂದೇ ಜೀವನ ಸತ್ಯವಲ್ಲವೆಂದೂ, ಅದೇ ಮನುಷ್ಯನ ಸಕಲ ಆಗು ಹೋಗಲ್ಲ ವೆಂದೂ, ಮನುಷ್ಯ ಸತ್ಯಕ್ಕೆ ಒಳ್ಳೆಯದಕ್ಕೆ ಕಟ್ಟುಬಿದ್ದ ಕೇವಲ ದಾಸನಲ್ಲವೆಂದೂ—ನನ್ನ ಜೀವ ಹೇಳುತ್ತದೆ.

ಅಯ್ಯೋ ನಿಖಿಲ! ದಿನದ ಕೆಲಸ ಮುಗಿದ ಮೇಲೆ, ನಕ್ಷತ್ರಗಳ ಬೆಳಕಿನಲ್ಲಿ ರಾತ್ರಿಯ ಅನಂತ ಗಾಢಾಂಧಕಾರದಲ್ಲಿ ಮುಳುಗಿ ಸ್ವಚ್ಛಂದವಾಗಿ ತಿರುಗುತ್ತಿದ್ದ ನಿನ್ನ ವ್ಯಕ್ತಿತ್ವ ಇನ್ನಿಲ್ಲ ವಾಯಿತೆ ? ಜೀವನದ ಜನಸಂದಣಿಯಲ್ಲಿ ಸಂಗಾತಿಯಿಲ್ಲದವನು ಎಷ್ಟು ಏಕಾಕಿ !

ಆ ದಿನ ಮುಚ್ಚಂಜೆಯಲ್ಲಿ ಕೆಲಸವಿಲ್ಲದೆ, ಕೆಲಸ ಮಾಡುವ ಮನಸ್ಸೂ ಇಲ್ಲದೆ ಇದ್ದೆ. ಜೊತೆಯಲ್ಲಿ ಮಾತನಾಡಲು ನನ್ನ ಗುರುವೂ ಇರಲಿಲ್ಲ. ಬರಿದಾದ ಹೃದಯ ಅವಲಂಬನವನ್ನೆಳಸಲು ಒಳಗಿನ ತೋಟಕ್ಕೆ ಹೋದೆ. ನನ್ನ ಪ್ರೀತಿಯ ಹೂವಿನ ಗಿಡಗಳು ಕುಂಡಗಳಲ್ಲಿ ಗೋಡೆಯ ಬಳಿ ಸಾಲುಸಾಲಾಗಿದ್ದುವು. ಅವು ಹೂಬಿಟ್ಟಾಗ ಹಸುರು ಅಲೆಯ ಮೇಲಿರುವ ವರ್ಣರಂಜಿತವಾದ ನೊರೆಯಂತೆ ಕಾಣುತ್ತಿದ್ದುವು. ಇಲ್ಲಿಗೆ ಬಂದು ಅನೇಕ ದಿನ ಗಳಾಗಿದ್ದುದರಿಂದ ಹೂವುಗಳನ್ನು ಕಾಣಲು ಕಾತರನಾಗಿಯೇ ಬಂದೆನು.

ಆಗತಾನೆ ಪೂರ್ಣಚಂದ್ರ ಗೋಡೆಯಮೇಲೆ ಕಾಣಿಸಿ ಕೊಳ್ಳುತ್ತಿದ್ದುದರಿಂದ ಗೋಡೆಯ ನೆರಳು ಗಾಢವಾಗಿತ್ತು. ಸದ್ದುಮಾಡದೆ ಹಿಂದಿನಿಂದ ಬಂದು, ಚೇಷ್ಟೆಗಾಗಿ ಕತ್ತಲೆಯ ಕಣ್ಣನ್ನು ಚಂದ್ರ ಮುಚ್ಚಿದಂತಿತ್ತು. ಗಿಡಗಳ ಹತ್ತಿರ ಬಂದಾಗ ಒಬ್ಬ ವ್ಯಕ್ತಿ ಹುಲ್ಲಿನಮೇಲೆ ಮಲಗಿರುವುದನ್ನು ಕಂಡು ನನ್ನ ಹೃದಯ ಝುಗ್ಗೆಂದಿತು. ನನ್ನ ಅಡಿಗಳ ಸದ್ದು ಕೇಳಿ ಅವಳು ಎದ್ದು ಕುಳಿತಳು.

ಮಾಡುವುದೇನು? ಹಿಂದಿರುಗಬೇಕೆಂದು ನಾನೂ ಆಲೋಚಿಸುತ್ತಿದ್ದೆ; ವಿಮಲೆಯೂ ತಪ್ಪಿಸಿಕೊಂಡು ಹೋಗಲು ಹಾದಿ ಹುಡುಕುತ್ತಿದ್ದಳು. ಹೋಗುವುದೂ ಕಷ್ಟ; ನಿಲ್ಲುವುದೂ ಕಷ್ಟ. ನಾನು ನಿರ್ಧರಿಸುವಷ್ಟರಲ್ಲಿ ವಿಮಲೆ ಮುಸುಕನ್ನೆಳೆದು ಕೊಂಡು ಒಳಕ್ಕೆ ಹೊರಟು ಹೋದಳು.

ಆ ಕ್ಷಣದಲ್ಲಿ ವಿಮಲೆಯ ದುಃಖದ ಅರಿವು ನನಗುಂಟಾ ಯಿತು. ನನ್ನ ಕ್ಷೋಭೆ ಮಾಯವಾಗಿ, "ವಿಮಲಾ" ಎಂದು ಕೂಗಿದೆ.

ಅವಳು ಬೆಚ್ಚಿಬಿದ್ದು ನಿಂತಳು; ಹಿಂದಿರುಗಿ ನೋಡಲಿಲ್ಲ. ನಾನು ಎದುರಿಗೆ ಹೋಗಿ ನಿಂತೆ. ಅವಳ ಮುಖ ಮರೆಯಲ್ಲಿತ್ತು. ಚಂದ್ರನ ಬೆಳಕು ನನ್ನ ಮುಖದ ಮೇಲಿತ್ತು. ಅವಳು ಮುಷ್ಟಿ ಯನ್ನು ಬಿಗಿಹಿಡಿದು ತಲೆತಗ್ಗಿಸಿ ನಿಂತಿದ್ದಳು.

ನಾನು—"ವಿಮಲಾ, ನಿನ್ನನ್ನು ನನ್ನ ಪಂಜರದಲ್ಲಿ ನಾನೇಕೆ ಹವಣಿಸಬೇಕು? ಹಾಗಾದರೆ, ನೀನು ಮರುಗಿ ಸೊರ ಗುವೆಯೆಂದು ನನಗೆ ತಿಳಿದಿಲ್ಲವೆ?" ಎಂದೆ.

ಅವಳು ಮಾತನಾಡದೆ ತಲೆತಗ್ಗಿಸಿ ನಿಂತಿದ್ದಳು.

ನಾನು ಮುಂದುವರಿಸಿದೆ—"ನಿನ್ನನ್ನು ಹೀಗೆ ಬಂಧಿಸಿದ್ದರೆ ನನ್ನ ಜೀವನ ಕಬ್ಬಿಣದ ಸರಪಳಿಯಾಗುವುದೆಂದು ನಾನು ಬಲ್ಲೆ. ಅದರಿಂದ ನನಗೇನು ಸಂತೋಷ?"

ಅವಳು ಮಾತನಾಡಲಿಲ್ಲ.

"ವಿಮಲೆ, ನೀನು ಸ್ವತಂತ್ರಳು. ನಾನು ನಿನ್ನ ವಿಚಾರ ದಲ್ಲಿ ಹೇಗೆ ವರ್ತಿಸಿದ್ದರೂ, ನಿನ್ನ ಸಂಕೋಲೆಯಾಗಲು ಇಷ್ಟ ವಿಲ್ಲ" ಹೀಗೆ ಹೇಳಿ ಹೊರಗೆ ಬಂದು ಬಿಟ್ಟೆ.

ಇದು ಔದಾರ್ಯವೂ ಅಲ್ಲ; ಅಸಡ್ಡೆಯೂ ಅಲ್ಲ. ಅವ ಳನ್ನು ಬಿಡುಗಡೆ ಮಾಡಿದ ಹೊರತು ನನಗೆ ಬಿಡುಗಡೆಯಿಲ್ಲವೆಂದು ತಿಳಿದೆ. ವಿಮಲೆಯನ್ನು ಕಂಠಮಾಲೆಯಾಗಿಟ್ಟುಕೊಳ್ಳಲು

ಪ್ರಯತ್ನಿಸಿದರೆ ಹೃದಯದ ಮೇಲೆ ಭಾರವನ್ನೆಳೆದುಕೊಂಡಂತಾಗುವುದೆಂದು ತಿಳಿದೆ. ಆನಂದ ನನಗಲ್ಲದಿದ್ದರೆ ಹೋಗಲಿ; ದುಃಖ ನನ್ನದಾದರೆ ಬರಲಿ. ಆದರೆ ಬಂಧನ ಮಾತ್ರ ಎಂದೆಂದಿಗೂ ಬೇಡವೆಂಬುದೇ ನನ್ನ ಪ್ರಾರ್ಥನೆಯಲ್ಲವೆ ? ಅಸತ್ಯವನ್ನು ಸತ್ಯವೆಂದು ಆತುಕೊಳ್ಳುವುದು ನೇಣುಹಾಕಿಕೊಂಡಂತೆ. ಅಂತಹ ಆತ್ಮವಿನಾಶದಿಂದ ಭಗವಂತ ರಕ್ಷಿಸಲಿ. ಕೋಣೆಗೆ ಹಿಂದಿರುಗಿದಾಗ ಗುರು ಕಾದಿದ್ದರು. ನನ್ನ ಹೃದಯವಿನ್ನೂ ಬಡಿದುಕೊಳ್ಳುತ್ತಿತ್ತು.

ತಟ್ಟನೆ "ಸ್ವಾತಂತ್ರ್ಯಕ್ಕಿಂತ ದೊಡ್ಡದು ಯಾವುದೂ ಇಲ್ಲ," ಎಂದೆ.

ಗುರು ಆಶ್ಚರ್ಯದಿಂದ ತಲೆಯೆತ್ತಿದರು. ನಾನು ಮುಂದುವರಿಸಿದೆ—"ಪುಸ್ತಕಗಳನ್ನು ಓದಿದರೆ ಅರ್ಥವಾಗುವುದಿಲ್ಲ. ಆಸೆಗಳು ನಮ್ಮನ್ನೂ ಬೇರೆಯವರನ್ನೂ ಬಿಗಿಯುವ ಬಂಧನಗಳೆಂದು ವೇದಗಳು ಸಾರುತ್ತವೆ. ಆದರೆ ಬರಿಯ ಮಾತುಗಳಿಗೆ ಅರ್ಥವಿಲ್ಲ. ಪಕ್ಷಿಯನ್ನು ಪಂಜರದಿಂದ ಬಿಡುಗಡೆ ಮಾಡಿದಾಗ ಮಾತ್ರ ಅದು ನಮ್ಮ ಸಂಕೋಲೆಗಳನ್ನು ಕಳಚಿತೆಂಬ ಅರಿವುಂಟಾಗುತ್ತದೆ. ನಾವು ಬೇರೆಯುವರನ್ನು ಬಂಧಿಸಿದಾಗ ಕಬ್ಬಿಣದ ಸಂಕೋಲೆಗಳಿಗಿಂತ ಬಿಗಿಯಾಗಿ ಆಸೆ ನಮ್ಮನ್ನು ಬಂಧಿಸುತ್ತದೆ. ಇದೇ ಪ್ರಪಂಚಕ್ಕೆ ಅರ್ಥವಾಗಿಲ್ಲ. ಹೊರಗಿನ ಪ್ರಪಂಚವನ್ನು ಸುಧಾರಿಸಲು ಪ್ರಯತ್ನಿಸುತ್ತಾರೆ. ಆದರೆ ಸುಧಾರಣೆ ಬೇಕಾಗಿರುವುದು ಒಳ ಆಸೆಗಳಲ್ಲೇ; ಬೇರೆ ಅಲ್ಲ ! "

ಆತನು, "ನಮಗೆ ಬೇಕಾದ ವಸ್ತು ಸಿಕ್ಕಿದಾಗ ನಾವೇ ಯಜಮಾನರೆಂದು ಕೊಳ್ಳುತ್ತೇವೆ. ಆದರೆ ಆಸೆಗಳನ್ನು ಮನಸ್ಸಿನಿಂದ ಹೊರಗೆಸೆದಾಗ ಮಾತ್ರ ನಾವು ಯಜಮಾನರು." ಎಂದರು.

ನಾನು—"ಬಾಯಿಂದ ನುಡಿದಾಗ ಎಲ್ಲಾ ಬರಿಯ ನೀತಿ

ವಾಕ್ಯಗಳಾಗಿ ತೋರುತ್ತವೆ. ಆದರೆ ಸ್ವಲ್ಪ ಮಟ್ಟಿಗಾದರೂ ಅನುಭವಿಸಿ ತಿಳಿದಾಗ ಅದು ದೇವತೆಗಳು ಕುಡಿದು ಅಮರರಾದ ಅಮೃತವಂತೆ ತೋರುತ್ತದೆ. ಬಂಧನದಿಂದ ಬಿಡುಗಡೆ ಮಾಡುವ ವರೆಗೂ ಸೌಂದರ್ಯ ನಮಗೆ ಕಾಣುವುದಿಲ್ಲ. ಜಗತ್ತನ್ನು ಜಯಿಸಿ ದವನು ಬುದ್ಧ, ಅಲೆಗ್ಸಾಂಡರನಲ್ಲ. ಗದ್ಯದಲ್ಲಿ ಹೇಳಿದರೆ ಅಸತ್ಯ ವಾಗಿ ಕಾಣುತ್ತದೆ— ಅದನ್ನು ಹಾಡುವುದು ಎಂದು? ಈ ಜೀವನ ಸತ್ಯಗಳು ಪುಸ್ತಕಗಳ ಪುಟಗಳನ್ನು ಮೀರಿ, ಗಂಗೋತ್ರಿಯಿಂದ ಗಂಗೆ ಹರಿದಂತೆ ಹರಿಯುವುದು ಎಂದು ? "

ನನ್ನ ಗುರು ಕೆಲವು ದಿನದಿಂದ ಎಲ್ಲಿಯೋ ಹೋಗಿದ್ದುದೂ, ಆದರ ಕಾರಣ ನನಗೆ ತಿಳಿಯದಿದ್ದುದೂ ಜ್ಞಾಪಕ ಬಂತು. " ಇಷ್ಟು ದಿನ ಎಲ್ಲಿಗೆ ಹೋಗಿದ್ದಿರಿ? " ಎಂದು ಕೂಡಲೆ ಕೇಳಿದೆ.

" ಪಂಚುವಿನ ಜತೆಯಲ್ಲಿದ್ದೆ."

" ಇಷ್ಟು ದಿನವೂ ! "

" ಹೌದು. ಅವನ ಚಿಕ್ಕಮ್ಮನೆಂದು ಬಂದಿರುವವಳೊಡನೆ ಮಾತನಾಡಿ ಒಪ್ಪಂದಕ್ಕೆ ಬರ ಬೇಕಾಗಿತ್ತು. ನನ್ನಂತಹ ವಿಚಿತ್ರ ಪುರುಷನೂ ಅವರೊಡನೆ ನಿಲ್ಲಬಹುದೆಂದು ಅವಳಿಗೆ ತಿಳಿದೇ ಇರಲಿಲ್ಲ. ನಾನು ಅಲ್ಲಿಯೇ ನಿಂತದ್ದು ನೋಡಿ ಆಕೆಗೆ ಸಂಕೋಚ ವಾಯಿತು. ನಾನು :—ಅಮ್ಮಾ ನೀವು ಬಯ್ದರೂ ನಾನು ಇಲ್ಲಿಂದ ಹೋಗುವುದಿಲ್ಲ. ನಾನಿರುವವರೆಗೂ ಪಂಚುವೂ ಹೋಗು ವುದಿಲ್ಲ. ತಾಯಿಯಿಲ್ಲದ ಅವನ ತಬ್ಬಲಿ ಮಕ್ಕಳನ್ನು ಬೀದಿಗೆ ಓಡಿಸುವುದನ್ನು ನಾನು ನೋಡಲು ಸಾಧ್ಯವೆ ? " ಎಂದೆ.

ಎರಡು ದಿನ ಅವಳು ಸುಮ್ಮನಿದ್ದಳು. ಈವತ್ತು ಮೂಟೆ ಕಟ್ಟುತ್ತಿದ್ದಳು. " ನಾವು ಬೃಂದಾವನಕ್ಕೆ ಹೋಗುತ್ತೇವೆ. ಖರ್ಚಿಗೆ ಕೊಡಿ " ಎಂದಳು. ಅವಳು ಬೃಂದಾವನಕ್ಕೆ ಹೋಗು ವುದಿಲ್ಲವೆಂದು ನಾನು ಬಲ್ಲೆ ; ಖರ್ಚಿನ ಹಣವೂ ಕಡಮೆಯಾಗಿರು ವುದಿಲ್ಲವೆಂದು ಬಲ್ಲೆ. ಅದಕ್ಕೋಸ್ಕರ ನಿನ್ನಲ್ಲಿಗೆ ಬಂದೆ."

"ಹಣ ಕೊಡುತ್ತೇನೆ."

"ಮುದುಕಿ ಕೆಟ್ಟವಳಲ್ಲ. ಪಂಚುವಿಗೆ ಅವಳಿಂತಹ ಜಾತಿ ಎಂಬುದು ಸ್ಪಷ್ಟವಾಗಿ ತಿಳಿದಿರಲಿಲ್ಲ. ಅವಳನ್ನು ನೀರಿನ ಪಾತ್ರೆ ಮುಟ್ಟಗೊಡಿಸುತ್ತಿರಲಿಲ್ಲ. ಅದರಿಂದ ಸದಾ ಅಸಮಾಧಾನ. ನನಗೆ ಅಂತಹ ಆಕ್ಷೇಪಣೆ ಏನೂ ಇಲ್ಲವೆಂದು ತಿಳಿದ ಮೇಲೆ ನನ್ನನ್ನು ವಿಶ್ವಾಸವಾಗಿ ನೋಡಿಕೊಂಡಳು. ಬಹಳ ಚೆನ್ನಾಗಿ ಅಡಿಗೆ ಮಾಡುತ್ತಾಳೆ!....ಆದರೆ ಪಂಚುವಿಗೆ ನನ್ನಲ್ಲಿದ್ದ ಅಲ್ಪ ಸ್ವಲ್ಪ ಮರ್ಯಾದೆಯೂ ಹೋಯಿತು. ನಾನು ಒಳ್ಳೆಯ ಮನುಷ್ಯ ನೆಂದು ಕೊಂಡಿದ್ದ. ಕೆಲಸ ಸಾಧಿಸಲು ಜಾತಿ ಪದ್ಧತಿಗಳನ್ನೂ ನಾನು ಗಮನಿಸದಿದ್ದುದನ್ನು ನೋಡಿದ. ಸುಳ್ಳು ಸಾಕ್ಷ್ಯ ಸಿದ್ಧ ಪಡಿಸಿದ್ದರೆ ಅವನ ಆಕ್ಷೇಪಣೆಯಿರಲಿಲ್ಲ. ಆದರೆ ಜಾತಿ ಕೆಡುವುದು ಅವನಿಗೆ ಸಹಿಸಲಿಲ್ಲ. ಆದರೆ ಮುದುಕಿ ಹೊರಟು ಹೋದ ಮೇಲೂ ಕೆಲವು ದಿನ ನಾನು ಅಲ್ಲೇ ಇರಬೇಕು. ಇಲ್ಲದಿದ್ದರೆ ಹರೀಶ ಕುಂದು ಏನು ಹೊಸ ತಂಟೆ ಕೊಡುತ್ತಾನೋ. ಅವನು ಎಲ್ಲರೊಡನೆಯೂ—'ನಾನೇನೋ ಪಂಚುವಿಗೆ ಒಬ್ಬ ಚಿಕ್ಕಮ್ಮ ನನ್ನು ಸೃಷ್ಟಿಸಿದೆ. ಈ ಉಪಾಧ್ಯಾಯ ತಾನೇ ತಂದೆಯಾಗಿ ಬಂದಿದ್ದಾನೆ. ಆದರೆ ಅವನ ಉದ್ಧಾರಕ್ಕೆ ಎಷ್ಟು ಜನ ತಂದೆಗಳು ಬೇಕೋ'—ಎಂದು ಹೇಳಿದ್ದಾನಂತೆ."

ನಾನು, "ಅವನ ಉದ್ಧಾರವಾಗುವುದೋ ಇಲ್ಲವೋ ನಾನರಿಯೆ. ಆದರೆ ದೇಶವನ್ನು ಜಾತಿ, ಪದ್ಧತಿ, ಸ್ವಾರ್ಥ ಮುಂತಾದ ಸಾವಿರಾರು ಬಲೆಗಳಿಂದ ಬಿಡಿಸುವ ಪ್ರಯತ್ನದಲ್ಲಿ ನಾವು ಹತರಾದರೂ ಚಿಂತೆಯಿಲ್ಲ, ಸಂತೋಷವಾಗಿ ಸಾಯ ಬಹುದು—" ಎಂದೆ.

# ವಿಮಲೆಯ ಕಥೆ

## ೧೪

ಒಂದು ಜೀವಮಾನದಲ್ಲಿ ಇಷ್ಟು ಪ್ರಸಂಗಗಳು ನಡೆಯಬಹುದೆಂದು ಯಾರರಿತಿದ್ದರು. ನಾನು ಅನೇಕ ಜನ್ಮಗಳನ್ನು ಕಳೆದಂತಿದೆ. ಕಾಲ ಎಷ್ಟು ಜಾಗ್ರತೆಯಾಗಿ ಕಳೆದು ಹೋಗುತ್ತಿದೆಯೆಂಬ ಅರಿವು ಆ ದಿನದ ಪೆಟ್ಟಿನ ಅನುಭವವಾಗುವವರೆಗೂ ಆಗಲಿಲ್ಲ.

ಪರದೇಶಿ ವಸ್ತುಗಳನ್ನು ಮಾರುಕಟ್ಟೆಯಿಂದ ಹೊರಗೆ ಹಾಕೆಂದು ಕೇಳಿದಾಗ ನನಗೂ ನನ್ನ ಪತಿಗೂ ವಾಗ್ವಾದ ನಡೆಯಬಹುದೆಂದು ತಿಳಿದಿತ್ತು. ಆದರೆ ನನಗೆ ಚರ್ಚೆಯ ಆವಶ್ಯಕತೆ ಇರಲಿಲ್ಲವೆಂದೂ, ನನ್ನನ್ನು ಸುತ್ತುವರಿದಿದ್ದ ಮಾಯೆಯ ಶಕ್ತಿಯೇ ಸಾಕೆಂದೂ ತಿಳಿದಿದ್ದೆ. ಸಂದೀಪನಂತಹ ಮಹಾ ವ್ಯಕ್ತಿ, ಸಾಗರದ ಅಲೆ ದಡದ ಶಕ್ತಿಗೆ ಬಾಗುವಂತೆ ನನ್ನ ಶಕ್ತಿಗೆ ಬಾಗಿದ್ದನಲ್ಲವೆ? ನಾನು ಅವನನ್ನು ಕರೆದೆನೆ? ಇಲ್ಲ. ನನ್ನ ಮಾಯೆ ಅವನನ್ನು ಸೆಳೆಯಿತು. ಅಮೂಲ್ಯ ಮೊದಲು ನನ್ನನ್ನು ಕಂಡಾಗ ಅವನ ಜೀವನ ಪ್ರವಾಹ ಅರುಣೋದಯದ ನದಿಯಂತೆ ಬಣ್ಣವೇರಿತು. ದೇವಿ, ಭಕ್ತನ ಅರಳಿದ ಮುಖವನ್ನು ನೋಡಿದಾಗ ಅನುಭವಿಸುವ ಆನಂದವನ್ನು ನಾನು ಕಂಡಿದ್ದೇನೆ.

ನನ್ನ ಶಕ್ತಿಯ ಈ ನಿದರ್ಶನಗಳಿಂದುಂಟಾದ ಆತ್ಮವಿಶ್ವಾಸ ನನ್ನ ಪತಿಯೆದುರು, ವಿದ್ಯುತ್ಪೂರಿತ ಮೋಡದಂತೆ ನಿಲ್ಲುವ ಶಕ್ತಿ ಕೊಟ್ಟಿತು. ಆದರೆ, ನಡೆದುದೇನು? ಈ ಒಂಬತ್ತು ವರ್ಷಗಳಲ್ಲಿ ಅಷ್ಟು ಆವೇಗರಹಿತವಾದ ದೃಷ್ಟಿಯನ್ನು ಆತನ ಕಣ್ಣುಗಳಲ್ಲಿ ನಾನು ಕಂಡಿದ್ದಿಲ್ಲ. ಮರುಭೂಮಿಯ ಆಗಸದಂತೆ—ಕರುಣೆಯ ತಂಪಿಲ್ಲ; ಸುತ್ತಲಿನ ವರ್ಣದ ಪ್ರತಿಬಿಂಬವಿಲ್ಲ. ಆತನು ಕೋಪ ಮಾಡಿಕೊಂಡಿದ್ದರೆ ನನಗಷ್ಟು ನೋವಾಗುತ್ತಿರಲಿಲ್ಲ. ಆದರೆ ಆತನ ಮನೋಗತವನ್ನೇ ತಿಳಿಯಲಾರದೆ ಹೋದೆ. ರಾತ್ರಿಯ

ಅಂಧಕಾರವನ್ನು ಮಾತ್ರ ಹಿಂದೆಬಿಟ್ಟು ಮಾಯವಾಗುವ ಕನಸಿನಂತೆ ನಾನೊಬ್ಬ ಮಿಥ್ಯಾ ವ್ಯಕ್ತಿಯಂತಿತ್ತು.

ಹಿಂದೆ, ನನ್ನ ಓರಗಿತ್ತಿಯ ಸೌಂದರ್ಯವನ್ನು ನೋಡಿ ಕರುಬುತ್ತಿದ್ದೆ. ಆಗ ಭಗವಂತ ನನಗೇನೂ ಶಕ್ತಿ ಕೊಟ್ಟಿಲ್ಲವೆಂದೂ, ನನ್ನ ಪತಿಯ ಪ್ರೇಮವೇ ನನ್ನ ಸರ್ವಶಕ್ತಿಯೆಂದೂ ಭಾವಿಸಿದ್ದೆ. ಈಗ ನನ್ನ ಶಕ್ತಿಯನ್ನರಿತು, ಅದರ ಮತ್ತಿಲ್ಲದೆ ಜೀವಿಸಲಸಾಧ್ಯವಾಗಿರುವಾಗ ಅದು ಒಡೆದುಹೋಗಿ ಜೀವನ ನಿಸ್ಸಾರವಾಯಿತು.

ಆ ದಿನ ಎಷ್ಟು ಜಾಗರೂಕತೆಯಿಂದ ತಲೆಬಾಚಿದೆ! ಅವಮಾನ! ನನ್ನ ಓರಗಿತ್ತಿ, "ಏನಮ್ಮಾ. ನಿನ್ನ ಕೂದಲು ಹಾರುವ ಹಾಗಿದೆ. ತಲೆಯನ್ನೂ ಎತ್ತಿಕೊಂಡು ಹೋದೀತು" ಎಂದಿದ್ದಳು.

ಮತ್ತೆ, ತೋಟದಲ್ಲಿ ಆ ದಿನ, ನನ್ನಪತಿ ಎಷ್ಟು ಸುಲಭವಾಗಿ ನನ್ನನ್ನು ಬಿಡುಗಡೆ ಮಾಡಿದರು. ಆದರೆ ಸ್ವಾತಂತ್ರ್ಯ-ಬರಿಯ ಸ್ವಾತಂತ್ರ್ಯ—ಅಷ್ಟು ಸುಲಭವಾಗಿ ಅದನ್ನು ಕೊಟ್ಟು ತೆಗೆದುಕೊಳ್ಳಲು ಸಾಧ್ಯವೇ? ಮೀನನ್ನು ಆಕಾಶದಲ್ಲಿ ಬಿಡುಗಡೆ ಮಾಡಿದಂತೆ.— ನನ್ನನ್ನು ಸದಾ ಸುತ್ತುವರಿದಿರುವ ಪ್ರೇಮ ಪ್ರಪಂಚದಿಂದ ಹೊರಗಿರಲು ನನಗೆ ಹೇಗೆ ಸಾಧ್ಯ? ಈ ದಿನ ಕೊಠಡಿಗೆ ಹೋದಾಗ-ಮಂಚ, ಕನ್ನಡಿ ಸಾಮಾನೆಲ್ಲಾ ಇದ್ದುವು. ಆದರೆ ಎಲ್ಲವನ್ನೂ ಆವರಿಸಿದ್ದ ಹೃದಯದ ಪ್ರೇಮವಿರಲಿಲ್ಲ. ಅದರ ಬದಲು ಸ್ವಾತಂತ್ರ್ಯ—ಬರಿಯ ಸ್ವಾತಂತ್ರ್ಯ-ನಿಸ್ಸಾರ ಸ್ವಾತಂತ್ರ್ಯ. ಕಲ್ಲು ಹೆಂಟೆಗಳು ಎದ್ದು ಕಾಣುವ ಒಣನದಿ. ಅಂತಃಕರಣವಿಲ್ಲದ ಬರಿಯ ಸಾಮಾನುಗಳು!

ಪ್ರಪಂಚದಲ್ಲಿ ಸತ್ಯವಾದುದು ಏನಾದರೂ ಎಲ್ಲಿಯಾದರೂ ಇದೆಯೇ ಎನ್ನುವ ಮನಃ ಕ್ಲೇಶದಲ್ಲಿದ್ದಾಗ ಸಂದೀಪನನ್ನು ಕಂಡೆ. ಆಗ ಜೀವ ಜೀವದೊಡನೆ ಬೆರೆತು ಎಂದಿನಂತೆ ಕಿಡಿಗಳೊಡೆಯಲಾರಂಭಿಸಿದುವು. ಇದೇ ಸತ್ಯ—ಅದಮ್ಯವಾದ ಸತ್ಯ—ಹದ್ದು

ಮೀರಿ ಹರಿಯುವ ಸತ್ಯ ;—ದೊಡ್ಡ ರಾಣಿ, ಅವಳ ದಾಸಿ ಥಾಕೋ, ಅವಳ ಹಾಡುಗಳು, ಎಲ್ಲರ ನಗು ಹಾಸ್ಯಗಳನ್ನು ಸಾವಿರ ಪಾಲು ಮೀರಿದ ಸತ್ಯ.

'ಐವತ್ತು ಸಾವಿರ !' ಸಂದೀಪ ಕೇಳಿದ.

ಅಮಲೇರಿದ ನನ್ನ ಹೃದಯ, "ಐವತ್ತು ಸಾವಿರ ತಾನೆ! ಕೊಡುತ್ತೇನೆ" ಎಂದಿತು.

ಹೇಗೆ ಕೊಡುವುದು, ಎಲ್ಲಿಂದ ತರುವುದು, ಇವೆಲ್ಲಾ ಸಣ್ಣ ವಿಚಾರಗಳು. ನನ್ನನ್ನು ನೋಡಿ! ಕ್ಷಣದಲ್ಲಿ ಪ್ರಪಂಚವನ್ನು ಮೀರಿದ ಶಿಖರಕ್ಕೆ ನಾನೇರಿರಲಿಲ್ಲವೆ? ನಾನು ಕೋರಿದಾಗ ಸಮಸ್ತ ವಸ್ತುಗಳೂ ಸಿದ್ಧವಾಗುವುವು. ತರುತ್ತೇನೆ, ತರುತ್ತೇನೆ, ಸಂದೇಹವಿಲ್ಲದೆ ತರುತ್ತೇನೆ.

ಸಂದೀಪನನ್ನು ಹಾಗೆ ಬೀಳ್ಕೊಟ್ಟೆ. ಆದರೆ ಕಲ್ಪವೃಕ್ಷ ವೆಲ್ಲಿದೆ? ಹೊರ ಪ್ರಪಂಚ ಹೃದಯವನ್ನೇಕೆ ಹೀಗೆ ಅವಮಾನ ಪಡಿಸುತ್ತದೆ?

ಹೇಗಾದರೂ ಹಣ ಕೊಡಬೇಕು. ಹೇಗೆ ಕೊಟ್ಟರೂ ದೋಷವಿಲ್ಲ. ಪಾಪ ಪುಣ್ಯಗಳು ನಿರ್ಬಲರಿಗೆ! ನನ್ನ ಶಕ್ತಿ ಅವುಗಳನ್ನು ಮೀರಿದುದು. ಸಾಧಾರಣ ಮನುಷ್ಯ ಕಳ್ಳನಾಗ ಬಹುದು ; ರಾಜ ತನಗೆ ಬೇಕಾದುದನ್ನು ಜಯಿಸಿ ತೆಗೆದುಕೊಳ್ಳು ವನು. ಹಣ ಎಲ್ಲಿದೆ, ಯಾರು ತೆಗೆದುಕೊಳ್ಳುವರು, ಯಾರು ಕಾಯುತ್ತಾರೆ ಎಂಬುದನ್ನು ತಿಳಿದುಕೊಳ್ಳಬೇಕು. ಹೊರಗೆ ನಿಂತು ಕಛೇರಿ ಕಟ್ಟಡಗಳನ್ನು ನೋಡುತ್ತಾ ಅರ್ಧ ರಾತ್ರಿ ಕಳೆದೆ. ಆ ಕಬ್ಬಿಣದ ಸಲಾಕೆಗಳ ಹಿಂದೆ ಇರುವ ೫೦,೦೦೦ ರೂಪಾಯಿ ಗಳನ್ನು ಕಿತ್ತುಕೊಳ್ಳುವುದು ಹೇಗೆ? ಮಂತ್ರದಿಂದ ಕಾವಲುಗಾರ ಜೀವ ತೆಗೆದುಕೊಳ್ಳಲು ಸಾಧ್ಯವಾಗಿದ್ದರೆ ನಾನು ಹಿಂದೆಗೆಯು ತ್ತಿರಲಿಲ್ಲ—ನನ್ನ ಹೃದಯ ಅಷ್ಟು ಕ್ರೋಧದಿಂದ ತುಂಬಿತ್ತು.

ರಾಣಿಯ ತಲೆಯಲ್ಲಿ ಹೀಗೆ ಕಳ್ಳರ ಗುಂಪು ಕುಣಿಯು

ತ್ತಿರುವಾಗ ರಾಜನ ಮನೆತನವೆಲ್ಲಾ ನಿದ್ರಿಸುತ್ತಿತ್ತು. ಕಾವಲು ಗಾರರು ಗಳಿಗೆಗಳನ್ನು ತಪ್ಪದೆ ಬಾರಿಸುತ್ತಿರಲು ಆಕಾಶ ಪ್ರಶಾಂತ ವಾಗಿ ನೋಡುತ್ತಿತ್ತು.

ಕಡೆಗೆ ಅಮೂಲ್ಯನಿಗೆ ಹೇಳಿ ಕಳುಹಿಸಿದೆ.

" ಚಳವಳಿಗೆ ಹಣಬೇಕಾಗಿದೆ. ಟ್ರೆಜರಿಯಿಂದ ತರ ಲಾರೆಯಾ ? "

" ಏಕಾಗಬಾರದು ? "—ಎಂದ.

ನಾನೂ ಸಂದೀಪನೊಡನೆ ಹೀಗೆಯೇ ಹೇಳಿದ್ದೆನಲ್ಲವೆ ? ಆದರೆ ಈ ಹುಡುಗನ ಆತ್ಮಾಭಿಮಾನ ನನ್ನಲ್ಲಿ ಆಸೆ ಹುಟ್ಟಿಸಲಿಲ್ಲ.

" ಹೇಗೆ ತರುವೆ ? "—ಎಂನು ಕೇಳಿದೆ.

ಅವನು ಹೇಳಿದ ಯೋಜನೆಗಳೆಲ್ಲಾ ಅಸಾಧ್ಯವಾದುವೆ.

" ಹುಡುಗಾಟವಾಡಬೇಡ, ಅಮೂಲ್ಯ ! " ಎಂದೆ.

" ಕಾವಲುಗಾರರಿಗೆ ಲಂಚಕೊಡೋಣ "—ಎಂದ.

" ಅದಕ್ಕೂ ಹಣ ಬೇಕಲ್ಲ."

" ಅಂಗಡಿಗಳನ್ನು ಲೂಟಿಮಾಡಿ ತರುತ್ತೇನೆ."

" ಅದೆಲ್ಲಾ ಬಿಡು. ನನ್ನ ಒಡವೆಗಳೇ ಸಾಕು,"—ಎಂದೆ.

" ಸರಾಫನಿಗೆ ಲಂಚಕೊಡಲು ಸಾಧ್ಯವಿಲ್ಲ. ಆದರೆ ಬೇರೆ ಒಂದು ಸುಲಭವಾದ ಉಪಾಯವಿದೆ."

" ಏನದು ? "

" ನಿಮಗೇಕೆ ಹೇಳಬೇಕು ? ಬಹಳ ಸುಲಭ."

" ಹೇಳು "

ಅಮೂಲ್ಯ ಜೇಬಿನಿಂದ ಗೀತೆಯ ಪುಸ್ತಕವನ್ನು ತೆಗೆದು ಮೇಜಿನ ಮೇಲಿಟ್ಟು—ಅನಂತರ ಒಂದು ಸಣ್ಣ ಪಿಸ್ತೂಲನ್ನ ತೆಗೆದು ತೋರಿಸಿದನು

ಭಯಂಕರ ! ನಮ್ಮ ಮುದಿ ಸರಾಫನನ್ನು ಕೊಲ್ಲುವುದಕ್ಕೆ ಮನಸ್ಸು ಮಾಡಲು ಇವನಿಗೆ ಕ್ಷಣಕಾಲ ಕೂಡ ಬೇಕಾಗಲಿಲ್ಲ.

ಇವನ ಮುಖ ನೋಡಿದರೆ ನೊಣವನ್ನು ಕೂಡ ಕೊಲ್ಲಲಾರದವ ನಂತಿದ್ದ ! ಆದರೆ ಅವನ ಬಾಯಿಂದ ಈ ಮಾತುಗಳು ! ಸರಾ ಘನ ಜೀವನದ ಬೆಲೆಯೇ ಅವನಿಗೆ ತಿಳಿದಿರಲಿಲ್ಲ. ನಿರ್ವೇಗ ವಾದ ಗೀತೆಯ " ದೇಹವನ್ನು ಕೊಂದರೆ ಕೊಂದಂತಲ್ಲ " ಎಂಬ ಮಾತುಗಳನ್ನು ನಂಬಿದಂತಿತ್ತು.

" ಏನಿದು ಅಮೂಲ್ಯ ? ಆ ಮುದುಕನಿಗೆ ಹೆಂಡತಿ ಮಕ್ಕಳಿದ್ದಾರೆಂದು ನಿನಗೆ ತಿಳಿಯದೆ ? "

" ಹೆಂಡತಿ ಮಕ್ಕಳಿಲ್ಲದಿರುವವರನ್ನು ಎಲ್ಲಿಂದ ತರುವುದು? ಈ ಸಹಾನುಭೂತಿ, ಆಲೋಚಿಸಿದರೆ ನಮ್ಮಲ್ಲಿ ನಮಗಿರುವ ಕರುಣೆ. ನಮ್ಮ ಕೋಮಲ ಮನಸ್ಸನ್ನು ನೋಯಿಸದಿರಲು ಬೇರೆಯವರಿಗೆ ನೋವು ಮಾಡಲು ಹೆದರುತ್ತೇವೆ. ಕರುಣೆ ! ಹೇಡಿತನ ! "

ಸಂದೀಪನ ಮಾತುಗಳನ್ನು ಈ ಚಿಕ್ಕ ಹುಡುಗನ ಬಾಯಿಂದ ಕೇಳಿ ಗಾಬರಿಯಾಯಿತು. ಒಳ್ಳೆಯದನ್ನು ನಿಜ ವಾಗಿ ಒಳ್ಳೆಯದೆಂದು ನಂಬುವ ವಯಸ್ಸು; ಬದುಕಿ ಬೆಳೆಯುವ ವಯಸ್ಸು. ಅಂತಹ ಸುಂದರ ಎಳೆತನ—ನನ್ನ ತಾಯ್ತನ ಎಚ್ಚರಗೊಂಡಿತು.

ನನಗಿನ್ನು ಒಳ್ಳೆಯದು, ಕೆಟ್ಟುದಿಲ್ಲ;—ಸಾವು, ಸುಂದರ ವಾದ, ಮೋಹಕ ಸಾಪ್ರೊಂದೇ. ಆದರೆ ಈ ಚಿಕ್ಕ ಹುಡುಗ ಆ ಮುದುಕನ ಕೊಲೆಯನ್ನು ಆವೇಗರಹಿತವಾದ ಮನಸ್ಸಿನಿಂದ ಚಿಂತಿಸಿದುದನ್ನು ನೋಡಿ ನಾನು ನಡುಗಿದೆ. ಹೃದಯದಲ್ಲಿ ಪಾಪವಿಲ್ಲದ ಆ ಹುಡುಗನ ಪಾಪಕರವಾದ ಮಾತುಗಳು ಭಯಂ ಕರವಾಗಿ ತೋರಿದುವು. ಪಿತೃಗಳ ಪಾಪ ಈ ಹುಡುಗನ ತಲೆಗೆ ಕಟ್ಟಿದಂತೆ ಭಾಸವಾಯಿತು.

ಅವನ ದೊಡ್ಡ ಕಣ್ಣುಗಳಲ್ಲಿ ಮಿಂಚುತ್ತಿದ್ದ ನಂಬಿಕೆ, ಉತ್ಸಾಹಗಳು ನನ್ನ ಹೃದಯವನ್ನು ಮುಟ್ಟಿದುವು. ಮೋಹ

ಪರವಶನಾಗಿ, ಒಳಹೊಕ್ಕರೆ ಬಿಡುಗಡೆಯಿಲ್ಲದ, ಹೆಬ್ಬಾವಿನ ದವಡೆಗಳೊಳಗೆ ಸುಗ್ಗುತ್ತಿದ್ದ. ಅವನನ್ನು ಕಾಪಾಡುವುದೆಂತು? ದೇಶ ಒಮ್ಮೆ ನಿಜವಾದ ತಾಯಿಯಾಗಿ—" ಮಗುವೆ ! ನಿನ್ನನ್ನು ನಾನು ರಕ್ಷಿಸಲಾರೆನಾದರೆ, ನೀನು ನನ್ನನ್ನು ರಕ್ಷಿಸಿ ಪ್ರಯೋಜನ ವೇನು "—ಎಂದು ಈ ಮಗುವನ್ನು ತಬ್ಬಿಕೊಳ್ಳಬಾರದೆ !

ಶನಿಮಾಹಾತ್ಮ್ಯೆಯಿಂದ ಲೋಕದ ಶಕ್ತಿಗಳು ಉಲ್ಬಣ ಗೊಳ್ಳುವುವೆಂದು ನಾನು ಬಲ್ಲೆ. ಆದರೆ ತಾಯಿ, ಏಕಾಕಿ ಯಾಗಿದ್ದರೂ, ಈ ಶನಿಯ ಉತ್ಕರ್ಷವನ್ನು ತಡೆಯಲಾರಳೆ ? ತಾಯಿಗೆ ಬರಿಯ ಸಿದ್ಧಿಯಿಂದ ಸಂತೋಷವಿಲ್ಲ. ಆಕೆ ಜೀವ ರಸ ತುಂಬಬೇಕು, ರಕ್ಷಿಸಬೇಕು. ಈ ಮಗುವನ್ನು ರಕ್ಷಿಸ ಬೇಕೆಂದು ನನ್ನ ಜೀವವಿಂದು ತುಡಿಯುತ್ತಿದೆ.

ಕೊಂಚ ಕಾಲದ ಹಿಂದೆ ಅವನನ್ನು ಕಳವು ಮಾಡಲು ಪ್ರೇರಿಸಿದೆ. ಅದು ಹೆಂಗಸಿನ ದೌರ್ಬಲ್ಯ. ಲೋಕವನ್ನು ಸಿಕ್ಕಿಸಿ ನರಳಿಸುವ ನಮ್ಮ ದೌರ್ಬಲ್ಯಕ್ಕೆ ಮನ್ನಣೆಯಿದೆ.

ಕಡೆಗೆ " ನೀನೇನೂ ಮಾಡಬೇಕಾಗಿಲ್ಲ ಅಮೂಲ್ಯ. ನಾನು ಹಣ ತರುತ್ತೇನೆ " ಎಂದೆ.

ಅವನು ಬಾಗಿಲ ಬಳಿಗೆ ಹೋಗುವಷ್ಟರಲ್ಲಿ ಹಿಂದಕ್ಕೆ ಕರೆದು ಅಮೂಲ್ಯ, ನಾನು ನಿನ್ನ ಅಕ್ಕ. ಪಂಚಾಂಗದ ಪ್ರಕಾರ ಈ ದಿನ ನಾಗಪಂಚಮಿಯಲ್ಲ: ಆದರೆ ವರ್ಷದ ಪ್ರತಿದಿನವೂ ಸೋದರರ ಹಬ್ಬವೇ. ನನ್ನ ಆಶೀರ್ವಾದ ನಿನ್ನ ಮೇಲಿದೆ. ದೇವರು ನಿನ್ನನ್ನು ಕಾಪಾಡಲಿ " ಎಂದೆ.

ಈ ಅನಿರೀಕ್ಷಿತ ಮಾತುಗಳನ್ನು ಕೇಳಿ ಅಮೂಲ್ಯನಿಗೆ ಆಶ್ಚರ್ಯವಾಯಿತು. ದಂಗು ಬಡಿದಂತೆ ನಿಂತಿದ್ದು, ನನ್ನ ಕಾಲಿಗೆ ನಮಸ್ಕರಿಸಿದನು. ಎದ್ದಾಗ ಅವನ ಕಣ್ಣು ನೀರಿನಿಂದ ತುಂಬಿತ್ತು.... ನನ್ನ ಪುಟ್ಟ ತಮ್ಮ....ನಾನು ಸಾವಿನ ಕಡೆಗೆ ಧಾವಿಸುತ್ತಿದ್ದೇನೆ. ನಿನ್ನ ಪಾಪಗಳೆಲ್ಲಾ ನನ್ನ ತಲೆಯ ಮೇಲಿ

ರಲಿ. ನನ್ನ ಪಾಪ ನಿನ್ನ ಮುಗ್ಧ ಮನಸ್ಸನ್ನು ಮಾಸದಿರಲಿ.

"ನಿನ್ನ ಕಾಣಿಕೆಯಾಗಿ ಆ ಪಿಸ್ತೂಲನ್ನು ಕೊಡು." ಎಂದೆ.

"ನಿನಗೇಕೆ ಅಕ್ಕಾ."

"ಸಾವಿನ ಅಭ್ಯಾಸ ಮಾಡಿಕೊಳ್ಳುತ್ತೇನೆ."

"ನಿಜ, ಅಕ್ಕಾ. ನಮ್ಮ ಹೆಂಗಸರಿಗೂ, ಸಾವು, ಕೊಲೆ ಅಭ್ಯಾಸವಾಗಬೇಕು." ಎಂದು ಪಿಸ್ತೂಲನ್ನು ನನ್ನ ಕೈಗೆ ಕೊಟ್ಟನು. ಅವನ ಎಳೆಯ ಮುಖದ ತೇಜಸ್ಸು ನನ್ನ ಜೀವನ ವನ್ನು ಅರುಣೋದಯದಿಂದ ತುಂಬಿತು. ಪಿಸ್ತೂಲನ್ನು ಬಟ್ಟೆ ಗಳ ನಡುವೆ ಮರೆಸಿದೆ. ಈ ಕಾಣಿಕೆ ಕೊನೆಗಾಲಕ್ಕೆ ಸಹಾಯ ವಾಗಲಿ.

ನನ್ನ ಹೃದಯದಲ್ಲಿ ತೆರೆದ ಮಾತೃ ಮಂದಿರದ ಬಾಗಿಲು ಎಂದೆಂದಿಗೂ ತೆರೆದೇ ಇರುವುದೆಂದು ಭಾವಿಸಿದೆ. ಆದರೆ ಪ್ರೇಯಸಿ ಮಾತೆಯ ಸ್ಥಳವನ್ನಾಕ್ರಮಿಸಿ ಬಾಗಿಲನ್ನು ಹಾಕಿ, ಲೋಕೋತ್ತರ ಶುಭದ ಹಾದಿಯನ್ನು ಮುಚ್ಚಿದಳು. ಮಾರನೆಯ ದಿನವೇ ಸಂದೀಪನನ್ನು ಕಂಡೆನು; ಹುಚ್ಚು—ಹದ್ದು ಮೀರಿದ, ನಾಚಿಕೆಗೆಟ್ಟ ಹುಚ್ಚು—ಹೃದಯದ ಮೇಲೆ ನರ್ತಿಸ ತೊಡಗಿತು.

ಇದೇನು? ಇದೇ ನನ್ನ ನಿಜವಾದ ವ್ಯಕ್ತಿತ್ವವೇ? ಅಲ್ಲ! ಹಿಂದೆಂದೂ ಇಂತಹ ಕ್ರೌರ್ಯ, ಲಜ್ಜೆಗೇಡಿತನ, ನನ್ನಲ್ಲಿರಲಿಲ್ಲ. ಈ ಹಾವನ್ನು ಹೊರಗೆಳೆಯುವಂತೆ ನಟಿಸಿ ಬಂದ ಹಾವಾಡಿಗನೇ ಹಾವನ್ನೂ ತಂದನು. ನನ್ನ ಕಾರ್ಯಗಳೆಲ್ಲಾ ನನ್ನನ್ನು ಹೊಕ್ಕಿರುವ ಭೂತ ಚೇಷ್ಟೆಯೇ ಹೊರತು ನನ್ನ ಕೆಲಸವಲ್ಲ.

ಆ ದಿನ ಈ ದೆವ್ವ, ದೇವತೆಯಂತೆ ರಕ್ತ ದೀಪವನ್ನು ಹಿಡಿದು ಬಂದು "ನಾನೇ ರಾಷ್ಟ್ರ; ನಾನು ನಿನ್ನ ಸಂದೀಪ; ನನ್ನಷ್ಟು ಆತ್ಮೀಯವಾದುದು ನಿನಗೆ ಬೇರೆ ಯಾವುದೂ ಇಲ್ಲ. ವಂದೇ ಮಾತರಂ," ಎಂದನು. ನಾನು ಕೈಮುಗಿದು, "ನೀನೇ

ನನ್ನ ದೇವ ; ನನ್ನ ಸ್ವರ್ಗ. ನಿನ್ನ ಪ್ರೇಮದ ಮುಂದೆ ನನ್ನ ಸರ್ವಸ್ವವೂ ಕೊಚ್ಚಿ ಹೋಯಿತು. ವಂದೇ ಮಾತರಂ ! ” ಎಂದು ಮಾರ್ನುಡಿದೆ.

ಐದು ಸಾವಿರ ಬೇಕೆ ? ಕೊಡುತ್ತೇನೆ. ನಾಳೆಯೇ ಬೇಕೆ ? ನಾಳೆಯೇ ಕೊಡುತ್ತೇನೆ. ನಿರಾಶೆಯ ಈ ಉನ್ಮತ್ತ ನೃತ್ಯದಲ್ಲಿ ಐದು ಸಾವಿರ ರೂಪಾಯಿಗಳ ಕಾಣಿಕೆ ಮದ್ಯದ ನೊರೆಯಂತೆ.— ಅನಂತರ ಆಳತೆಗೆಟ್ಟ ಆಮೋದ ? ಸ್ಥಿರ ಪ್ರಪಂಚ ನಮ್ಮ ಹೆಜ್ಜೆಯ ಕೆಳಗೆ ಓಲಾಡುವುದು, ಕಣ್ಣುಗಳಿಂದ ಕಿಡಿಗಳುದುರುವುವು, ಕಿವಿಗಳಲ್ಲಿ ಬಿರುಗಾಳಿ ಭೋರ್ಗರೆಯುವುದು, ದೃಷ್ಟಿ ಮಂಜಾಗುವುದು–ಅನಂತರ ನಡುಗುವ ಹೆಜ್ಜೆಗಳಿಂದ ಸಾವಿನ ಮುಸುಕಿನಲ್ಲಿ ಸೇರುತ್ತೇವೆ, ಅಗ್ನಿ ಅಡಗುತ್ತದೆ, ಬೂದಿ ಹರಡಿ ಬರಿದಾಗುತ್ತದೆ.

## ಅಧ್ಯಾಯ ೯

# ವಿಮಲೆಯ ಕಥೆ

### ೧೫

ಸ್ವಲ್ಪ ದಿನ, ಹಣ ಪಡೆಯುವ ವಿಧಾನ ತೋರಲೇ ಇಲ್ಲ. ಇದ್ದಕ್ಕಿದ್ದಂತೆ ಅಂದು ಉದ್ವೇಗಾವಸ್ಥೆಯಲ್ಲಿ ಎಲ್ಲವೂ ಸ್ಪಷ್ಟವಾಗಿ ತಿಳಿಯಿತು.

ಪ್ರತಿ ವರ್ಷ ದುರ್ಗಾಪೂಜೆಯ ವೇಳೆಗೆ ನನ್ನ ಪತಿ ಆರು ಸಾವಿರ ರೂಪಾಯಿಗಳನ್ನು ನನ್ನ ಓರಗಿತ್ತಿಗೆ ಕಾಣಿಕೆಯಾಗಿ ಕೊಡುತ್ತಿದ್ದರು. ಪ್ರತಿ ವರ್ಷವೂ ಅದನ್ನು ಆಕೆಯ ಹೆಸರಿನಲ್ಲಿ ಕಲ್ಕತ್ತೆಯ ಬ್ಯಾಂಕಿನಲ್ಲಿಡಲಾಗುತ್ತಿತ್ತು. ಈ ವರ್ಷ ಹಣವ ನ್ನಿನ್ನೂ ಬ್ಯಾಂಕಿಗೆ ಕಳಿಸಿರಲಿಲ್ಲ; ಕಬ್ಬಿಣದ ಪೆಟ್ಟಿಗೆಯಲ್ಲಿ ನಮ್ಮ ಕೋಣೆಯ ಪಕ್ಕದ ಕಿರುಮನೆಯಲ್ಲಿತ್ತು.

ಪ್ರತಿ ವರ್ಷವೂ ನನ್ನ ಪತಿಯೇ ಅದನ್ನು ಬ್ಯಾಂಕಿಗೆ ಕೊಂಡೊಯ್ಯುತ್ತಿದ್ದರು. ಈ ವರ್ಷ ಹೋಗಲು ಬಿಡುವಾಗಿರ ಲಿಲ್ಲ. ಇದರಲ್ಲಿ ದೇವರ ಕೈವಾಡವಿದ್ದೇ ಇರಬೇಕು. ದೇಶಕ್ಕೆ ಆ ಹಣ ಬೇಕು—ಅದನ್ನು ಬ್ಯಾಂಕಿನಲ್ಲಿಡಲು ಯಾರಿಗೆ ಸಾಧ್ಯ ? ಅದನ್ನು ತೆಗೆದುಕೊಳ್ಳದಿರಲು ನನಗೆ ಹೇಗೆ ಸಾಧ್ಯ ? ಮಹಾಕಾಳಿ ರಕ್ತ ಪಾತ್ರೆಯನ್ನು ಹಿಡಿದು, "ನನಗೆ ಬಾಯಾರಿದೆ. ಕುಡಿಯಲು ಕೊಡು," ಎಂದು ಕೂಗುತ್ತಿದ್ದಾಳೆ. ಆ ಐದು ಸಾವಿರದೊಂದಿಗೆ ಆಕೆಗೆ ನನ್ನ ಹೃದಯ ರಕ್ತವನ್ನೂ ಅರ್ಪಿಸುತ್ತೇನೆ. ತಾಯಿ, ಹಣ ಕಳೆದುಕೊಂಡವರಿಗೆ ನಷ್ಟವಾಗುವುದಿಲ್ಲ. ನಾನು ಮಾತ್ರ ನಾಶವಾಗುತ್ತೇನೆ.

ಹಿಂದೆ, ನನ್ನ ಓರಗಿತ್ತಿ ನನ್ನ ಪತಿಯಿಂದ ಹಣ ಕಸಿಯುವ ಕಳ್ಳಿಯೆಂದು ಮನಸ್ಸಿನಲ್ಲೆಂದು ಕೊಂಡಿದ್ದೆ. ಆಕೆಯ ಪತಿಯ ಮರಣಾನಂತರ ಮನೆಗೆ ಸೇರಿದ್ದ ಎಷ್ಟೋ ಪದಾರ್ಥಗಳನ್ನು

ಸ್ವಂತಕ್ಕಾಗಿ ಉಪಯೋಗಿಸಿ ಕೊಂಡಿದ್ದಳು. ನನ್ನ ಪತಿಗೆ ಈ ವಿಚಾರ ತಿಳಿಸಿದರೂ ಆತ ಸುಮ್ಮನಿರುತ್ತಿದ್ದರು. ನಾನು ಕೋಪದಿಂದ, "ಔದಾರ್ಯ ಅಷ್ಟಿದ್ದರೆ ನೀವೇ ತೆಗೆದುಕೊಡಿ. ಕಳ್ಳತನವೇಕೆ?" ಎನ್ನುತ್ತಿದ್ದೆ. ನನ್ನ ಈ ದೂರುಗಳಿಗೆ ವಿಧಿ ಎಷ್ಟು ನಕ್ಕಿತೋ; ಈ ರಾತ್ರಿ ನನ್ನ ಓರಗಿತ್ತಿಯ ಹಣ ತೆಗೆದು ಕೊಳ್ಳಲು ನನ್ನ ಪತಿಯ ಪೆಟ್ಟಿಗೆಯನ್ನು ನಾನೇ ಮುರಿಯುತ್ತಿದ್ದೇನೆ.

ನನ್ನ ಪತಿ ರಾತ್ರಿ ಬಟ್ಟೆಗಳನ್ನು ಬದಲಾಯಿಸಿದಾಗ ಬೀಗದ ಕೈಗಳನ್ನು ಜೇಬಿನಲ್ಲೇ ಬಿಡುತ್ತಿದ್ದರು. ನಾನು ತೆಗೆದು ಕೊಂಡು ಪೆಟ್ಟಿಗೆಯನ್ನು ತೆಗೆದೆ. ಅದರಿಂದಾದ ಸ್ವಲ್ಪ ಶಬ್ದ ಬ್ರಹ್ಮಾಂಡನನ್ನೇ ಭೇದಿಸಿದಂತಿತ್ತು. ನನ್ನ ಕೈಕಾಲುಗಳು ತಣ್ಣಗಾಗಿ ನಡುಕ ಹುಟ್ಟಿತು.

ಪೆಟ್ಟಿಗೆಯಲ್ಲಿದ್ದ ಒಂದು ಖಾನೆಯಲ್ಲಿ ಹಣವಿತ್ತು. ಕಾಗದದ ಹಣವಲ್ಲ; ಕಾಗದದಲ್ಲಿ ಸುತ್ತಿದ್ದ ಚಿನ್ನದ ನಾಣ್ಯಗಳು. ಎಣಿಸಲು ಹೊತ್ತಿರಲಿಲ್ಲ. ಅಲ್ಲಿದ್ದ ಇಪ್ಪತ್ತು ಸುರುಳಿಗಳನ್ನೂ ಸೆರಗಿನಲ್ಲಿ ಕಟ್ಟಿಕೊಂಡೆ.

ಎಷ್ಟುಭಾರ! ದುಷ್ಕೃತ್ಯದ ಭಾರ ನನ್ನ ಹೃದಯವನ್ನು ಪುಡಿಮಾಡುತ್ತಿತ್ತು. ಕಾಗದದ ಹಣವಾಗಿದ್ದರೆ ಕಳ್ಳತನವೆಂದು ತೋರುತ್ತಿರಲಿಲ್ಲವೇನೋ! ಇವೆಲ್ಲಾ ಚಿನ್ನ.

ಕಳ್ಳಿಯಂತೆ ಕೊಠಡಿಯನ್ನು ಹೊಕ್ಕಾಗ ಅದು ನನ್ನ ಕೊಠಡಿಯೇ ಅಲ್ಲವೆಂದು ತೋರಿತು. ಕಳ್ಳತನದಿಂದ ಅದರ ಮೇಲಿನ ಸ್ವಾಮ್ಯವನ್ನು ಕಳೆದುಕೊಂಡಿದ್ದೆ. ಮಂತ್ರ ಹೇಳುವಂತೆ "ವಂದೇ ಮಾತರಂ, ವಂದೇ ಮಾತರಂ, ನನ್ನ ದೇಶ, ನನ್ನ ಸ್ವರ್ಣಭೂಮಿ, ಈ ಚಿನ್ನವೆಲ್ಲ ನಿನ್ನದು. ಬೇರೆ ಯಾರದೂ ಅಲ್ಲ." ಎಂದು ಹೇಳಿಕೊಂಡೆ.

ರಾತ್ರಿ ಮನಸ್ಸು ದುರ್ಬಲ. ನನ್ನ ಪತಿ ಮಲಗಿದ್ದ

ಕೋಣೆಯನ್ನು ಕಣ್ಣುಮುಚ್ಚಿ ದಾಟಿ ಹೊರಗಡೆ ಮಾಳಿಗೆಯ ಮೇಲೆ ಚಿನ್ನವನ್ನು ಎದೆಗಪ್ಪಿಕೊಂಡು ಮಲಗಿದೆ. ಒಂದೊಂದು ಸುರುಳಿಯೂ ನೋವಿನ ಆಘಾತವನ್ನುಂಟುಮಾಡುತ್ತಿತ್ತು.

ಬೆರಳನ್ನೆತ್ತಿ ರಾತ್ರಿ ಮೌನವಾಗಿ ನಿಂತಿತ್ತು. ನನ್ನ ಮನೆ ದೇಶದಿಂದ ಬೇರೆ ಎಂದೆಣಿಸಲಿಲ್ಲ. ಮನೆಯಲ್ಲಿ ಕದ್ದರೆ ದೇಶ ದಲ್ಲಿ ಕದ್ದಂತೆ. ಈ ಪಾಪದಿಂದ ಮನೆಯೂ ದೇಶವೂ ನನ್ನನ್ನು ಹೊರದೂಡಿದ್ದವು. ದೇಶಕ್ಕಾಗಿ ಭಿಕ್ಷೆ ಬೇಡುತ್ತಾ ಸತ್ತಿದ್ದರೆ, ಅದು ಪೂಜೆ, ಭಗವಂತ ಸ್ವೀಕರಿಸುತ್ತಿದ್ದನು. ಆದರೆ ಕಳ್ಳತನ ವೆಂದಿಗೂ ಪೂಜೆಯಲ್ಲ;–ಇನ್ನು ಈ ಚಿನ್ನವನ್ನು ಅರ್ಪಿಸುವುದು ಹೇಗೆ ? ಸಾವಿಗೆ ಸಮರ್ಪಿತಳಾಗಿರುವ ನಾನು ನನ್ನ ಪಾಪಸ್ಪರ್ಶ ದಿಂದ ದೇಶವನ್ನು ಅಪವಿತ್ರಗೊಳಿಸಬೇಕೆ ?

ಹಣ ಹಿಂದಕ್ಕಿಡುವಂತಿಲ್ಲ. ಪುನಃ ಆ ಕೋಣೆಗೆ ಹೋಗಿ, ಬೀಗ ತೆಗೆದು ಹಣವನ್ನಿಡುವ ಶಕ್ತಿ ನನಗಿಲ್ಲ.–ಹಿಂದಿರುಗಿದರೆ, ನನ್ನ ಪತಿಯ ಕೋಣೆಯ ಹೊಸಲಿನ ಮೇಲೆ ಮೂರ್ಛೆ ಬಿದ್ದೇನು. ಮುಂದಿನ ಹಾದಿಯೇ ಗತಿ. ಹಣವನ್ನೆಣಿಸುವ ಶಕ್ತಿಯೂ ಇಲ್ಲ. ಮುಸುಕಿನಲ್ಲಿರಲಿ. ಎಣಿಸಲಾರೆ.

ಆಕಾಶದಲ್ಲಿ ಮಂಜಿರಲಿಲ್ಲ. ನಕ್ಷತ್ರಗಳು ಬೆಳಗುತ್ತಿದ್ದುವು. ನಾನು ಯೋಚಿಸಿದೆ: ನಾಣ್ಯಗಳಂತೆ ಕತ್ತಲು ಕಾಪಾಡಿಕೊಂಡಿ ರುವ ಈ ತಾರೆಗಳನ್ನು ದೇಶಕ್ಕೋಸ್ಕರ ಕದ್ದರೆ ಆಕಾಶ ಬರಿ ದಾಗುವುದು. ರಾತ್ರಿ ವಿಧವೆಯಾಗುವುದು. ನನ್ನ ಕಳ್ಳತನ ಲೋಕವನ್ನೇ ಬರಿದು ಮಾಡುವುದು. ನಾನು ಮಾಡಿದ್ದೂ ಇದೇ ಅಲ್ಲವೆ ?–ಲೋಕದಿಂದ ಹಣವನ್ನೊಂದೇ ಅಲ್ಲ; ನಂಬಿಕೆ ನ್ಯಾಯಗಳನ್ನೂ ಅಪಹರಿಸಿದ್ದೇನಲ್ಲವೆ ?

ರಾತ್ರಿಯೆಲ್ಲಾ ಅಲ್ಲೇ ಮಲಗಿದ್ದೆ. ಬೆಳಗ್ಗೆ ನನ್ನ ಪತಿ ಎದ್ದು ಹೋಗಿದ್ದಾರೆಂದು ಖಂಡಿತವಾದ ಮೇಲೆ, ತಲೆಯ ಮೇಲೆ ಶಾಲನ್ನೆಳೆದುಕೊಂಡು ಕೊಠಡಿಯೊಳಕ್ಕೆ ಹೋದೆ.

ನನ್ನ ಓರಗಿತ್ತಿ ಬಿಂದಿಗೆಯಿಂದ ಗಿಡಗಳಿಗೆ ನೀರೆರೆಯು ತ್ತಿದ್ದಳು. ನನ್ನನ್ನು ನೋಡಿ "ವರ್ತಮಾನ ತಿಳಿಯಿತೇ, ಚಿಕ್ಕ ರಾಣಿ?" ಎಂದು ಕೂಗಿದಳು.

ನಾನು ನಡುಗುತ್ತಾ ನಿಂತೆ. ಶಾಲುವಿನೊಳಗೆ ನಾಣ್ಯ ಎದ್ದು ಕಾಣುತ್ತಿರುವಂತೆ ತೋರಿತು. ಎಲ್ಲವೂ ನೆಲದಮೇಲೆ ಚೆಲ್ಲಿ ತನ್ನ ಸಂಪತ್ತನ್ನೇ ಕದ್ದ ಕಳ್ಳಿಯನ್ನು ಸೇವಕರೆಲ್ಲಾ ನೋಡುವಂತಾಗುವುದೆಂದೂ ಹೆದರಿದೆ.

"ನಿನ್ನ ಕಳ್ಳರು ಟ್ರೆಜರಿಯನ್ನು ಲೂಟಿಮಾಡುವುದಾಗಿ ಹೆದರಿಸಿ ಕಾಗದ ಬರೆದಿದ್ದಾರೆ."

ನಾನು ಕಳ್ಳಿಯಂತೆ ನಿಶ್ಶಬ್ದವಾಗಿ ನಿಂತಿದ್ದೆ.

ಆಕೆ ಅಣಕಿಸುತ್ತಾ, "ನಿಖಿಲ ನಿನ್ನ ಮರೆ ಹೋಗ ಬೇಕೆಂದು ಹೇಳಿದೆ. ನಿನ್ನ ಕಳ್ಳರನ್ನು ಕರೆಯಮ್ಮಾ, ಕಳ್ಳರ ರಾಣಿ! ನಮ್ಮನ್ನು ಕಾಪಾಡಿದರೆ ನಿನ್ನ ವಂದೇ ಮಾತರಂಗೆ ಬಲಿ ಅರ್ಪಿಸುತ್ತೇವೆ. ಏನೇನು ವಿಚಿತ್ರಗಳು ನಡೆಯುತ್ತಿವೆ! ಸಧ್ಯ, ಮನೆಯನ್ನು ಕಳ್ಳರಿಂದ ರಕ್ಷಿಸಮ್ಮಾ," ಎಂದಳು.

ನಾನು ಮಾತನಾಡದೆ ಕೋಣೆಗೆ ಹೋದೆ. ಸುಳಿಯಲ್ಲಿ ಕಾಲಿಟ್ಟ ನಾನು ಹಿಂದಕ್ಕೆಳೆದುಕೊಳ್ಳುವಂತಿರಲಿಲ್ಲ. ಒದ್ದಾಡಿ ದರೆ ಇನ್ನೂ ಒಳಕ್ಕೆ ಮುಳುಗಬಹುದು.

ಹಣವನ್ನು ಸಂದೀಪನಿಗೆ ಕೊಟ್ಟು ಮುಗಿದರೆ! ಅದರ ಭಾರ ಪಕ್ಕೆಗಳನ್ನು ಪುಡಿಮಾಡುತ್ತಿತ್ತು. ತಡೆಯಲಾರದೆ ಹೋದೆ.

ಸಂದೀಪ ಕಾದಿದ್ದಾನೆಂದು ಸುದ್ದಿ ಬರಲು ಹೊತ್ತಾಗ ಲಿಲ್ಲ. ಈದಿನ ಅಲಂಕಾರದ ಆಲೋಚನೆ ನನಗಿರಲಿಲ್ಲ. ಶಾಲು ಹೊದ್ದುಕೊಂಡೇ ಹೊರಗೆ ಹೋದೆ.

ಹೊರಗಿನ ಕೋಣೆಯಲ್ಲಿ ಸಂದೀಪ ಅಮೂಲ್ಯರಿಬ್ಬರೂ ಇದ್ದರು. ನನ್ನ ಗಾಂಭೀರ್ಯ, ಮರ್ಯಾದೆ ಎಲ್ಲಾ ತಲೆಯಿಂದ ಕಾಲಿಗೆ ಹರಿದು ನೆಲದಲ್ಲಿ ಮಾಯವಾದಂತೆ ತೋರಿತು. ಈ

ಹುಡುಗನೆದುರು ಹೆಂಗಸಿನ ಅವಮಾನದ ಪರಮಾವಧಿಯನ್ನು ಬಿಚ್ಚಿ ಹರಡಬೇಕಾಗಿತ್ತು.

ಇಬ್ಬರೂ ನನ್ನ ಕೃತ್ಯವನ್ನು ಕುರಿತು ಚರ್ಚಿಸುತ್ತಿದ್ದರೆ? ಸಭ್ಯತೆಯ ಮುಸುಕಿನ ಕುರುಹಾದರೂ ನನಗೆ ಉಳಿದಿತ್ತೆ?

ಹೆಂಗಸರಿಗೆ ಗಂಡಸರ ಸ್ವಭಾವವೆಂದಿಗೂ ಅರ್ಥವಾಗುವುದಿಲ್ಲ. ಅವರು ಸಾಧನೆಯ ಹಾದಿಯಲ್ಲಿ ನುಗ್ಗುತ್ತಿರುವಾಗ ಲೋಕದ ಹೃದಯವನ್ನು ಮುರಿದು ರಥಚಕ್ರದ ಕೆಳಗೆ ಹಾಕಲು ಹಿಂಜರಿಯುವುದಿಲ್ಲ. ಸೃಷ್ಟಿಯ ಹುಚ್ಚಿನಲ್ಲಿ ಸೃಷ್ಟಿಕರ್ತನ ಕೈಗೆಲಸವನ್ನು ನಾಶಮಾಡಿ ಹಿಗ್ಗುತ್ತಾರೆ. ಎದೆ ಬಿರಿಯುವ ನನ್ನ ಅವಮಾನ ಅವರ ಗಮನಕ್ಕೇ ಬರುವುದಿಲ್ಲ ಜೀವಕ್ಕೇ ಬೆಲೆಯಿಲ್ಲ ಅವರ ದೃಷ್ಟಿಯಲ್ಲಿ---ಅವರ ಧ್ಯೇಯ ಸಾಧನೆಯಾದರೆ ಸರಿ. ಅವರ ಪಾಲಿಗೆ ಭೋರ್ಗರೆಯುವ ಪ್ರವಾಹದ ಗತಿಯಲ್ಲಿರುವ ಒಂದು ಸಣ್ಣ ಹೂ ನಾನು.

ನನ್ನ ನಾಶದಿಂದ ಸಂದೀಪನಿಗೇನು ಲಾಭ? ಐದು ಸಾವಿರ ರೂಪಾಯಿ ಮಾತ್ರವೆ? ಅದಕ್ಕಿಂತ ಹೆಚ್ಚಿನ ಬೆಲೆ ನನಗಿಲ್ಲವೆ? ನಿಜ! ಸಂದೀಪನಿಂದ ಕಲಿತ ನಾನು ನನ್ನ ಪ್ರಪಂಚದ ಎಲ್ಲಾ ವಸ್ತುಗಳನ್ನೂ ಅಲ್ಲಗಳೆಯಲು ಶಕ್ತಳಾಗಲಿಲ್ಲವೆ? ಬೆಳಕು, ಜೀವ, ಶಕ್ತಿ ಅಮೃತತ್ವವನ್ನು ಕೊಟ್ಟವಳು ನಾನು-ಆ ನಂಬಿಕೆಯಲ್ಲಿ, ಆನಂದದಲ್ಲಿ, ಸಕಲ ಸಂಕೋಲೆಗಳನ್ನೂ ಹರಿದು ಹೊರಬಂದೆ. ಆ ಆನಂದವನ್ನು ಯಾರಾದರೂ ತೃಪ್ತಿಪಡಿಸಿದ್ದರೆ ಸಾವಿನಲ್ಲಿ ಜೀವವನ್ನು ಕಾಣುತ್ತಿದ್ದೆ. ಸರ್ವಸ್ವವೂ ನಾಶವಾಗಿದ್ದರೂ ಏನನ್ನೂ ಕಳೆದುಕೊಂಡಂತಿರಲಿಲ್ಲ.

ಇದೆಲ್ಲಾ ಸುಳ್ಳೆ? ಭಕ್ತಿಯಿಂದ ಹಾಡಿದ ನನ್ನ ಸ್ತೋತ್ರ, ಸ್ವರ್ಗದಿಂದ ನನ್ನನ್ನಿಳಿಸಿದುದು, ಭೂಮಿಯನ್ನು ಸ್ವರ್ಗವಾಗಿ ಮಾಡುವುದಕ್ಕೋ ಅಥವಾ ಸ್ವರ್ಗವನ್ನೇ ಧೂಳಿನಲ್ಲಿ ಬೆರಸುವುದಕ್ಕೋ?

## ೧೬

ಸಂದೀಪ ತೀಕ್ಷ್ಣವಾಗಿ ನನ್ನ ಕಡೆ ನೋಡುತ್ತಾ “ ರಾಣಿ, ಹಣವೆಲ್ಲಿ ” ಎಂದ. ಅಮೂಲ್ಯನೂ ನನ್ನಕಡೆ ನೋಡಿದ. ಅವನು ನಿಜವಾಗಿ ನನ್ನ ಸೋದರನಲ್ಲದಿದ್ದರೂ ಹಾಗೆಯೇ ಭಾವಿಸಿದ್ದೆ. ತಾಯಿ, ಲೋಕದಲ್ಲೆಲ್ಲಾ ತಾಯಿಯೇ. ಮುಗ್ಧ ಮುಖದ ಮಾರ್ದವ ದೃಷ್ಟಿಯಿಂದ ಆ ಎಳೆಯ ಹುಡುಗ ನನ್ನ ಕಡೆ ನೋಡಿದನು. ನಾನು, ಹೆಂಗಸು--ಅವನ ತಾಯಿಯಂ ತೆಯೇ ಹೆಂಗಸು—ಅವನು ಕೇಳಿದನೆಂದು ಅವನ ಕೈಗೆ ವಿಷ ಕೊಡುವುದೇ ?

ಸಂದೀಪನ ಸೊಕ್ಕಿನ, “ ಹಣವೆಲ್ಲಿ ? ” ಎಂಬ ಮಾತು ನನ್ನ ಕಿವಿಯಲ್ಲಿ ಭೋರ್ಗರೆಯುತ್ತಿತ್ತು. ಹಣವನ್ನು ಅವಮಾನ ದಿಂದ ರೋಷದಿಂದ ಅವನ ತಲೆಯ ಮೇಲೆಸೆಯಬೇಕೆನ್ನಿಸಿತು.

ಸೆರಗಿನ ಗಂಟನ್ನು ಬಿಚ್ಚಲಾರದಷ್ಟು ಮಟ್ಟಿಗೆ ಬೆರಳುಗಳು ನಡುಗುತ್ತಿದ್ದುವು. ಕಾಗದದ ಸುರುಳಿಗಳು ಮೇಜಿನ ಮೇಲು ರುಳಿದುವು.

ಸಂದೀಪನ ಮುಖ ಕೋಪದಿಂದ ಕಪ್ಪಾಯಿತು....ಅವು ಬೆಳ್ಳಿಯ ನಾಣ್ಯಗಳೆಂದು ಅವನು ಭಾವಿಸಿರಬೇಕು. ಅವನ ದೃಷ್ಟಿಯಲ್ಲಿ ಅದೆಷ್ಟು ತಿರಸ್ಕಾರ ತುಂಬಿತ್ತು. ಕೈಲಾಗದವ ಳೆಂದು ಎಷ್ಟು ಬೇಸರ ? ಹೊಡೆಯಬೇಕೆನ್ನುವಷ್ಟು ಕೋಪ ಅವನಿಗೆ ಬಂದಿತ್ತು. ಮಾತನಾಡಿ, ಸಾವಿರಗಳಿಗೆ ಬದಲು ನೂರಾರು ರೂಪಾಯಿಗಳು ಕೊಡಲು ಬಂದೆನೆಂದು ಅವನು ಭಾವಿಸಿರಬೇಕು. ಹಣವನ್ನು ತೆಗೆದು ಕಿಟಕಿಯಿಂದ ಬಿಸಾಡಿ, ತಾನು ಭಿಕ್ಷುಕನಲ್ಲವೆಂದೂ, ಕಾಣಿಕೆ ಕೇಳುತ್ತಿರುವ ರಾಜನೆಂದು ಹೇಳುವನೆಂದೂ ತೋರಿತು.

“ ಇಷ್ಟೇನೆ ? ”—ಅಮೂಲ್ಯನ ಧ್ವನಿಯಲ್ಲಿದ್ದ ಸಹಾನು

ಭೂತಿಯಿಂದ ನನಗೆ ದುಃಖ ಉಕ್ಕಿಬರುವಂತಾಯಿತು. ಹೃದಯ ವನ್ನು ಒತ್ತಿಹಿಡಿದು ತಲೆಯಾಡಿಸಿದೆ.

ಸಂದೀಪ ಮಾತನಾಡಲಿಲ್ಲ. ಹಣಮುಟ್ಟಲಿಲ್ಲ.

ನನ್ನ ಅವಮಾನ ನೋಡಿ ಮನಕರಗಿ ಅಮೂಲ್ಯ ಉತ್ಸಾಹ ವನ್ನು ನಟಿಸುತ್ತಾ, " ಬೇಕಾದಷ್ಟಾಯಿತು. ನಮ್ಮನ್ನು ಉಳಿಸಿ ದಿರಿ " ಎಂದು ಒಂದು ಸುರುಳಿಯನ್ನು ಬಿಚ್ಚಿದನು.

ಸವರನ್‌ಗಳು ಹೊಳೆದುವು ; ಸಂದೀಪನ ಮುಖದಿಂದ ಕಾರ್ಮೋಡ ಕರಗಿತು. ಮುಖ ಆನಂದದಿಂದ ತುಂಬಿತು. ಮನಸ್ಸಿನಲ್ಲಾದ ಬದಲಾವಣೆ ತಡೆಯಲಾರದೆ ನನ್ನ ಕಡೆಗೆ ನುಗ್ಗಿದನು. ಅವನ ಅಭಿಪ್ರಾಯವೇನೋ ನಾನರಿಯೆ ; ಅಮೂಲ್ಯನ ಕಡೆ ನೋಡಿದೆ ; ಚಾವಟಿಯಿಂದ ಏಟು ತಿಂದ ಹಾಗೆ ಅವನ ಮುಖ ಬಿಳಿಚಿಕೊಂಡಿತ್ತು. ಶಕ್ತಿಯನ್ನೆಲ್ಲಾ ಉಪಯೋಗಿಸಿ ಸಂದೀಪನನ್ನು ಹಿಂದಕ್ಕೆ ತಳ್ಳಿದೆ. ಮೇಜಿಗೆ ತಲೆ ಹೊಡೆದು ಕೆಳಗೆ ಅಲುಗಾಡದೆ ಬಿದ್ದನು. ಆಯಾಸದಿಂದ ನಾನೂ ಕುರ್ಚಿಯ ಮೇಲೊರಗಿದೆ

ಅಮೂಲ್ಯನ ಮುಖ ಆನಂದದಿಂದ ಅರಳಿತು. ಸಂದೀಪನ ಕಡೆ ನೋಡದೆ, ನನ್ನ ಕಾಲಿನ ಬಳಿ ಬಂದು ಕುಳಿತನು. ಅಯ್ಯೋ ಮಗುವೇ, ಸೋದರನೇ ! ನಿನ್ನ ಈ ಭಕ್ತಿಯೊಂದೇ ಬರಿದಾದ ನನ್ನ ಜಗತ್ತಿನಲ್ಲಿ ಉಳಿದಿರುವ ಸ್ವರ್ಗಸ್ಪರ್ಶ. ತಡೆಯಲಾರದೆ, ಕಣ್ಣುಗಳು ತುಂಬಿ ಬಂದುವು. ಮುಖವನ್ನು ಸೀರೆಯಿಂದ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತೆ. ಅಮೂಲ್ಯ ಸಮಾಧಾನ ಪಡಿಸಲು ಪ್ರಯತ್ನಿಸಿದಷ್ಟಕ್ಕೂ ನನ್ನ ದುಃಖ ಹೆಚ್ಚಿತು.

ಸ್ವಲ್ಪ ಹೊತ್ತಾಗಿ ನಾನು ಮುಖದಿಂದ ಕೈಗಳನ್ನು ತೆಗೆ ಯಲು, ಸಂದೀಪ ಏನೂ ನಡೆಯದಂತೆ ನಾಣ್ಯಗಳನ್ನು ಕೈಚೌಕ ದಲ್ಲಿ ಕಟ್ಟುತ್ತಿರುವುದನ್ನು ನೋಡಿದೆ. ಅಮೂಲ್ಯ ಎದ್ದ ; ಒದ್ದೆ ಯಾದ ಅವನ ಕಣ್ಣುಗಳು ಹೊಳೆಯುತ್ತಿದ್ದುವು.

ಸಂದೀಪ ನನ್ನ ಕಡೆ ನೋಡಿ "ಆರು ಸಾವಿರವಿದೆ," ಎಂದನು.

"ಅಷ್ಟೇಕೆ, ಸಂದೀಪಬಾಬು? ಮೂರು ಸಾವಿರದೈನೂರಾದರೆ ನಮ್ಮ ಕೆಲಸಕ್ಕೆ ಸಾಕು," ಅಮೂಲ್ಯನೆಂದನು.

ಸಂದೀಪ, "ಇಲ್ಲಿಯ ಕೆಲಸವೊಂದೇ ಅಲ್ಲ. ನಮಗೆಷ್ಟು ಹಣ ಸಿಕ್ಕಿದರೂ ಬೇಕು."

ಅಮೂಲ್ಯ "ಇರಬಹುದು, ನಿಮಗೆಷ್ಟು ಬೇಕೋ ನಾನು ತಂದು ಕೊಡುತ್ತೇನೆ. ಇದರೊಳಗೆ ಹೆಚ್ಚಾಗಿರುವ ಎರಡು ಸಾವಿರದ ಐನೂರು ರೂಪಾಯಿಗಳನ್ನು ಮಹಾರಾಣಿಯವರಿಗೆ ಹಿಂದಕ್ಕೆ ಕೊಟ್ಟು ಬಿಡಿ, ಸಂದೀಪಬಾಬು."

ಸಂದೀಪ ನನ್ನ ಕಡೆ ನೋಡಿದನು. ನಾನು, "ಬೇಡ, ಬೇಡ, ಆ ಹಣವನ್ನು ನಾನು ಪುನಃ ಮುಟ್ಟಲಾರೆ. ಬೇಕಾದ್ದು ಮಾಡಿಕೊಳ್ಳಿ," ಎಂದೆ.

ಸಂದೀಪ ಅಮೂಲ್ಯನ ಕಡೆ ತಿರುಗಿ, "ಹೆಂಗಸರು ಕೊಡುವಂತೆ ಗಂಡಸರಿಗೆ ಸಾಧ್ಯವೆ?" ಎಂದನು.

"ಅವರು ದೇವತೆಗಳು," ಉತ್ಸಾಹದಿಂದ ಅಮೂಲ್ಯ ಉದ್ಗರಿಸಿದನು. ಸಂದೀಪ, "ಪುರುಷರು ಹೆಚ್ಚೆಂದರೆ ಶಕ್ತಿಯನ್ನು ನೀಡಬಲ್ಲರು. ಸ್ತ್ರೀಯರು ತಮ್ಮನ್ನೇ ಅರ್ಪಿಸುತ್ತಾರೆ. ಜೀವವನ್ನೇ ಕೊಟ್ಟು ಸೃಷ್ಟಿಸುತ್ತಾರೆ, ಬೆಳೆಸುತ್ತಾರೆ. ಅದೇ ನಿಜವಾದ ಕಾಣಿಕೆ," ಎಂದು ನನ್ನ ಕಡೆ ತಿರುಗಿ, "ರಾಣಿ! ನೀನು ಕೊಟ್ಟಿರುವುದು ಬರಿಯ ಹಣವಾಗಿದ್ದರೆ ನಾನು ಮುಟ್ಟುತ್ತಿರಲಿಲ್ಲ. ಜೀವಕ್ಕಿಂತ ಹೆಚ್ಚಾದ ವಸ್ತುವನ್ನು ಕೊಟ್ಟಿದ್ದೀಯೆ" ಎಂದನು.

ಮನುಷ್ಯರು ಎರಡು ಬೇರೆ ಬೇರೆ ವ್ಯಕ್ತಿಗಳಿಂದ ಕೂಡಿರಬೇಕು. ನನ್ನಲ್ಲಿಯ ಒಂದು ಭಾಗಕ್ಕೆ ಸಂದೀಪ ಮೋಸ ಮಾಡುತ್ತಿದ್ದಾನೆಂದು ಅರ್ಥವಾಯಿತು. ಮತ್ತೊಂದು ಭಾಗ ಮೋಸ

ಹೋಗಲು ಒಪ್ಪಿಕೊಂಡಿತ್ತು. ಸಂದೀಪನಿಗೆ ಶಕ್ತಿಯಿತ್ತು : ಧರ್ಮ ಬಲವಿರಲಿಲ್ಲ. ಜೀವವನ್ನು ಸೃಷ್ಟಿಸುವ ಅವನ ಆಯುಧವೇ ಅದನ್ನು ಕೊಲ್ಲುತ್ತದೆ. ದೇವತೆಗಳ ಬತ್ತಳಿಕೆಯಲ್ಲಿ ಪಿಶಾಚಿಗಳ ಬಾಣಗಳನ್ನಿಟ್ಟು ಕೊಂಡಿದ್ದಾನೆ.

ಸಂದೀಪನ ಕೈಚೌಕದಲ್ಲಿ ನಾಣ್ಯಗಳೆಲ್ಲಾ ಹಿಡಿಸಲಿಲ್ಲ. " ಇನ್ನೊಂದು ಕೈ ಚೌಕವಿದೆಯೇ ? " ನನ್ನನ್ನು ಕೇಳಿದನು.

ನನ್ನ ಕೈ ಚೌಕ ಕೊಟ್ಟಾಗ ತಲೆಯ ಮೇಲಿಟ್ಟುಕೊಂಡು ಮಂಡಿಯೂರಿ ನಮಸ್ಕರಿಸಿದನು. " ದೇವಿ, ನಮಸ್ಕರಿಸಲೆಂದು ಹತ್ತಿರ ಬಂದ ನನ್ನನ್ನು ಧೂಳಿನಲ್ಲಿ ಉರುಳಿಸಿದೆ. ನೀನು ನೂಕಿದರೂ ನನ್ನನ್ನು ಪುರಸ್ಕರಿಸಿದಂತೆಯೇ. ತಲೆಯ ಮೇಲೆ ನಿನ್ನ ವರವನ್ನು ಧರಿಸಿದ್ದೇನೆ." ಎಂದು ತಾಗಿದ ಸ್ಥಳವನ್ನು ತೋರಿಸಿದನು.

ನನಗೇ ಅವನ ಅಭಿಪ್ರಾಯ ಅರ್ಥವಾಗಲಿಲ್ಲವೋ ! ಅವನು ನಿಜವಾಗಿ ನಮಸ್ಕರಿಸಲೆಂದೇ ಹತ್ತಿರ ಬಂದಿದ್ದನೋ ? ಅಮೂಲ್ಯ ಕೂಡ ಅವನ ಕಣ್ಣುಗಳಲ್ಲಿ, ಮುಖದಲ್ಲಿ ಮಿಂಚಿದ ಆತುರವನ್ನು ಕಂಡಿದ್ದನು. ಸಂದೀಪನೊಡನೆ ಚರ್ಚಿಸಲು ನನಗೆ ಸಾಧ್ಯವಿಲ್ಲ; ಸ್ತೋತ್ರದಲ್ಲಿ ಗಾನ ಬೆರೆಸುವುದರಲ್ಲಿ ಅವನು ನಿಪುಣ ; ನನಗೆ ಸತ್ಯ ಅಸ್ಪಷ್ಟವಾಗುತ್ತದೆ ; ಅಫೀಮು ತಿಂದವನಂತೆ ನನ್ನ ದೃಷ್ಟಿ ಮಸಕಾಗುತ್ತದೆ. ಕಡೆಗೆ ನಾನು ಕೊಟ್ಟ ಏಟಿಗೆ ಎರಡರಷ್ಟು ಪ್ರತಿಫಲ ನನಗೆ ಕೊಟ್ಟ ; ಅವನ ತಲೆಯ ಗಾಯದಿಂದ ನನ್ನ ಹೃದಯ ರಕ್ತ ಕಾರಿತು. ಸಂದೀಪ ನಮಸ್ಕರಿಸಿದ ಮೇಲೆ, ನನ್ನ ಕಳ್ಳತನಕ್ಕೂ ಗಾಂಭೀರ್ಯ ಬಂತು. ಮೇಜಿನ ಮೇಲಿದ್ದ ಚಿನ್ನ ಅವಮಾನವನ್ನೂ, ಆತ್ಮ ಸಾಕ್ಷಿಯ ನೋವನ್ನೂ ಮರೆಸುವಂತೆ ನಗುತ್ತಿದ್ದಿತು.

ಅಮೂಲ್ಯನ ಅನುಮಾನವು ಪರಿಹಾರವಾಯಿತು. ಸಂದೀಪನಲ್ಲಿ ಅವನಿಗಿದ್ದ ಭಕ್ತಿ ಪುನಃ ಹೆಚ್ಚಿತು. ಸಂದೀಪನನ್ನೂ

ನನ್ನನ್ನೂ ಪೂಜಿಸಲು ಅವನ ಚಿತ್ತ ಪಾತ್ರೆ ಹೂಗಳಿಂದ ತುಂಬಿತು. ಬೆಳಗಿನ ತಾರೆಯಂತೆ ಅವನ ಕಣ್ಣು ಶ್ರದ್ಧೆಯಿಂದ ರಂಜಿಸಿತು. ಅರ್ಚನೆಯಿಂದ, ಅರ್ಚಿಸಿಕೊಂಡು, ನನ್ನ ದುಷ್ಕೃತ್ಯ ಬೆಳಗ ತೊಡಗಿತು. ಅಮೂಲ್ಯ ನನ್ನ ಕಡೆ ತಿರುಗಿ ಕೈ ಜೋಡಿಸಿ, ' ವಂದೇ ಮಾತರಂ ' ಎಂದನು. ಈ ಭಕ್ತಿ ನನ್ನನ್ನು ಎಂದೆಂದಿಗೂ ಸುತ್ತುವರಿದಿರುವುದಿಲ್ಲ ; ಆದರೆ ಇದರಿಂದಲೇ ನನ್ನ ಆತ್ಮ ವಿಶ್ವಾಸ ಉಳಿದಿರುವುದು.

ನನ್ನ ಮಲಗುವ ಕೋಣೆಯೊಳಕ್ಕೆ ಹೋಗಲು ಸಾಧ್ಯವಿಲ್ಲ. ಮಂಚ ಹೊರದೂಡುತ್ತದೆ, ಕಬ್ಬಿಣದ ಪೆಟ್ಟಿಗೆ ಸಿಡುಕುತ್ತದೆ. ಈ ಉರಿಯುತ್ತಿರುವ ಅವಮಾನದಿಂದ ತಪ್ಪಿಸಿಕೊಳ್ಳಬೇಕು. ಸಂದೀಪನ ಬಳಿಗೋಡಿ ಸ್ತೋತ್ರಗಳನ್ನಾಲಿಸಬೇಕೆನ್ನಿಸುತ್ತದೆ. ಅವಮಾನದ ಆಳದಿಂದ ತಲೆಯೆತ್ತಿ ನಿಂತಿರುವುದು ಅದೊಂದು ಪೂಜಾಪೀಠ. ಹಗಲಿರುಳೂ ಅದನ್ನೇ ಆತುಕೊಳ್ಳಬೇಕೆನ್ನಿಸುತ್ತದೆ. ಬೇರೆ ಯಾವ ಕಡೆ ಹೋದರೂ ಶೂನ್ಯ.

ಸ್ತೋತ್ರ, ಕೊನೆ ಮೊದಲಿಲ್ಲದ ಸ್ತೋತ್ರ ಬೇಕು. ನನ್ನ ಮದ್ಯ ಪಾತ್ರೆ ಅರೆಗಳಿಗೆ ಬರಿದಾದರೆ ನಾನುಳಿಯಲಾರೆ. ಆದರಿಂದಲೇ ಜೀವ ಹೋದರೂ, ಈ ದಿನ ಲೋಕದಲ್ಲೆಲ್ಲಾ ಸಂದೀಪನೊಬ್ಬ ನನಗೆ ಆವಶ್ಯಕವಾಗಿ ಬೇಕು.

## ೧೭

ಈ ನಡುವೆ ನನ್ನ ಪತಿ ಊಟಕ್ಕೆ ಕುಳಿತಾಗ ನಾನು ಎದುರಿಗೆ ಕುಳಿತಿರಲಾರೆ ; ಆದರೆ ಎದುರಿಗಿಲ್ಲದಿರುವುದು ಅವಮಾನವೆನ್ನಿಸಿದುದರಿಂದ ಹಾಗೂ ಮಾಡಲಾರದೆ ಮುಖ ಕಾಣದ ಹಾಗೆ ಕುಳಿತುದರಿಂದ ಹಾಗೂ ಮಾಡಲಾರದೆ ಮುಖ ಕಾಣದ ಹಾಗೆ ಕುಳಿತುಕೊಳ್ಳುತ್ತೇನೆ. ಹಾಗೊಂದು ದಿನ ಕುಳಿತಿದ್ದಾಗ ದೊಡ್ಡ ರಾಣಿಯೂ ಬಂದಳು.

" ನಿನಗಂತೂ ಕಾಗದಗಳನ್ನು ನೋಡಿ ಹೆದರಿಕೆಯಿಲ್ಲ. ನನಗೇನೋ ಭಯ. ನೀನು ನನಗೆ ಕೊಟ್ಟ ಹಣವನ್ನು ಕಲ್ಕತ್ತೆಯ ಬ್ಯಾಂಕಿಗೆ ಕಳುಹಿಸಿದೆಯಾ ? "

" ಕಳುಹಿಸುವುದಕ್ಕೆ ಪುರಸತ್ತಾಗಲಿಲ್ಲ "—ನನ್ನ ಪತಿ ಉತ್ತರ ಕೊಟ್ಟರು.

" ನೀನು ತುಂಬಾ ಅಜಾಗರೂಕ."

" ಹಣ ನನ್ನ ಒಳಗಿನ ಕೋಣೆಯಲ್ಲಿ ಕಬ್ಬಿಣದ ಪೆಟ್ಟಿಗೆಯಲ್ಲಿದೆ, ಭಯವೇನು ? "

" ಅಲ್ಲಿಗೂ ಕಳ್ಳರು ಬರಬಹುದು."

" ಅಲ್ಲಿಗೂ ಬಂದರೆ ನಿನ್ನನ್ನೂ ಎತ್ತಿಕೊಂಡು ಹೋಗಬಹುದು ! "

" ನನ್ನಂತಹ ಬಡಪಾಯಿಯನ್ನೆತ್ತಿಕೊಂಡು ಹೋಗಲು ಯಾರು ಬರುತ್ತಾರೆ? ನಿನ್ನ ಕೋಣೆಯಲ್ಲಿ ಅಪೇಕ್ಷಣೀಯ ವಸ್ತು ಇದೆ.—ಆದರೆ ತಮಾಷೆಯಲ್ಲ. ಹಣವನ್ನು ಹಾಗೆ ಕೋಣೆಯಲ್ಲಿಟ್ಟುಕೊಳ್ಳಬೇಡ."

" ಇನ್ನು ಕೆಲವು ದಿನದಲ್ಲಿ ಸರ್ಕಾರದ ಹಣವನ್ನು ಕಲ್ಕತ್ತೆಗೆ ತೆಗೆದುಕೊಂಡು ಹೋಗುತ್ತಾರೆ. ಅವರೊಡನೆ ನಿನ್ನ ಹಣವನ್ನೂ ಕಳುಹಿಸುತ್ತೇನೆ."

" ಹಾಗಾದರೆ ಸರಿ. ಆದರೆ ಪುನಃ ಮರೆತು ಬಿಡಬೇಡ."

" ನನ್ನ ಕೋಣೆಯಲ್ಲಿ ಹಣ ಕಳುವಾದರೂ ನಿನಗೆ ನಷ್ಟ ಮಾಡುವುದಿಲ್ಲಕ್ಕಾ."

" ಹಾಗೆಲ್ಲಾ ನೀನು ಮಾತನಾಡಿದರೆ ನನಗೆ ಕೋಪ ಬರುತ್ತೆ. ನಿನ್ನ ಹಣಕ್ಕೂ ನನ್ನ ಹಣಕ್ಕೂ ವ್ಯತ್ಯಾಸವಿದೆಯೆ ? ನಿನ್ನ ಹಣ ಹೋದರೆ ನನಗೆ ನೋವಾಗುವುದಿಲ್ಲವೆ ? ವಿಧಿ ನನ್ನ ಸರ್ವಸ್ವವನ್ನೂ ಕಿತ್ತುಕೊಂಡರೂ ಲಕ್ಷ್ಮಣನಿಗಿದ್ದಂತಹ ನಿನ್ನ ಸೋದರ ಪ್ರೇಮವನ್ನರಿಯದಷ್ಟು ಕೃತಘ್ನಳಲ್ಲ."

" ಏನಮ್ಮಾ, ಚಿಕ್ಕರಾಣಿ, ಬೊಂಬೆಯ ಹಾಗೆ ಒಂದು ಮಾತೂ ಆಡದೆ ಕುಳಿತಿದ್ದೀಯಲ್ಲಾ. ನಾನು ನಿನ್ನನ್ನು ಸ್ತೋತ್ರ ಮಾಡುತ್ತೇನೆಂದು ಚಿಕ್ಕರಾಣಿಯ ಅಭಿಪ್ರಾಯ, ತನ್ಮಾ. ಅಂತಹ ಕಾಲ ಬಂದರೆ ಹಾಗೆ ಮಾಡುವುದಕ್ಕೂ ನಾನು ಹಿಂಜರಿಯುವುದಿಲ್ಲ. ಆದರೆ ನನ್ನ ಸೋದರನಿಗೆ ಅದು ಆವಶ್ಯಕ ವಲ್ಲವೆಂದು ನಾನು ಬಲ್ಲೆ."

ಹೀಗೆ ದೊಡ್ಡ ರಾಣಿ ಮಾತನಾಡುತ್ತಾ, ಊಟದ ರುಚಿಯ ಕಡೆಗೂ ನನ್ನ ಗಮನವನ್ನೆಳೆಯುತ್ತಿದ್ದಳು. ನನ್ನ ತಲೆ ತಿರುಗು ತ್ತಿತ್ತು. ಸಂಕಟ ಸಮಯ ಒದಗುತ್ತಿತ್ತು. ಹಣವನ್ನು ಹೇಗಾ ದರೂ ಹಿಂದಿರುಗಿಸಬೇಕು. ಅದು ಹೇಗೆ ಸಾಧ್ಯವೆಂಬ ಆಲೋ ಚನೆಯಲ್ಲಿ ನಾನಿದ್ದಾಗ ನನ್ನ ಓರಗಿತ್ತಿಯ ಹರಟೆ ಸಹಿಸಲಸಾಧ್ಯ ವಾಗಿತ್ತು.

ಆಕೆಯ ಕಣ್ಣು ತಪ್ಪಿಸಲು ಸಾಧ್ಯವೇ ಇರಲಿಲ್ಲ. ನನ್ನ ಕಡೆಗೂ ಆಗಾಗ ದೃಷ್ಟಿ ಬೀರುತ್ತಿದ್ದಳು. ನನ್ನ ಮುಖ ಭಾವ ದಿಂದ ಆಕೆ ಎಲ್ಲವನ್ನೂ ಗ್ರಹಿಸುವಳೆಂದು ತೋರುತ್ತಿತ್ತು.

ಆಗ ಅವಸರಪಟ್ಟು ನಾನು, " ನನ್ನಲ್ಲಿಯೇ ದೊಡ್ಡ ರಾಣಿ ಸಂದೇಹ ಪಡುವಂತಿದೆ; ಕಳ್ಳರ ಭಯ ನಟನೆ ಮಾತ್ರ," ಎಂದೆ.

ದೊಡ್ಡರಾಣಿ ನಕ್ಕು, " ನಿಜ, ತಂಗಿ. ಹೆಂಗಸಿನಂತೆ ಯಾರೂ ಕದಿಯಲಾರರು. ಆದರೆ ನನ್ನ ಕಾವಲನ್ನು ನೀನು ಹೇಗೆ ತಪ್ಪಿಸಿಕೊಳ್ಳಬಲ್ಲೆ ? ಮೋಸ ಹೋಗಲು ನಾನೇನೂ ಗಂಡಸಲ್ಲವಲ್ಲ ! "

" ನಿಮಗೆ ಹೆದರಿಕೆಯಾದರೆ ನನ್ನಲ್ಲಿರುವುದನ್ನೆಲ್ಲಾ ನಿಮ್ಮ ಬಳಿ ಒತ್ತೆಯಿಡುತ್ತೇನೆ. ನನ್ನಿಂದ ನಷ್ಟವಾದರೆ ನನ್ನ ಹಣ ತೆಗೆದುಕೊಳ್ಳಬಹುದಲ್ಲ."

" ಪಾಪ, ಏನೂ ಅರಿಯದ ಹುಡುಗಿ ! ಈ ಲೋಕದಲ್ಲಾ ಗಲಿ ಮುಂದಿನ ಲೋಕದಲ್ಲಾಗಲಿ ತೀರಿಸಲಾಗದ ನಷ್ಟಗಳಿರು

ವುವೆಂದು ಅವಳಿಗೆ ತಿಳಿಯುವಲ್ಲವೆ," ನನ್ನ ಪತಿಯ ಕಡೆ ತಿರುಗಿ ಹೇಳಿದಳು.

ನನ್ನ ಪತಿ ಮಾತನಾಡವೆ ಊಟಮಾಡಿ ಹೊರಗೆದ್ದು ಹೋದರು. ಈಗ ಮಧ್ಯಾಹ್ನದ ನಿದ್ರೆಗೆ ನಮ್ಮ ಕೋಣೆಗೆ ಆತ ಬರುವುದಿಲ್ಲ.

ನನ್ನ ದೊಡ್ಡ ಒಡವೆಗಳೆಲ್ಲಾ ಟ್ರೆಜರಿಯಲ್ಲಿ ಸರಾಫನ ವಶ ದಲ್ಲಿದ್ದವು. ಆದರೆ ನನ್ನಲ್ಲಿದ್ದುವೇ ಮೂವತ್ತು, ನಲವತ್ತು ಸಾವಿರ ರೂಪಾಯಿ ಬೆಲೆ ಬಾಳ ತಕ್ಕವು. ನನ್ನ ಒಡವೆಗಳ ಪೆಟ್ಟಿಗೆಯನ್ನು ದೊಡ್ಡ ರಾಣಿಯ ಕೊಠಡಿಗೆ ತೆಗೆದುಕೊಂಡು ಹೋಗಿ " ಇವು ನಿಮ್ಮ ಹತ್ತಿರವಿರಲಿ. ನಿಮಗೂ ಭಯವಿಲ್ಲ ದಿರುತ್ತೆ." ಎಂದೆ.

ದೊಡ್ಡರಾಣಿ " ಇನೇನು ಹೀಗಾಡುತ್ತೀ, ಚಿಕ್ಕರಾಣಿ ? ನೀನು ಕದಿಯುವೆಯೆಂದು ನಾನು ರಾತ್ರಿ ನಿದ್ರೆಕೆಡುವೆನೇ ? " ಎಂದಳು.

" ಹೆದರಿದರೆ ತಪ್ಪೇನು ? ಲೋಕದಲ್ಲಿ ಯಾರ ವಿಚಾರ ಏನು ನಂಬಿಕೆ ? "

" ನನ್ನನ್ನು ನಂಬಿ ಬುದ್ಧಿ ಕಲಿಸ ಬೇಕೆಂದಿದ್ದೀಯಾ ? ಬೇಡವಮ್ಮಾ, ನನ್ನ ಒಡವೆಗಳನ್ನು ನೋಡಿಕೊಳ್ಳುವುದೇ ನನಗೆ ಕಷ್ಟವಾಗಿದೆ. ಆಳುಗಳು ಕಂಡಾರು, ತೆಗೆದುಕೊಂಡು ಹೋಗಮ್ಮಾ ಸಧ್ಯ ! "

ನಾನು ನೇರವಾಗಿ ಹೊರಗಿನ ಕೋಣೆಗೆ ಹೋಗಿ ಅಮೂಲ್ಯ ನಿಗೆ ಹೇಳಿ ಕಳುಹಿಸಿದೆ. ಅವನೊಡನೆ ಸಂದೀಪನೂ ಬಂದನು. ನಾನು, " ಕ್ಷಮಿಸಿ. ಅಮೂಲ್ಯನೊಡನೆ ಮಾತನಾಡ ಬೇಕಾ ಗಿತ್ತು." ಎಂದೆ. ಸಂದೀಪ ಅಸಮಾಧಾನದಿಂದ ನಕ್ಕು "ಹಾಗಾ ದರೆ ನನಗೂ ಅಮೂಲ್ಯನಿಗೂ ಭೇದವುಂಟೋ ? ನನ್ನ ಪ್ರಭಾವ ದಿಂದ ಅವನನ್ನು ನೀನು ಸೆಳೆದರೆ ನಾನು ಹಿಡಿದಿರಲಾರೆ."ಎಂದನು.

ನಾನು ಸುಮ್ಮನೆ ಕಾದು ನಿಂತೆ.

ಸಂದೀಪ “ಹಾಗೇ ಆಗಲಿ. ನಿಮ್ಮ ಗುಟ್ಟು ಮಾತು ಮುಗಿಯಲಿ. ಆಮೇಲೆ ನನ್ನೊಬ್ಬನೊಡನೆಯೇ ಮಾತನಾಡ ಬೇಕು; ಇಲ್ಲದಿದ್ದರೆ ನನಗೆ ಪರಾಭವವಾದಂತೆ. ನಾನು ಅದನ್ನು ಮಾತ್ರ ಸಹಿಸಲಾರೆ. ನನಗೆ ಯಾವಾಗಲೂ ರಾಜಭಾಗ ಸಲ್ಲ ಬೇಕು. ವಿಧಿಗೂ ನನಗೂ ಅದರಿಂದಲೇ ಹೊಡೆದಾಟ. ವಿಧಿ ಯನ್ನು ಸೋಲಿಸುವೆನೇ ಹೊರತು ಸೋಲನ್ನೊಪ್ಪಲಾರೆ.” ಅಮೂಲ್ಯನ ಕಡೆ ದ್ವೇಷದ ನೋಟ ಬೀರಿ ಸಂದೀಪ ಹೊರಕ್ಕೆ ನಡೆದನು.

“ಅಮೂಲ್ಯ, ತಮ್ಮಾ, ನನಗಾಗಿ ನೀನೊಂದು ಕೆಲಸ ಮಾಡಬೇಕು.”

“ಪ್ರಾಣವನ್ನೇ ಕೊಡಲು ಸಿದ್ಧನಾಗಿದ್ದೇನಕ್ಕಾ.”

ಒಡವೆಯ ಪೆಟ್ಟಿಗೆಯನ್ನು ಅವನ ಮುಂದಿಟ್ಟು, “ಇವು ಗಳನ್ನು ಮಾರಿ ಅಥವಾ ಒತ್ತೆಯಿಟ್ಟು ಆರು ಸಾವಿರ ರೂಪಾಯಿ ಗಳನ್ನು ನನಗೆ ಬೇಗ ತಂದು ಕೊಡು,” ಎಂದೆ.

“ಬೇಡಕ್ಕಾ, ಒಡವೆಗಳಿರಲಿ. ನಾನು ಹಾಗೆಯೇ ಆರು ಸಾವಿರ ರೂಪಾಯಿ ತರುತ್ತೇನೆ.”

“ಹುಚ್ಚನ ಹಾಗಾಡಬೇಡ. ಅದಕ್ಕೆಲ್ಲಾ ಹೊತ್ತಿಲ್ಲ. ಪೆಟ್ಟಿಗೆಯನ್ನು ತೆಗೆದುಕೊಂಡು ರಾತ್ರಿ ರೈಲಿನಲ್ಲಿ ಕಲ್ಕತ್ತೆಗೆ ಹೋಗು. ನಾಡಿದ್ದರೊಳಗೆ ಹೇಗಾದರೂ ನನಗೆ ಹಣ ತಂದು ಕೊಡು.”

ಅಮೂಲ್ಯ ಪೆಟ್ಟಿಗೆಯಲ್ಲಿದ್ದ ವಜ್ರದ ಹಾರವನ್ನು ಬೆಳಕಿಗೆ ಹಿಡಿದು ನೋಡಿ ವ್ಯಸನದಿಂದ ಹಿಂದಕ್ಕಿಟ್ಟನು.

“ಅವುಗಳ ಸರಿಯಾದ ಬೆಲೆ ನಿನಗೆ ಸಿಕ್ಕುವುದಿಲ್ಲವೆಂದು ನನಗೆ ಗೊತ್ತು. ಅದರಿಂದಲೇ ಮೂವತ್ತು ಸಾವಿರ ಬಾಳುವ ಒಡವೆಗಳನ್ನು ಕೊಟ್ಟಿದ್ದೇನೆ. ಎಲ್ಲಾ ಹೋದರೂ ಚಿಂತೆಯಿಲ್ಲ. ತಪ್ಪದೆ ಆರು ಸಾವಿರ ತಂದ ಕೊಡು.”

ಆ ದಿನ ಆರು ಸಾವಿರ ರೂಪಾಯಿ ನಿನ್ನಿಂದ ತೆಗೆದು ಕೊಂಡಾಗ ಸಂದೀಪ ಬಾಬುವಿನೊಡನೆ ಜಗಳವಾಡಿದೆ. ನನಗೆ ತುಂಬ ಅವಮಾನವಾಯಿತು. ದೇಶಕ್ಕಾಗಿ ಮಾನಾವಮಾನ ಗಳನ್ನೂ ಬಲಿಕೊಡಬೇಕೆಂದು ಸಂದೀಪ ಬಾಬು ಹೇಳುತ್ತಾರೆ, ಇರಬಹುದು. ಆದರೆ ಇದು ಬೇರೆ ವಿಚಾರ. ದೇಶಕ್ಕಾಗಿ ಸಾಯಲು ನಾನು ಹೆದರುವುದಿಲ್ಲ-ಕೊಲ್ಲಲು ಹೆದರುವುದಿಲ್ಲ. ಅಷ್ಟು ಮಟ್ಟಿನ ಶಕ್ತಿ ದೇವರು ನನಗೆ ಕೊಟ್ಟಿದ್ದಾನೆ. ಆದರೆ ನಿನ್ನಿಂದ ಹಣ ತೆಗೆದುಕೊಂಡ ಅವಮಾನ ಮರೆಯಲಾರೆ. ಸಂದೀಪಬಾಬುವಿಗೆ ಅಂತಹ ಸಂಕೋಚವೇ ಇಲ್ಲ. ಯಾರ ಪೆಟ್ಟಿಗೆಯಲ್ಲಿರುವುದೋ ಅವರಿಗೆ ಹಣ ಸೇರಿದೆಯೆಂಬುದು ತಪ್ಪು ಅಭಿಪ್ರಾಯವಂತೆ. ಹಾಗಲ್ಲದಿದ್ದರೆ 'ವಂದೇ ಮಾತರಂ'ನ ಮಾಯೆಯೇನು ಎನ್ನುತ್ತಾರೆ."

ಮಾತನಾಡುತ್ತಾ ಅಮೂಲ್ಯನ ಉತ್ಸಾಹ ಹೆಚ್ಚಿತು. ನಾನು ಕೇಳುವಾಗ ಮಾತನಾಡುವುದರಲ್ಲಿ ಅವನಿಗೆ ತುಂಬ ಆಸಕ್ತಿ.

"ಆತ್ಮವನ್ನು ಕೊಲ್ಲಲು ಯಾರಿಗೂ ಸಾಧ್ಯವಿಲ್ಲವೆಂದು ಗೀತೆ ಹೇಳುತ್ತದೆ. ಕೊಲ್ಲುವುದು ಎನ್ನುವುದು ಬರಿಯ ಮಾತು. ಹಣ ತೆಗೆದುಕೊಳ್ಳುವುದೂ ಹಾಗೆಯೇ. ಹಣ ಯಾರದು? ಅದನ್ನೂ ಯಾರೂ ಸೃಷ್ಟಿಸಿಲ್ಲ. ಸಾಯುವಾಗ ಯಾರೂ ಸಂಗಡ ತೆಗೆದುಕೊಂಡು ಹೋಗಲಾರರು. ಈ ದಿನ ನನ್ನದು. ನಾಳೆ ಮಗ ನದು, ನಾಡಿದ್ದು ಸಾಲಗಾರರದು. ಹಣ ಯಾರಿಗೂ ಸೇರದುದ ರಿಂದ ದೇಶಭಕ್ತರು ಯಾರೋ ಅಯೋಗ್ಯ ಸಂತಾನಕ್ಕೆ ಬಿಡದೆ ಕೆಲಸಕ್ಕಾಗಿ ತೆಗೆದುಕೊಂಡರೆ ತಪ್ಪೇನು?"

ಸಂದೀಪನ ಮಾತುಗಳನ್ನು ಈ ಹುಡುಗನ ಬಾಯಿಂದ ಕೇಳಿದರೆ ನಡುಗುತ್ತೇನೆ. ಹಾವಾಡಿಗರು ಹಾವುಗಳೊಡನೆ ಆಡಿದರೆ ಅಪಾಯವಿರಲಾರದು. ಆದರೆ ಈ ಮಕ್ಕಳು ಏನೂ ಅರಿಯದವರು. ಜಗತ್ತಿನ ಮಂಗಳಾಶೀರ್ವಾದ ಅವರಿಗಿದೆ.

ಹಾವಿನ ಸ್ವಭಾವವರಿಯದೆ ನಗುತ್ತಾ ನಂಬಿ ಅದರ ದವಡೆಗಳಲ್ಲಿ ಬೆರಳನ್ನಿಟ್ಟಾಗ ಹಾವಿನ ಭೀಕರತೆ ತಿಳಿಯುತ್ತದೆ. ನಾನು ಸಾಯಲು ಸಿದ್ಧವಾಗಿದ್ದರೂ ಈ ಹುಡುಗನನ್ನು ಬದುಕಿಸ ಬೇಕೆಂಬ ಆಸೆ, ಸಂದೀಪ ಸಂದೇಹಪಡುವಂತೆ, ನಿಜವಾದುದು.

ನಾನು ನಕ್ಕು, "ಹಾಗಾದರೆ ಹಣ ನಿಮ್ಮ ದೇಶಭಕ್ತರ ಉಪಯೋಗಕ್ಕೆ ಬೇಕೋ ?" ಎಂದೆ.

ಅಮೂಲ್ಯ ಹೆಮ್ಮೆಯಿಂದ, "ಹೌದಕ್ಕಾ. ಅವರು ರಾಜ ರಲ್ಲವೆ ? ಬಡತನದಿಂದ ಅವರ ಅಧಿಕಾರ ಕಡಮೆಯಾಗುವುದು. ಸಂದೀಪಬಾಬು ರೈಲಿನಲ್ಲಿ ಮೊದಲ ತರಗತಿಯಲ್ಲಿಯೇ ಪ್ರಯಾಣ ಮಾಡಬೇಕೆಂದು ಬಲವಂತ ಮಾಡುತ್ತೇವೆ. ಅವನೂ ಹಿಂದೆಗೆಯುವುದಿಲ್ಲ. ಹಾಗೆ ಮಾಡುವುದು ನಮ್ಮ ಅಭಿಮಾನಕ್ಕಾಗಿ. ಲೋಕ ವಿಜಯಿಗಳ ಮಹಾ ಆಯುಧ ತೋರಿಕೆಯ ಮಾಯೆ ಎಂದು ಆತ ಹೇಳುತ್ತಾರೆ. ಅವರು ಬಡತನದಲ್ಲಿದ್ದರೆ ಅದು ತಪಸ್ಸಲ್ಲ—ಆತ್ಮ ಹತ್ಯೆ."

ಸಂದೀಪ ಸದ್ದಿಲ್ಲದೆ ಒಳಗೆ ಪ್ರವೇಶಿಸಿದನು. ನಾನು ತಟ್ಟನೆ ಶಾಲುವಿನಿಂದ ಒಡವೆಗಳ ಪೆಟ್ಟಿಗೆಯನ್ನು ಮರೆಸಿದೆ.

ಅವನು ವ್ಯಂಗ್ಯವಾಗಿ, "ಇನ್ನೂ ನಿಮ್ಮ ಏಕಾಂತ ಮುಗಿ ದಿಲ್ಲವೋ" ಎಂದ.

ಅಮೂಲ್ಯ "ಏನೂ ಇಲ್ಲ. ಮುಗಿಯಿತು," ಎಂದನು.

ನಾನು, "ಇಲ್ಲ ಅಮೂಲ್ಯ. ಇನ್ನೂ ಮುಗಿದಿಲ್ಲ" ಎಂದೆ.

"ಹಾಗಾದರೆ ನಾನು ಪುನಃ ಹೋಗ ಬೇಕೋ ?" ಸಂದೀಪ ಕೇಳಿದ.

"ದಯವಿಟ್ಟು."

"ಪುನಃ ಬರುವುದು ?"

"ಈ ದಿನ ಬೇಡ. ನನಗೆ ಸಮಯವಿಲ್ಲ."

ಸಂದೀಪ ಕೋಪದಿಂದ, "ಸಮಯವಿಲ್ಲ ! ಏಕಾಂತ

ಸಂಭಾಷಣೆಗೆ ಮಾತ್ರ ! ” ಎಂದನು.

ಅಸೂಯೆ ! ಶಕ್ತನು ದೌರ್ಬಲ್ಯ ತೋರಿದರೆ ಸ್ತ್ರೀ ಜಯ ಭೇರಿ ಮೊಳಗಿಸದಿರಲಾರಳು. ನಾನು ಖಂಡಿತವಾಗಿ, “ ನಿಜ ವಾಗಿ ಸಮಯವಿಲ್ಲ ” ಎಂದೆ.

“ ಸಂದೀಪಬಾಬುವಿಗೆ ಕೋಪ ಬಂತಕ್ಕಾ ” ಎಂದನು.

“ ಕಾರಣವೇನಿದೆ ? ಒಂದು ವಿಚಾರ ಭದ್ರವಾಗಿಡು, ಅಮೂಲ್ಯ. ಸಂದೀಪ ಬಾಬುವಿಗೆ ಈ ಒಡವೆಗಳ ಮಾರಾಟದ ವಿಚಾರ ತಿಳಿಸಬೇಡ—ನಿನ್ನಾಣೆ.” ಎಂದೆ.

“ ಇಲ್ಲ. ತಿಳಿಸುವುದಿಲ್ಲ ”

“ ನಿಧಾನ ಮಾಡಬೇಡ. ರಾತ್ರಿ ರೈಲಿನಲ್ಲಿ ಹೊರಟು ಬಿಡು.”

ನಾನೂ ಅಮೂಲ್ಯನೂ ಹೊರಗೆ ಬಂದಾಗ ಸಂದೀಪ ಅಲ್ಲಿ ನಿಂತಿದ್ದನು. ಅಮೂಲ್ಯನನ್ನು ಅಡ್ಡಗಟ್ಟುವ ಅವನ ಹಂಚಿಕೆ ತಪ್ಪಿಸಲು ನಾನೇ ಅವನೊಡನೆ ಮಾತನಾಡುತ್ತ “ ನನಗೇನು ಹೇಳಬೇಕಾಗಿತ್ತು, ಸಂದೀಪ ಬಾಬು ? ” ಎಂದೆ

“ ಅಂಥಾದ್ದೇನೂ ಇಲ್ಲ—ಬರಿಯ ಹರಟೆ, ನಿನಗೆ ಸಮಯ ವಿಲ್ಲದುದರಿಂದ....”

“ ಸ್ವಲ್ಪ ಸಮಯವಿದೆ.”

ಇಷ್ಟು ಹೊತ್ತಿಗೆ ಅಮೂಲ್ಯ ಹೊರಟುಹೋಗಿದ್ದ. ಕೋಣೆ ಯೊಳಕ್ಕೆ ಬಂದು ಸಂದೀಪ, “ ಅಮೂಲ್ಯ ತೆಗೆದುಕೊಂಡು ಹೋದ ಪೆಟ್ಟಿಗೆಯೇನು ” ಎಂದು ಕೇಳಿದ.

ಅವನ ಕಣ್ಣು ತಪ್ಪಿಸಲು ಸಾಧ್ಯವಾಗಿರಲಿಲ್ಲ. ನಾನು ಖಂಡಿತವಾಗಿ, “ ಅದನ್ನು ಹೇಳಬಹುದಾಗಿದ್ದರೆ ನೀವಿದ್ದಾಗಲೇ ಅವನಿಗೆ ಕೊಡುತ್ತಿದ್ದೆ.” ಎಂದೆ.

“ಅಮೂಲ್ಯ ನನಗೆ ಹೇಳುವುದಿಲ್ಲವೆಂದು ಕೊಂಡಿದ್ದೀಯೋ”?

“ ಹೇಳುವುದಿಲ್ಲ.”

ಸಂದೀಪ ಕೋಪವನ್ನು ಮರೆಸಲಾರನೆ, "ನನ್ನ ಮೇಲೆ ಅಧಿಕಾರ ನಡೆಸಬೇಕೆಂದಿದ್ದೀಯೋ? ಅದು ಅಸಾಧ್ಯ. ನಾನು ಕಾಲಿನಿಂದ ತುಳಿದರೆ ಅಮೂಲ್ಯ ಆನಂದದಿಂದ ಸಾಯುತ್ತಾನೆ. ನಾನು ಬದುಕಿರುವವರೆಗೂ ಅವನನ್ನು ನಿನ್ನ ದಾಸನಾಗಲು ಬಿಡುವುದಿಲ್ಲ."

ದೌರ್ಬಲ್ಯ! ಸಂದೀಪ ನನ್ನೆದುರಿಗೆ ದುರ್ಬಲನೆಂದರಿತಿದ್ದಾನೆ. ಅದರಿಂದಲೇ ಈ ಕೋಪ. ನನ್ನ ಶಕ್ತಿಯನ್ನು ಬರಿಯ ಬಲದಿಂದ ಎದುರಿಸಲು ಸಾಧ್ಯವಿಲ್ಲವೆಂದು ಅರ್ಥ ಮಾಡಿಕೊಂಡಿದ್ದಾನೆ.

ನನ್ನ ಒಂದು ನೋಟ ಅವನ ಕೋಟೆಗಳನ್ನುರುಳಿಸಬಲ್ಲದು. ಅದರಿಂದ ಅವನ ಈ ಹಾರಾಟ. ನಾನು ತಿರಸ್ಕಾರದಿಂದ ನಕ್ಕೆ. ಕಡೆಗೆ ಅವನ ಸರಿಸಮಾನಳಾದೆ. ಈ ಅನುಕೂಲವನ್ನು ನಾನು ಕಳೆದುಕೊಳ್ಳಬಾರದು; ಕೆಳಗಿಳಿಯಬಾರದು. ನನ್ನ ಅಧಃಪತನದಲ್ಲಿ ಇಷ್ಟು ಮಟ್ಟಿನ ಮರ್ಯಾದೆಯನ್ನಾದರೂ ಉಳಿಸಿಕೊಳ್ಳಬೇಕು.

ಸಂದೀಪ, "ಅದು ನಿನ್ನ ಒಡವೆಗಳ ಪೆಟ್ಟಿಗೆಯೆಂದು ನಾನು ಬಲ್ಲೆ."

"ಏನಾದರೂ ಊಹಿಸು. ನನ್ನಿಂದ ಏನನ್ನೂ ತಿಳಿಯಲಾರೆ."

"ಆದರೆ ನನ್ನಲ್ಲಿರುವುದಕ್ಕಿಂತ ಅಮೂಲ್ಯನಲ್ಲಿ ನಿನಗೆ ಹೆಚ್ಚು ನಂಬಿಕೆಯೋ? ಅವನು ನನ್ನ ನೆರಳಿನ ನೆರಳೆಂದೂ, ಮಾರ್ದನಿಯ ಮರುದನಿಯೆಂದೂ ನಾನು ಹತ್ತಿರ ಇಲ್ಲದಿದ್ದರೆ ಅವನಿಗೆ ಅಸ್ತಿತ್ವವೇ ಇಲ್ಲವೆಂದೂ ಅರಿಯೆಯಾ?"

"ನಿನ್ನ ಮಾರ್ದನಿಯಾಗದಿರುವಾಗ ಅವನು ನಿಜವಾದ ಅಮೂಲ್ಯ. ಆಗ ಅವನಲ್ಲಿ ನನಗೆ ಹೆಚ್ಚು ನಂಬಿಕೆ."

"ನಿನ್ನ ಒಡವೆಗಳನ್ನೆಲ್ಲಾ ದೇವಿಯ ಅರ್ಪಣೆಗಾಗಿ ನನಗೆ

ಕೊಡುತ್ತೇನೆಂದು ಮಾತು ಕೊಟ್ಟಿರುವುದನ್ನು ಮರೆಯಬೇಡ. ಆಗಲೇ ದಾನಮಾಡಿ ಆಗಿದೆ."

"ದೇವರು ನನ್ನದಾಗಿ ಬಿಟ್ಟ ಆಭರಣಗಳನ್ನು ದೇವರಿಗೆ ಅರ್ಪಿಸುತ್ತೇನೆ. ನನ್ನಿಂದ ಕಳುವಾದುವನ್ನು ಹೇಗೆ ಕೊಡಲಿ?"

"ಹೀಗೆ ತಪ್ಪಿಸಿಕೊಳ್ಳಲು ಆಗುವುದಿಲ್ಲ. ಈಗ ಕೆಲಸದ ಸಮಯ. ಕೆಲಸ ಮುಗಿದಮೇಲೆ ಈ ಹೆಣ್ಣಾಟಗಳನ್ನಾಡ ಬಹುದು. ನಾನು ಜತೆಗೆ ಬರುತ್ತೇನೆ."

ನನ್ನ ಪತಿಯ ಹಣವನ್ನು ಕದ್ದು ಸಂದೀಪನಿಗೆ ಕೊಟ್ಟ ತಕ್ಷಣ ನಮ್ಮಲ್ಲಿದ್ದ ಮೇಳ ತಪ್ಪಿತು. ಆ ಕೆಲಸದಿಂದ ನನ್ನ ಬೆಲೆ ಕಡಮೆಯಾಯಿತಲ್ಲದೆ ಸಂದೀಪನ ಶಕ್ತಿಯೂ ಕಡಿಮೆಯಾಯಿತು. ಕೈಯಲ್ಲಿರುವ ವಸ್ತುವಿನ ಮೇಲೆ ಬಾಣ ಪ್ರಯೋಗ ನಿರರ್ಥಕ. ಹಾಗೆ ಸಂದೀಪ ಆದರ್ಶತ್ವವನ್ನು ಕಳೆದುಕೊಂಡ; ಅವನ ಮಾತಿನಲ್ಲಿ ಅಲ್ಪತ್ವ ತಲೆ ದೋರಿತ್ತು.

ಸಂದೀಪ ಮಧ್ಯಾಹ್ನದ ಸೂರ್ಯನಂತೆ ಉಜ್ವಲವಾದ ಕಣ್ಣುಗಳಿಂದ ನನ್ನನ್ನು ನೋಡಿದನು. ಎದ್ದು ನನ್ನ ಕಡೆ ಬರು ವಂತೆ ಕಾಲುಗಳನ್ನಲುಗಿಸಿದನು. ತಲೆ ತಿರುಗಿ ಕಿವಿಯಲ್ಲಿ ಶಬ್ದ ವಾಗುತ್ತಿತ್ತು. ಅಲ್ಲಿಯೇ ಇದ್ದರೆ ಏಳಲು ಸಾಧ್ಯವಾಗುವುದಿಲ್ಲ ವೆಂದು ಅರಿತೆ. ಕಷ್ಟದಿಂದ ಎದ್ದು ಬಾಗಿಲಕಡೆ ಹೋದೆ.

ಸಂದೀಪ ಒಣಗಿದ ಧ್ವನಿಯಿಂದ, "ಎಲ್ಲಿಗೆ ಓಡುತ್ತೀ ರಾಣಿ?" ಎಂದು ನನ್ನನ್ನು ಹಿಡಿಯಲು ಹಾರಿ ಬಂದನು. ಆದರೆ ಹೊರಗಡೆ ಹೆಜ್ಜೆಯ ಸದ್ದು ಕೇಳಿ ಪುನಃ ಕುರ್ಚಿಯ ಮೇಲೆ ಬಿದ್ದುಕೊಂಡನು. ನಾನು ಪುಸ್ತಕಗಳ ಬೀರುವಿನ ಮುಂದೆ ನಿಂತು ನೋಡುತ್ತಿದ್ದೆ.

ನನ್ನ ಪತಿ ಒಳಕ್ಕೆ ಬರಲು "ನಿಖಿಲ, ನಿನ್ನ ಬಳಿ ಬ್ರೌನಿಂಗ್ ಕವಿಯ ಪುಸ್ತಕವಿಲ್ಲವೋ? ನಾನು ರಾಣಿಗೆ ನಮ್ಮ ಕಾಲೇಜು ಸಂಘದ ವಿಚಾರ ಹೇಳುತ್ತಿದ್ದೆ. ಬ್ರೌನಿಂಗ್ ಕವಿಯ

ಪದ್ಯದ ಅನುವಾದದ ಸ್ಪರ್ಧೆ ನಿನಗೆ ಜ್ಞಾಪಕವಿದೆಯೆ?

'She should never have looked at me,
If she meant I should not love her,
There are plenty ...men you call such,
I suppose......she may discover
All her soul to, if she pleases,
And yet leave much as she found them :
But I'm not so, and she knew it
when she fixed me, glancing round them.*

ನಾನು ಅದನ್ನು ಹೇಗೋ ಬಂಗಾಳಿಗೆ ಅನುವಾದಿಸಿದೆ; ಆದರೆ ಪ್ರಯತ್ನ ಸುಖಕರವಾಗಲಿಲ್ಲ. ನಾನು ಕವಿಯೇ ಆಗುತ್ತೀನೆಂದು ಭಾವಿಸಿದ್ದೆ, ಆದರೆ ದೇವರು ಕಾಪಾಡಿದ. ದಕ್ಷಿಣನ ಜ್ಞಾಪಕವಿದೆಯೆ? ಅವನು ಉಪ್ಪು ಇನ್ಸಪೆಕ್ಟರ್ ಆಗದೆ ಇದ್ದಿದ್ದರೆ ಕವಿಯಾಗುತ್ತಿದ್ದ. ಅವನ ಅನುವಾದ ನನಗಿನ್ನೂ ಜ್ಞಾಪಕವಿದೆ.

"ಅಲ್ಲಿ ಹುಡುಕಿ ಪ್ರಯೋಜನವಿಲ್ಲ, ರಾಣಿ. ಮದುವೆಯಾದ ಮೇಲೆ ಕವಿತೆಗಳನ್ನು ಓದುವುದನ್ನು ನಿಖಿಲ ಬಿಟ್ಟುಬಿಟ್ಟಿದ್ದಾನೆ—ಬೇಕಾಗಿಲ್ಲವೆಂದು ತೋರುತ್ತೆ. ಆದರೆ ಕವಿತೆಯ ಹುಚ್ಚು ನನಗೆ ಪುನಃ ಹಿಡಿಯುವಂತೆ ತೋರುತ್ತೆ."

ನನ್ನ ಪತಿ "ನಿನ್ನನ್ನೆಚ್ಚರಿಸಲು ಬಂದೆ, ಸಂದೀಪ್.—" ಎಂದರು.

"ಕವಿತೆಯ ವಿಚಾರವಾಗಿಯೇ?"

ನನ್ನ ಪತಿ ಈ ಹಾಸ್ಯದ ಕಡೆ ಗಮನ ಕೊಡಲಿಲ್ಲ. "ಸ್ವಲ್ಪ

---

*ಇದರ ಭಾವಾನುವಾದ ಹೀಗಿದೆ—

ನನ್ನ ಪ್ರೀತಿ ಬೇಡದಿದ್ದರೆ, ಆಕೆ ನನ್ನೆಡೆ ನೋಡಬಾರದಿತ್ತು. ಸರ್ವಸ್ವವನ್ನೂ ಅರಿತೂ ಕದಲದಿರುವ ಮನುಜರಿರಬಹುದು. ನಾನಂತಲ್ಲ; ತಿಳಿದೂ ನನ್ನೆಡೆ ನೋಡಿದಳು.

ದಿನದಿಂದ ಮುಸಲ್ಮಾನ್ ಮತ ಪ್ರಚಾರಕರು ಇಲ್ಲಿಯ ಮುಸ್ಲಿಮರನ್ನೆಬ್ಬಿಸುತ್ತಿದ್ದಾರೆ. ಎಲ್ಲರೂ ನಿನ್ನನ್ನು ತುಂಬಾ ದ್ವೇಷಿಸುತ್ತಾರೆ."

"ನಾನು ಪಲಾಯನ ಮಾಡಬೇಕೋ ?"

"ವರ್ತಮಾನ ತಿಳಿಸಿದೆ. ಬುದ್ಧಿ ಹೇಳಲು ಬರಲಿಲ್ಲ."

"ಈ ಭೂಮಿ ನನ್ನದಾಗಿದ್ದರೆ ಮತ ಪ್ರಚಾರಕರಿಗೆ ಎಚ್ಚರಿಕೆ ಹೋಗುತ್ತಿತ್ತು. ನನ್ನನ್ನು ಹೆದರಿಸುವ ಬದಲು ಅವರ ಮೇಲೆ ಜೋರು ಮಾಡಿದ್ದರೆ ನಿನ್ನ ಯೋಗ್ಯತೆಗೂ, ನನ್ನ ಯೋಗ್ಯತೆಗೂ ಸರಿಯಾಗಿರುತ್ತಿತ್ತು. ನಿನ್ನ ದೌರ್ಬಲ್ಯದಿಂದ ನೆರೆಯ ಜಮೀನ್ದಾರರೂ ದುರ್ಬಲರಾಗುತ್ತಿದ್ದಾರೆ."

"ನಿನಗೆ ನಾನು ಬುದ್ಧಿ ಹೇಳಲಿಲ್ಲ, ಸಂದೀಪ. ನನಗೆ ದಯವಿಟ್ಟು ನೀನು ಹೇಳಬೇಡ. ಅದರಿಂದ ಪ್ರಯೋಜನವಿಲ್ಲ. ಇನ್ನೊಂದು ವಿಚಾರ. ನಿನ್ನ ಅನುಯಾಯಿಗಳೂ ನೀನೂ ನನ್ನ ಒಕ್ಕಲನ್ನು ರಹಸ್ಯವಾಗಿ ಹಿಂಸಿಸುತ್ತಿದ್ದೀರಿ. ಅದನ್ನು ತಡೆಯಲು ಇನ್ನು ಸಾಧ್ಯವಿಲ್ಲ. ನೀನು ನನ್ನ ಭೂಮಿ ಬಿಟ್ಟು ಹೋಗಬೇಕು."

"ಮುಸಲ್ಮಾನರ ಹೆದರಿಕೆಯಿಂದಲೋ, ಇನ್ನೇನಾದರೂ ಇರುವುದೋ ?"

"ಕೆಲವು ವಿಚಾರಗಳಲ್ಲಿ ಹೆದರದಿರುವುದೇ ಹೇಡಿತನವಾದೀತು. ಆ ಹೆದರಿಕೆಗಾಗಿ ನೀನು ಹೋಗಬೇಕು. ನಾನು ಇನ್ನು ಐದು ದಿನಗಳಲ್ಲಿ ಕಲ್ಕತ್ತೆಗೆ ಹೋಗುವಾಗ ನೀನೂ ನನ್ನೊಡನೆ ಬರಬೇಕು. ಅಲ್ಲಿ ನನ್ನ ಮನೆಯಲ್ಲಿರಲು ಏನೂ ಆಕ್ಷೇಪಣೆಯಿಲ್ಲ."

"ಸರಿ! ಐದು ದಿನಗಳ ಅವಧಿ ಇರುವುದಲ್ಲಾ. ಅಷ್ಟರಲ್ಲಿ ಈ ಗೂಡಿನಿಂದ ಹೊರಡುವ ಹಾಡನ್ನು ಹಾಡುತ್ತೇನೆ, ರಾಣಿ! ಬಂಗಾಳದ ಆಧುನಿಕ ಕವಿಯೇ! ನಿನ್ನ ಮಾತುಗಳನ್ನು ಕೊಳ್ಳೆ ಹೊಡೆಯುವ ಅವಕಾಶ ಕೊಡು. ನಿಜವಾಗಿ ನೋಡಿದರೆ ನೀನೇ ಕಳ್ಳ—ನನ್ನ ಹಾಡನ್ನು ನಿನ್ನದಾಗಿ ಮಾಡಿಕೊಂಡಿದ್ದೀ. ಹೆಸರು

ನಿನಗಿರಲಿ. ಹಾಡು ನನ್ನದು." ಸಂದೀಪ ಅಪಸ್ವರದಲ್ಲಿ ಭೈರವಿ
ಯಲ್ಲಿ ಈ ಭಾವವುಳ್ಳ ಹಾಡನ್ನು ಹಾಡ ತೊಡಗಿದನು.

"ವಸಂತ ಸಮಯದಲ್ಲಿ, ರಾಣಿ, ಮಿಲನ, ವಿಯೋಗ
ಒಂದನ್ನೊಂದು ಹಿಂಬಾಲಿಸುವುವು. ನೆರಳಲ್ಲಿ ನಲುಗುವ ಹೂಗಳ
ಹಿಂದೆ ಬೇರೆ ಹೂಗಳರಳುವುವು.

ವಸಂತ ಸಮಯದಲ್ಲಿ, ನನ್ನ ರಾಣಿ, ನಮ್ಮ ಮಿಲನದ
ಸಂಗೀತವೇ ಬೇರೆ. ಅಗಲಿಕೆಯ ಕಾಣಿಕೆಯೊಂದಿಲ್ಲವೆ? ಅದು
ಆಸೆ, ನಿನ್ನ ಪುಷ್ಪವನದ ನೆರಳಲ್ಲಿ ನಿನ್ನತಾಪವಾರಿಸಲೆಂದು
ಹುದುಗಿಟ್ಟ ಧಾರಾಸಾರದಾಸೆ."

ಬೆಂಕಿಯಂತಹ ಅವನ ನಗ್ನ ಧೈರ್ಯಕ್ಕೆ ಎಣೆಯೇ ಇರ
ಲಿಲ್ಲ. ಅದನ್ನು ನಿಲ್ಲಿಸಲು ಸಮಯವೇ ಇಲ್ಲ. ಸಿಡಿಲನ್ನೆದುರಿ
ಸಿದಂತೆ! ಅಡ್ಡಿಗಳನ್ನು ನೋಡಿ ಅದು — ಅಟ್ಟಹಾಸ ಮಾಡುತ್ತದೆ.

ನಾನು ಕೋಣೆ ಬಿಟ್ಟು ಒಳಕ್ಕೆ ಹೋಗುತ್ತಿದ್ದಾಗ ಅಮೂಲ್ಯ
ಎದುರಿಗೆ ಬಂದು ನಿಂತ.

"ಭಯ ಪಡಬೇಡಿ ಅಕ್ಕಾ. ರಾತ್ರಿ ಹೋಗಿ ಕೆಲಸ
ಮಾಡಿಕೊಂಡು ಬರುತ್ತೇನೆ," ಎಂದನು.

"ಅಮೂಲ್ಯ, ನನಗಾಗಿ ಏನೂ ಭಯವಿಲ್ಲ. ನಿನಗಾಗಿ
ಭಯಪಡುತ್ತಲೇ ಇದ್ದೇನೆ."

ಅಮೂಲ್ಯ ಹೊರಡುತ್ತಿರಲು ಕರೆದು, "ನಿನಗೆ ತಾಯಿ
ಇದ್ದಾಳೆಯೆ, ಅಮೂಲ್ಯ," ಎಂದು ಕೇಳಿದೆ.

"ಇದ್ದಾಳೆ."

"ಸೋದರಿ ?"

"ಇಲ್ಲ. ನಮ್ಮ ತಾಯಿಗೆ ನಾನೊಬ್ಬನೇ ಮಗ. ನಾನು
ಚಿಕ್ಕವನಾಗಿದ್ದಾಗ ನನ್ನ ತಂದೆ ಸತ್ತು ಹೋದರು."

"ಹಾಗಾದರೆ ನಿಮ್ಮ ತಾಯಿಯ ಬಳಿಗೆ ಹೊರಟುಹೋಗು,
ಅಮೂಲ್ಯ."

" ಆದರೆ ಅಕ್ಕ, ನನಗೀಗ ತಾಯಿ, ಸೋದರಿ ಇಬ್ಬರೂ ಇದ್ದಾರಲ್ಲ."

" ಹಾಗಾದರೆ ನೀನು ಹೊರಡುವ ಮೊದಲು ಇಲ್ಲಿಯೇ ಬಂದು ಊಟಮಾಡು."

" ಅದಕ್ಕೆ ಹೊತ್ತಿರುವುದಿಲ್ಲ. ನೀವು ಮುಟ್ಟಿದ ಪ್ರಸಾದವನ್ನೇ ಬುತ್ತಿಯಾಗಿ ತೆಗೆದುಕೊಂಡು ಹೋಗುತ್ತೇನೆ."

" ನಿನಗೇನಿಷ್ಟ, ಅಮೂಲ್ಯ ? "

" ನಮ್ಮ ತಾಯಿ ಇದ್ದರೆ ಹೋಳಿಗೆ ಮಾಡಿ ಕೊಡುತ್ತಿದ್ದಳು. ನೀವೂ ಮಾಡಿಕೊಡಿ ಅಕ್ಕ."

## ಅಧ್ಯಾಯ ೧೦

# ನಿಖಿಲನ ಕಥೆ

### ೧೨

ಹರೀಶ ಕುಂದುವಿನೊಡನೆ ಸೇರಿ ಸಂದೀಪ ರಾಕ್ಷಸಮರ್ದಿನಿ ದೇವಿಯ ಪೂಜೆಯನ್ನು ವಿಜೃಂಭಣೆಯಿಂದ ನಡೆಸುವ ಏರ್ಪಾಟು ಮಾಡುತ್ತಿದ್ದನೆಂದು ನನ್ನಗುರು ತಿಳಿಸಿದರು. ಖರ್ಚಿಗೆ ಹಣ ವನ್ನು ಕುಂದು ತನ್ನ ಒಕ್ಕಲಿನವರಿಂದ ಸುಲಿಯುತ್ತಿದ್ದನು. ಪಂಡಿತ ಕವಿರತ್ನ ಮತ್ತು ವಿದ್ಯಾವಾಗೀಶರು ಉತ್ಸವಕ್ಕಾಗಿ ಶ್ಲೇಷಾರ್ಥ ಶ್ಲೋಕಗಳನ್ನು ಬರೆಯುತ್ತಿದ್ದರು.

ನನ್ನ ಗುರುವಿಗೂ, ಸಂದೀಪನಿಗೂ ಈ ವಿಚಾರವಾಗಿ ವಾಗ್ವಾದ ನಡೆದಿತ್ತು. "ದೇವರ ಸೃಷ್ಟಿಯಲ್ಲೂ ಪರಿಣಾಮ ಪ್ರಗತಿಗಳಿಗಾರಂಭವಾಗಿದೆ. ಮೊಮ್ಮಗ ತಾತನ ದೇವರನ್ನು ತನ್ನ ಅಭಿರುಚಿಗನುಸಾರವಾಗಿ ಬದಲಾಯಿಸಿ ಕೊಳ್ಳದಿದ್ದರೆ ನಾಸ್ತಿಕನಾಗಬೇಕಾಗುತ್ತೆ. ಹಳೆಯ ದೇವರನ್ನು ಹೊಸದಾಗಿ ಮಾಡುವುದು ನನ್ನ ಕರ್ತವ್ಯ. ಹಿಂದಿನ ದಾಸ್ಯವನ್ನು ತಪ್ಪಿಸಿ ದೇವರನ್ನು ಉಳಿಸಲು ನಾನು ಹುಟ್ಟಿ ಬಂದಿದ್ದೇನೆ," ಸಂದೀಪ ನೆಂದ.

ಚಿಕ್ಕಂದಿನಿಂದಲೂ ಸಂದೀಪ ಅಭಿಪ್ರಾಯಗಳೊಡನಾಡುವ ಮಾಟಗಾರ. ಸತ್ಯಾನ್ವೇಷಣದಲ್ಲಿ ಆಸೆ ಇಲ್ಲದಿದ್ದರೂ, ಹಾಗೆಂದು ತೋರಿಸಿಕೊಳ್ಳುವುದರಲ್ಲಿ ಅವನಿಗೆ ಸಂತೋಷ. ಆಫ್ರಿಕದ ಕಾಡುಗಳಲ್ಲಿ ಹುಟ್ಟಿದರೆ ನರಭಕ್ಷಣದಿಂದಲೇ ಮಾನವನ ಅನ್ಯೋನ್ಯ ಸಂಪರ್ಕ ಸಾಧ್ಯವೆಂದು ಸಾಧಿಸಲು ಮಾತುಗಳನ್ನು ಸೃಷ್ಟಿಸಿ ಆನಂದಿಸುತ್ತಿದ್ದನು. ಆದರೆ ಮಾಯಾವಿಗಳು ತಾವೇ ಮಾಯೆಗೀಡಾಗುತ್ತಾರೆ. ಪ್ರತಿ ಭ್ರಮೆಯನ್ನು ಸೃಷ್ಟಿಸಿದಾಗಲೂ, ಮೊದಲು ಪ್ರತಿಪಾದಿಸಿದ ಭ್ರಮೆಗೆ ಅದು ವ್ಯತಿರಿಕ್ತವಾಗಿದ್ದರೂ, ಅದನ್ನೂ ನಿಜವೆಂದು ನಂಬುತ್ತಾರೆ.

ಏನಾದರೂ ಆಗಲಿ ಜಹಗೀರಿಯಲ್ಲಿ ಮದ್ಯ ತಯಾರಿಸಲು ನಾನು ಅಪ್ಪಣೆ ಕೊಡುವುದಿಲ್ಲ. ದೇಶ ಸೇವೆಗೆ ಸಿದ್ಧರಾಗಿರುವ ಯುವಕರು ಈ ವಿಧದ ಉನ್ಮಾದವನ್ನು ಅಭ್ಯಾಸ ಮಾಡಿಕೊಳ್ಳ ಬಾರದು. ಅಮಲಿನಿಂದ ಕೆಲಸವನ್ನಪೇಕ್ಷಿಸುವವರು, ಉನ್ಮತ್ತತೆಗೆ ಲಕ್ಷ್ಯಕೊಡುವರೇ ಹೊರತು ತಾವು ಮೋಹಕ್ಕೀಡುಮಾಡುವ ಮನಸ್ಸಿನ ಕಡೆ ಲಕ್ಷ್ಯ ಕೊಡುವುದಿಲ್ಲ.

ವಿಮಲೆಯ ಎದುರಿಗೆ, ಸಂದೇಪನನ್ನು ಹೊರಡೆನ್ನಬೇಕಾಯಿತು. ಇಬ್ಬರಿಗೂ ನನ್ನ ವಿಚಾರದಲ್ಲಿ ತಪ್ಪು ಅಭಿಪ್ರಾಯ ಉಂಟಾಗಬಹುದು. ಆದರೆ ಆ ಭಯವನ್ನು ನಾನೂ ಬಿಡಬೇಕು. ವಿಮಲೆಗೂ ತಪ್ಪು ಅಭಿಪ್ರಾಯ ಉಂಟಾಗಲಿ ...

ಡಾಕ್ಕಾದಿಂದ ಮುಸಲ್ಮಾನ ಬೋಧಕರು ಬರುತ್ತಿದ್ದಾರೆ. ನನ್ನ ಭೂಮಿಯಲ್ಲಿ ಗೋಹತ್ಯೆ ಹಿಂದುಗಳಿಗೆಷ್ಟು ನಿಷಿದ್ಧವಾಗಿತ್ತೋ ಮುಸಲ್ಮಾನರಿಗೂ ಹಾಗೆಯೇ ಇತ್ತು. ಆದರೆ ಈಗ ಅಲ್ಲಲ್ಲಿ ಗೋಹತ್ಯೆಯ ಪ್ರಸಂಗಗಳು ನಡೆಯುತ್ತಿವೆ. ಮೊದಲು ಈ ವಿಚಾರವನ್ನು ಮುಸಲ್ಮಾನರೇ ಬೇಸರದಿಂದ ತಿಳಿಸಿದರು. ಇದು ದುರಂತ ಪ್ರಸಂಗ. ಅಡ್ಡಿಮಾಡಿದರೆ ಮತದ್ವೇಷ ಉರಿಯಬಹುದು. ಅದೇ ಅವರ ಬುದ್ಧಿವಂತಿಕೆ.

ಹಿಂದುಗಳನ್ನು ಕರೆಸಿ ವಿಚಾರವನ್ನು ಅನುದ್ವಿಗ್ನತೆಯಿಂದ ವಿವೇಚಿಸುವಂತೆ ಮಾಡಲು ಪ್ರಯತ್ನಿಸಿದೆ. "ನಮ್ಮ ನಂಬಿಕೆ ನಮಗಿರಲಿ, ಆದರೆ ಬೇರೆಯವರನ್ನು ಒತ್ತಾಯ ಪಡಿಸಬಾರದು. ನಮ್ಮಲ್ಲಿ ಅನೇಕರು ವೈಷ್ಣವರಾಗಿದ್ದರೂ ಶಾಕ್ತರು, ನೋಡಿ, ಪ್ರಾಣಿ ಬಲಿ ಕೊಡುವುದಿಲ್ಲವೆ? ಹಾಗೆಯೇ ನಾವು ಮುಸಲ್ಮಾನರನ್ನೂ ಅಡ್ಡಿ ಪಡಿಸಬಾರದು. ದಯವಿಟ್ಟು ಗಲಾಟೆ ಮಾಡಬೇಡಿ," ಎಂದು ಹೇಳಿದೆ.

"ಇಷ್ಟು ದಿನವೂ ಈ ಗಲಾಟೆಗಳಿರಲಿಲ್ಲ ಮಹಾರಾಜ," ಎಂದರು.

"ಇದುವರೆಗೆ ಆವರೂ ಒಪ್ಪಿ ಹಾಗೆ ನಡೆಸುಕೊಳ್ಳುತ್ತಿದ್ದರು. ಪುನಃ ಹಾಗೆಯೇ ಆಗುವಂತೆ ವರ್ತಿಸೋಣ ಆದರೆ ಜಗಳದಿಂದ ಇದು ಸಾಧ್ಯವಿಲ್ಲ."

"ಇಲ್ಲ, ಮಹಾರಾಜ! ಆ ದಿನಗಳು ಕಳೆದು ಹೋದವು. ಬಲದಿಂದಲೇ ನೀವು ಇದನ್ನು ನಿವಾರಿಸಬೇಕು."

"ದಬ್ಬಾಳಿಕೆಯಿಂದ, ಗೋಹತ್ಯೆಯೊಂದೇ ಅಲ್ಲ; ನರ ಹತ್ಯೆಯೂ ನಡೆಯಬಹುದು."

ಅವರಲ್ಲೊಬ್ಬನು ಇಂಗ್ಲಿಷ್ ಓದಿದವನು. ಈ ಕಾಲದ ಗಾಳಿಯಲ್ಲಿ ಅಲೆಯುವ ಮಾತುಗಳನ್ನು ಕಲಿತಿದ್ದನು. "ಇದು ಶಾಸ್ತ್ರಾನುಸರಣೆ ಮಾತ್ರವಲ್ಲ. ನಮ್ಮ ದೇಶ ವ್ಯವಸಾಯದ ದೇಶ; ಹಸುಗಳು...."

"ಈ ದೇಶದಲ್ಲಿ ಎಮ್ಮೆಗಳೂ ಹಾಲನ್ನು ಕೊಡುತ್ತವೆ; ಉಳುವುದಕ್ಕೂ ಉಪಯೋಗಿಸಲ್ಪಡುತ್ತವೆ. ಆದರೆ ಅವುಗಳ ರಕ್ತ ಬಳಿದುಕೊಂಡು ಕಡಿದ ತಲೆಗಳನ್ನೆತ್ತಿಕೊಂಡು ದೇವ ಸನ್ನಿಧಿಯಲ್ಲಿ ನಾವು ವಿಕಟ ನೃತ್ಯ ನಡೆಸುವವರೆಗೂ, ಮತ ಕ್ಕೋಸ್ಕರ ಮುಸಲ್ಮಾನರೊಡನೆ ಜಗಳವಾಡಿದರೆ ಹಾಸ್ಯಾಸ್ಪದ ವಾದೀತು. ಎಮ್ಮೆಯಲ್ಲದೆ, ಹಸುಮಾತ್ರ ಪವಿತ್ರವಾದರೆ ಅದು ಮತಾಂಧತೆಯೇ ಹೊರತು ಮತವಲ್ಲ." ಎಂದೆ.

ಇಂಗ್ಲಿಷ್ ಅರಿತವನು, "ಇದರ ಹಿಂದಿನ ಕತೆ ನಿಮಗೆ ತಿಳಿದಿಲ್ಲ. ಮುಸಲ್ಮಾನನಿಗೆ ತಾನು ಕಟ್ಟಳೆ ಕಾನೂನು ಮುರಿದರೂ ಶಿಕ್ಷೆಯಿಲ್ಲವೆಂಬ ಧೈರ್ಯವಿದೆ. ಪಾಚೂರು ವಿಚಾರ ಕೇಳಿದೀರಾ?"

"ಹೀಗೆ ಮುಸಲ್ಮಾನನನ್ನು ನಮ್ಮ ಎದುರಾಳಿಯಾಗಿ ಮಾಡಲು ಏಕೆ ಸಾಧ್ಯವಾಯಿತು? ನಮ್ಮ ಅಸಹಿಷ್ಣುತೆಯೇ ಕಾರಣವಲ್ಲವೆ? ಆದರಿಂದಲೇ ನಮಗೀ ಶಿಕ್ಷೆ. ನಾವು ಮಾಡಿದ ಪಾಪದ ಫಲವನ್ನೇ ಅನುಭವಿಸುತ್ತಿದ್ದೇವೆ."—ಎಂದೆ.

"ಹಾಗಾದರೆ ಸರಿ. ನಾವೂ ಸೇಡು ತೀರಿಸಿಕೊಳ್ಳುತ್ತೇವೆ.

ಅಧಿಕಾರಿಗಳಿಗೇ ನ್ಯಾಯದಲ್ಲಿ ನಂಬಿಕೆಯಿಲ್ಲ. ಒಂದಾನೊಂದು ಕಾಲದಲ್ಲಿ ಅವರು ರಾಜರಾಗಿದ್ದರು; ನ್ಯಾಯಮೂರ್ತಿಗಳಾಗಿದ್ದರು. ಈಗ ಅವರೇ ನ್ಯಾಯದ ಕಟ್ಟಳೆಗಳನ್ನು ಮೀರುವ ಕಳ್ಳರಾಗಿದ್ದಾರೆ. ಇದನ್ನು ಇತಿಹಾಸ ಮರೆತರೂ ನಾವು ಮರೆಯುವಂತಿಲ್ಲ."

ನನ್ನ ಅವಹೇಳನಗಳು ಎಲ್ಲಾ ಪತ್ರಿಕೆಗಳಲ್ಲೂ ಪ್ರಕಟವಾಗುತ್ತಿವೆ. ಚಕ್ರವರ್ತಿ ಮನೆತನದ ಶ್ಮಶಾನದಲ್ಲಿ ನನ್ನ ವಿಗ್ರಹವನ್ನು ಉತ್ಸಾಹದಿಂದ ಸುಟ್ಟರಂತೆ; ಬೇರೆ ಅವಮಾನ ಪ್ರಸಂಗಗಳೂ ಸಿದ್ಧವಾಗುತ್ತಿವೆ. ತಾವು ಪ್ರಾರಂಭಿಸುವ ಹತ್ತಿ ಕಾರ್ಖಾನೆಯಲ್ಲಿ ಪಾಲು ತೆಗೆದುಕೊಳ್ಳಬೇಕೆಂದು ನನ್ನನ್ನು ಕೇಳಿದರು. ನನ್ನ ಹಣ ಹೋದರೆ ಚಿಂತೆಯಿಲ್ಲವೆಂದೂ, ಬೇರೆ ಬಡಪಾಲುದಾರರು (ಶೇರುದಾರರು) ಹಣ ಕಳೆದುಕೊಳ್ಳುವುದು ನನಗಿಷ್ಟವಿಲ್ಲವೆಂದೂ ಹೇಳಿದೆ.

"ದೇಶದ ಅಭ್ಯುದಯದಲ್ಲಿ ನಿಮಗೆ ಆಸಕ್ತಿಯಿಲ್ಲವೆ, ಮಹಾರಾಜ?" ಎಂದು ಕೇಳಿದರು.

"ಕೈಗಾರಿಕೆಯಿಂದ ದೇಶದ ಅಭ್ಯುದಯವಾಗಬಹುದು. ಆದರೆ ಅಭ್ಯುದಯದಲ್ಲಿ ಆಸಕ್ತಿ ಮಾತ್ರದಿಂದ ಕೈಗಾರಿಕೆ ಅಭಿವೃದ್ಧಿಯಾಗಲಾರದು. ಬುದ್ಧಿ ಹಿಡಿತದಲ್ಲಿದ್ದಾಗಲೂ ಕೈಗಾರಿಕೆಗಳು ಮುಂದುವರಿಯಲಿಲ್ಲ. ಈಗ ಆವೇಶ ತುಂಬಿದ ಮಾತ್ರದಿಂದ ಅವು ಹೇಗೆ ಉದ್ಧಾರವಾದಾವು?" ಎಂದು ವಿವರಿಸಲು ಪ್ರಯತ್ನಿಸಿದೆ.

"ಹಣ ಕಳೆದುಕೊಳ್ಳಲು ಇಷ್ಟವಿಲ್ಲವೆಂದು ಒಪ್ಪಿಕೊಳ್ಳಬಾರದೆ?"

"ನಿಮಗೆ ಕೈಗಾರಿಕೆಯಲ್ಲಿ ಆಸಕ್ತಿ ಇದೆಯೆಂದು ಖಂಡಿತವಾದಾಗ ಹಣ ಕೊಡುತ್ತೇನೆ. ಬೆಂಕಿ ಹಚ್ಚಿದ ಮಾತ್ರದಿಂದ ಅಡಿಗೆ ಆದ ಹಾಗಾಗಲಿಲ್ಲ."

## ೧೩

ಇದೇನು ನಮ್ಮ ಚಕುವ ಟ್ರೆಜರಿ ಲೂಟಿಯಾಗಿದೆ. ಅಲ್ಲಿಂದ ೭೫೦೦ ರೂ ಗಳನ್ನು ಕಲ್ಕತ್ತೆಗೆ ಕಳುಹಿಸಬೇಕಾಗಿತ್ತು. ಸಣ್ಣ ನೋಟುಗಳ ಕಟ್ಟು ಸಿದ್ಧವಾಗಿತ್ತು. ಮಧ್ಯ ರಾತ್ರಿಯಲ್ಲಿ ದರೋಡೆಕಾರರು, ಕಾವಲುಗಾರನಾದ ಕಾಸಿಮನಿಗೆ ಗಾಯ ಮಾಡಿದ್ದರು. ಅದರಲ್ಲಿ ೬೦೦೦ರೂ ಗಳನ್ನು ಮಾತ್ರ ತೆಗೆದು ಕೊಂಡು ಮಿಕ್ಕುದನ್ನು ನೆಲದ ಮೇಲೆ ಚಲ್ಲಿ ಹೋಗಿದ್ದರು. ಡಕಾಯಿತರ ಗಲಾಟೆಯಾದ ಮೇಲೆ ಪೋಲಿಸರ ಗಲಾಟೆ. ಅಂತೂ ಮನಶ್ಶಾಂತಿಯಿಲ್ಲ.

ಮನೆಗೆ ಆಗಲೆ ವರ್ತಮಾನ ಬಂದಿತ್ತು. ದೊಡ್ಡರಾಣಿ "ಏನು ಅನಾಹುತ ತಮ್ಮಾ! ಏನು ಮಾಡುವುದು?"

ಆಕೆಯ ಹೆದರಿಕೆ ಹೋಗಲಾಡಿಸಲು ಪ್ರಯತ್ನಿಸಿದೆ. "ಇನ್ನೂ ಸ್ವಲ್ಪ ಮಿಕ್ಕಿದೆಯಲ್ಲಾ! ಬದುಕಿರಬಹುದು," ಎಂದೆ.

"ತಮಾಷೆಮಾಡಬೇಡಪ್ಪಾ! ಎಲ್ಲರಿಗೂ ನನ್ನ ಮೇಲೇಕೆ ಕ್ರೋಧ? ಸಮಾಧಾನಮಾಡಬಾರದೆ? ದ್ವೇಷಕಟ್ಟಿಕೊಂಡೇನು ಪ್ರಯೋಜನ?"

"ಎಲ್ಲರ ಸಂತೋಷಕ್ಕೋಸ್ಕರ ದೇಶ ನಾಶವಾಗಲು ಅವ ಕಾಶ ಕೊಡಲಾರೆ."

"ಶ್ಮಶಾನದಲ್ಲಿ ಅವರೆಂತಹ ಕೆಲಸ ಮಾಡಿವರು! ನಿನ್ನನ್ನು ಹೀಗೆ ಅಪಮಾನ ಪಡಿಸಬಹುದೆ! ಇಂಗ್ಲಿಷ್ ಉಪಾಧ್ಯಾಯಿ ನಿಯ ಸಹವಾಸದಿಂದ ಚಿಕ್ಕರಾಣಿಗಂತೂ ಏನೂ ಹೆದರಿಕೆಯಿಲ್ಲ. ನಾನೇನೋ ಉಪಶಮನ ಶಾಂತಿ ಮಾಡಬೇಕೆಂದು ಪುರೋಹಿತ ನಿಗೆ ಹೇಳಿ ಕಳುಹಿಸಿದೆ. ನನಗೋಸ್ಕರ, ದಯವಿಟ್ಟು ಕಲ್ಕ ತ್ತೆಗೆ ಹೊರಟು ಹೋಗು. ನೀನಿಲ್ಲಿದ್ದರೆ ಏನು ಅನಾಹುತವಾಗು ವುದೋ!"

ಅತ್ತಿಗೆಯ ಚಿಂತೆ ನನ್ನ ಹೃದಯ ಕರಗಿಸಿತು.

"ಅಷ್ಟು ಹಣವನ್ನು ನಿನ್ನ ಕೊಠಡಿಯಲ್ಲಿಟ್ಟುಕೊಳ್ಳಬೇಡ ವೆಂದು ಮೊದಲೇ ಹೇಳಲಿಲ್ಲವೆ? ಯಾರಿಗಾದರೂ ತಿಳಿದರೆ ಏನು ಗತಿ! ಹಣದ ಚಿಂತೆಯಲ್ಲ ನನಗೆ—ಆದರೆ...."

ಆಕೆಗೆ ಸಮಾಧಾನ ಮಾಡಲು ಹಣವನ್ನು ತಕ್ಷಣವೇ ಟ್ರೆಜರಿಗೆ ಸಾಗಿಸಿ ಕಲ್ಕತ್ತೆಗೆ ಕಳುಹಿಸುವ ಏರ್ಪಾಟು ಮಾಡುವೆ ನೆಂದೆ. ನಾವಿಬ್ಬರೂ ನನ್ನ ಕೊಠಡಿಗೆ ಹೋದಾಗ ಬಾಗಿಲು ಮುಚ್ಚಿತ್ತು. ತಟ್ಟಿದಾಗ ವಿಮಲ "ಬಟ್ಟೆ ಬದಲಾಯಿಸು ತ್ತಿದ್ದೇನೆ," ಎಂದಳು. "ಇದೇನಿಷ್ಟು ಬೇಗ ಅಲಂಕಾರ? ವಂದೇ ಮಾತರಂ ಸಭೆಯೇನೋ! ಕಳ್ಳರಾಣಿ, ಕೊಳ್ಳೆಹಣ ಎಣಿ ಸುತ್ತಿದ್ದೀಯೋ?" ಎಂದು ಹಾಸ್ಯಕ್ಕಾಗಿ ಅತ್ತಿಗೆ ಕೂಗಿದಳು.

"ಹಣದ ವಿಚಾರ ಆಮೇಲೆ ನೋಡುತ್ತೇನೆ." ಎಂದು ನಾನು ಹೊರಗೆ ಬಂದೆ. ಹೊರಗಡೆ ನಿಂತಿದ್ದ ಪೋಲೀಸು ಇನ್ ಸ್ಪೆಕ್ಟರನ್ನು ನೋಡಿ,

"ಡಕಾಯಿತರು ಸಿಕ್ಕಿದರೋ?" ಎಂದೆ.

"ಅನುಮಾನವಿದೆ."

"ಯಾರ ಮೇಲೆ?"

"ಕಾವಲುಗಾರ ಕಾಸಿಮನ ಮೇಲೆ."

"ಅವನಿಗೇ ಅಲ್ಲವೆ ಗಾಯವಾದದ್ದು?"

"ಅವನೇ ಮಾಡಿಕೊಂಡಿರಬಹುದು."

"ಅದು ಹೇಗೆ ಹೇಳಲಾದೀತು? ಅವನು ಬಹಳ ನಂಬಿಕೆಯ ಆಳು."

"ನಿಮಗೆ ನಂಬಿಕೆ ಇದ್ದರೂ ಅವನು ಕಳ್ಳನಾಗಿರಬಹುದು. ಇಪ್ಪತ್ತು ವರ್ಷಗಳ ಕಾಲ ನಂಬಿಕಸ್ಥರಾಗಿದ್ದವರು ತಟ್ಟನೆ...."

"ಹಾಗಿದ್ದರೂ ನಾನು ಅವನನ್ನು ಸೆರೆಮನೆಗೆ ಕಳುಹಿಸ ಲಾರೆ. ಮಿಕ್ಕ ಹಣವನ್ನು ಅಲ್ಲೇ ಏಕೆ ಬಿಟ್ಟು ಹೋದರು?"

"ನಮ್ಮ ಕಣ್ಣು ಮರೆಸುವುದಕ್ಕೆ. ನೀವೇನು ಹೇಳಿದರೂ, ಮಹಾರಾಜ, ಅವನು ಪಕ್ಕಾ ಕಳ್ಳನಂತೆ ತೋರುತ್ತೆ. ಕಾಲಕ್ಕೆ ಸರಿಯಾಗಿ ಕಾವಲು ನಿಂತರೂ ಎಲ್ಲಾ ಡಕಾಯತಿಗಳಲ್ಲೂ ಅವನ ಕೈ ಇರುವ ಹಾಗಿದೆ."

ಇಪ್ಪತ್ತು ಮೂವತ್ತು ಮೈಲಿಗಳಾಚೆ ಡಕಾಯಿತಿ ನಡೆಸಿ ಕಾಲಕ್ಕೆ ಸರಿಯಾಗಿ ಕೆಲಸಕ್ಕೆ ಬರುವ ಅನೇಕ ವಿಧಾನಗಳನ್ನು ಇನ್‌ಸ್ಪೆಕ್ಟರ್ ವಿವರಿಸ ತೊಡಗಿದರು.

"ಕಾಸಿಮನನ್ನು ಕರೆತಂದಿದ್ದೀರಾ ?"

"ಇಲ್ಲ, ಸೆರೆಯಲ್ಲಿಟ್ಟಿದ್ದೇವೆ. ನ್ಯಾಯಾಧೀಶರು ವಿಚಾರಿಸ ಬೇಕು."

"ನಾನು ಅವನನ್ನು ನೋಡಬೇಕು."

ಅಲ್ಲಿಗೆ ನಾನು ಹೋದಾಗ ಕಾಸಿಂ ಕಾಲ ಮೇಲೆ ಬಿದ್ದು ಅಳುತ್ತಾ "ದೇವರ ಸತ್ಯವಾಗಿ ನಾನು ಈ ಕೆಲಸ ಮಾಡಲಿಲ್ಲ" ಎಂದನು.

"ನನಗೆ ನಂಬಿಕೆ ಇದೆ ಕಾಸಿಂ. ಭಯಪಡಬೇಡ ನೀನು. ತಪ್ಪಿತಸ್ಥನಲ್ಲದಿದ್ದರೆ ಅವರೇನೂ ಮಾಡಲಾರರು" ಎಂದು ಧೈರ್ಯ ಹೇಳಿದೆ.

ಕಾಸಿಂ ನಡೆದುದನ್ನು ಸರಿಯಾಗಿ ವಿವರಿಸಲಾರದೆ ಹೋದನು. ನಾನೂರು ಐನೂರು ಜನರೂ ದೊಡ್ಡ ಬಂದೂಕಗಳೂ ಲೆಕ್ಕವಿಲ್ಲದಷ್ಟು ಕತ್ತಿಗಳೂ ಅವನ ಉತ್ಪ್ರೇಕ್ಷೆಯ ಕತೆಯಲ್ಲಿದ್ದವು. ಇದಕ್ಕೆ ಅವನ ಕ್ಷೋಭೆಗೊಂಡ ಮನಸ್ಸೋ, ತನ್ನ ಸುಲಭದ ಪರಾಜಯಕ್ಕೆ ವಿವರಣೆಯೋ ಕಾರಣವಾಗಿರಬೇಕು.

ಇದು ಹರೀಶ ಕುಂಪುವಿನ ಕೆಲಸವೆಂದೇ ಅವನ ನಂಬಿಕೆ. ಆತನ ಸೇವಕ ಏಕರಾಮನ ಧ್ವನಿಯ ಗುರುತೂ ಹತ್ತಿತೆಂದು ಹೇಳಿದ. "ಕಾಸಿಂ, ಬೇರೆಯವರ ಹೆಸರನ್ನೆಳೆಯ ಬೇಡ. ನೀನು ಯಾರಮೇಲೂ ವ್ಯವಹಾರ ಹೂಡಬೇಕಾಗಿಲ್ಲ." ಎಂದು ಎಚ್ಚರಿಸಿದೆ.

## ೧೪

ಮನೆಗೆ ಬಂದು ಗುರುವಿಗೆ ಹೇಳಿ ಕಳುಹಿಸಿದೆ. ಆತನು "ಇದೆಲ್ಲಾ ಒಳ್ಳೆಯದಕ್ಕಲ್ಲ. ಆತ್ಮ ಸಾಕ್ಷಿಯನ್ನು ಬದಿಗೊತ್ತಿ ಆ ಸ್ಥಳದಲ್ಲಿ ದೇಶವನ್ನು ನಿಲ್ಲಿಸುವುದು ಸರಿಯಲ್ಲ. ದೇಶದ ಪಾಪವೆಲ್ಲಾ ಘೋರ ರೂಪದಿಂದ ಹೊರಹೊಮ್ಮುತ್ತದೆ." ಎಂದರು.

"ಯಾರು ಮಾಡಿರಬಹುದು?"

"ನನ್ನನ್ನು ಕೇಳಬೇಡ. ಪಾಪದ ಭಯ ತಪ್ಪಿದೆ. ಎಲ್ಲರನ್ನೂ ಇಲ್ಲಿಂದ ಕಳುಹಿಸಿ ಬಿಡು."

"ಒಂದು ದಿನದ ಅವಧಿ ಕೊಟ್ಟದ್ದೇನೆ. ನಾಡಿದ್ದು ಎಲ್ಲರೂ ಹೊರಡುತ್ತಾರೆ."

"ಇನ್ನೊಂದು ಮಾತು. ವಿಮಲೆಯನ್ನು ಕಲ್ಕತ್ತೆಗೆ ಕರೆದುಕೊಂಡು ಹೋಗು. ಹೊರಗಿನ ಪ್ರಪಂಚವನ್ನು ಸಂಕುಚಿತ ದೃಷ್ಟಿಯಿಂದ ನೋಡುತ್ತಿದ್ದಾಳೆ. ಜನರ ಸ್ವಭಾವ ಅವಳಿಗೆ ಸರಿಯಾಗಿ ತಿಳಿದಿಲ್ಲ. ಜಗತ್ತನ್ನೂ, ಜನರನ್ನೂ ಅವರ ಕೆಲಸವನ್ನೂ ನೋಡಿದರೆ ಅವಳ ದೃಷ್ಟಿ ವಿಶಾಲವಾಗುತ್ತದೆ."

"ನಾನೂ ಹಾಗೆಯೇ ಆಲೋಚಿಸಿದೆ."

"ನಿಧಾನಿಸಬೇಡ, ನಿಖಿಲ್. ಮಾನವನ ಇತಿಹಾಸ ಕಟ್ಟಬೇಕಾದರೆ ಎಲ್ಲಾ ಜನಾಂಗಗಳ ಪ್ರಯತ್ನವೂ ಆವಶ್ಯಕ. ರಾಜಕೀಯಕ್ಕಾಗಿ ಅಂತರಾತ್ಮನನ್ನು ಮಾರುವುದು—ತನ್ನ ದೇಶವೊಂದನ್ನು ದೇವರನ್ನಾಗಿ ಮಾಡುವುದು—ಸಲ್ಲದ ಕೆಲಸ. ಪಾಶ್ಚಾತ್ಯರು ಈ ವಾದವನ್ನು ಒಪ್ಪುವುದಿಲ್ಲ. ಆದರೆ ಆ ವಿಚಾರದಲ್ಲಿ ನಮ್ಮ ಗುರುಗಳಾಗಲು ಅವರಿಗೆ ಯೋಗ್ಯತೆ ಇಲ್ಲ. ಸತ್ಯಕ್ಕಾಗಿ ಸಾಯುವವರು ಅಮರರಾಗುವರು. ಜನಾಂಗವೇ ಸತ್ಯಕ್ಕಾಗಿ ಸಾಯಬಲ್ಲುದಾದರೆ, ಮಾನವ ಇತಿಹಾಸದಲ್ಲಿ ಅದು ಅಮರತ್ವವನ್ನು ಪಡೆಯುವುದು. ಸೈತಾನನ ಅಣಕದ ನಗು ಆಗಸವನ್ನೆಲ್ಲ ಭೇದಿಸಿದರೂ, ಇಲ್ಲಿ, ಭರತ ಭೂಮಿಯಲ್ಲಿ, ನಮ್ಮ ಭೂಮಿಯಲ್ಲಿ,

ಸತ್ಯವೇ ಜಯಿಸಲಿ. ಪರದೇಶದಿಂದ ಎಂತಹ ಪಾಪದ ಸೋಂಕು ರೋಗ ನಮ್ಮ ದೇಶಕ್ಕೆ ನುಗ್ಗಿದೆ!"

ದಿನವೆಲ್ಲಾ ಕಳುವಿನ ಪತ್ತೆಯ ಗಲಾಟೆ. ರಾತ್ರಿ ಮಲಗಿದಾಗ ತುಂಬಾ ಆಯಾಸವಾಗಿತ್ತು. ಅತ್ತಿಗೆಯ ಹಣ ಟ್ರೆಜರಿಗೆ ಬೆಳಗ್ಗೆ ಕಳುಹಿಸಿದರಾಯಿತು ಎಂದುಕೊಂಡೆ. ಮಧ್ಯ ರಾತ್ರಿಯಲ್ಲಿ ಎಚ್ಚರವಾಯಿತು. ಕೋಣೆಯಲ್ಲಿ ಕತ್ತಲೆ ತುಂಬಿತ್ತು. ಯಾರೋ ಮುಲುಗಿದಂತೆ ಕೇಳಿಸಿತು. ಯಾರೋ ಅಳುತ್ತಿದ್ದಂತೆ! ರಾತ್ರಿ ಮಳೆಯಲ್ಲಿ ಬೀಸುವ ಗಾಳಿಯ ಅಲೆಗಳಂತೆ ಕಣ್ಣೀರಿನೊಡನೆ ಬಿಕ್ಕುವ ಶಬ್ದ ಕೇಳಿ ಬಂತು. ಕೋಣೆಯ ಮಧ್ಯದಲ್ಲೇ ಸದ್ದಾಗುತ್ತಿರುವಂತೆ ತೋರಿತು. ನಾನೊಬ್ಬನೇ ಇದ್ದೆ. ಕೆಲವು ದಿನದಿಂದ ವಿಮಲೆ ಪಕ್ಕದ ಕೋಣೆಯಲ್ಲಿ ಮಲಗುತ್ತಿದ್ದಳು. ಎದ್ದು ನೋಡಿದಾಗ ಕಿಟಕಿಯ ಬಳಿ ನೆಲದ ಮೇಲೆ ಕೆಳ ಮುಖವಾಗಿ ಬಿದ್ದಿದ್ದಳು.

ಇದೆಲ್ಲಾ ಮಾತುಗಳಿಗೆ ನಿಲುಕದ ವಿಚಾರ. ಜಗತ್ತಿನ ಹೃದಯದಲ್ಲಿ ಪ್ರತಿಷ್ಠಿತನಾಗಿ ಅದರ ಶೋಕವನ್ನೆಲ್ಲಾ ಅನುಭವಿಸುವ ಪರಮೇಶ್ವರನೊಬ್ಬನೇ ಇದನ್ನರಿತವನು. ಆಗಸ ನಿಶ್ಶಬ್ದ; ತಾರೆಗಳು ಮೌನ; ರಾತ್ರಿ ಮೂಕ; ಇದರ ಮಧ್ಯೆ ನಿದ್ದೆಗೆಟ್ಟ ಅದೊಂದು ಆರ್ತಧ್ವನಿ!

ಈ ದುಃಖಗಳಿಗೆಲ್ಲಾ ಹೆಸರಿಡಲು ಪ್ರಯತ್ನಿಸುತ್ತೇವೆ; ಆದರೆ ಹರಿದ ಹೃದಯದಿಂದ ಉಕ್ಕಿ ಬಂದು, ಗಾಢಾಂಧಕಾರದಲ್ಲಿ ಸುರಿದು ಹೋಗುತ್ತಿರುವ ಈ ಶೋಕಕ್ಕೆ ಹೆಸರಿದೆಯೆ? ಆ ಮಧ್ಯರಾತ್ರಿಯಲ್ಲಿ, ನಿಶ್ಶಬ್ದವಾದ ತಾರೆಗಳ ಕೆಳಗೆ ನಿಂತು, ಆ ವ್ಯಕ್ತಿಯನ್ನು ನೋಡಿದಾಗ ನನ್ನ ಮನಸ್ಸು ಬೆದರಿತು. "ಇವಳನ್ನು ಪ್ರಶ್ನಿಸಲು ನಾನಾರು? ಜೀವ ಸಾವುಗಳೇ, ಅನಂತಮೂರ್ತಿಯಾದ ಸ್ವಾಮಿಯೇ, ನಿನ್ನ ಮಾಯೆಗೆ ಮೌನದಿಂದ ತಲೆಬಾಗುವೆನು" ಎಂದುಕೊಂಡೆ.

ಹಿಂದಿರುಗಬೇಕೆನ್ನಿಸಿತು. ಸಾಧ್ಯವಾಗಲಿಲ್ಲ. ವಿಮಲೆಯ ಹತ್ತಿರ ನೆಲದ ಮೇಲೆ ಕುಳಿತು ಅವಳ ತಲೆಯ ಮೇಲೆ ಕೈಯಿಟ್ಟೆ. ಮುಟ್ಟಿದ ತಕ್ಷಣ ದೇಹ ಗಡುಸಾದರೂ ಮರುಕ್ಷಣ ಕಾಠಿಣ್ಯ ಮಾಯವಾಗಿ ಕಣ್ಣೀರು ಹರಿಯಿತು. ಬೆರಳುಗಳಿಂದ ಮೃದುವಾಗಿ ಅವಳ ಹಣೆ ಸವರಿದೆ. ಕೈಗಳಿಂದ ನನ್ನ ಕಾಲುಗಳಿಗಾಗಿ ತಡ ಕಾಡಿ ಅವುಗಳನ್ನು ಎದೆ ಬಿರಿಯುವಂತೆ ಹೃದಯಕ್ಕೆ ಅಪ್ಪಿ ಕೊಂಡಳು.

## ವಿಮಲೆಯ ಕಥೆ

### ೧೮

ಅಮೂಲ್ಯ ಕಲ್ಕತ್ತೆಯಿಂದ ಈ ದಿನ ಬರಬೇಕು. ಬಂದ ಕೂಡಲೇ ನನಗೆ ತಿಳಿಸಬೇಕೆಂದು ಆಳುಗಳಿಗೆ ಹೇಳಿದ್ದರೂ ಸುಮ್ಮ ನಿರಲಾರದೆ ಹೋದೆ. ಹೊರಗಿನ ಕೋಣೆಯಲ್ಲಿ ಅವನಿಗಾಗಿ ಕಾದೆ.

ಒಡವೆಗಳನ್ನು ಮಾರಲು ಕಳುಹಿಸಿದಾಗ ಸ್ವಾರ್ಥತೆಯಿಂದ ಕೂಡಿದ್ದೆ. ಅಷ್ಟು ಚಿಕ್ಕ ಹುಡುಗ ಬೆಲೆ ಬಾಳುವ ಒಡವೆಗಳನ್ನು ಮಾರಿದರೆ ಸಂಶಯಕ್ಕೀಡಾಗುವನೆಂದು ಆಲೋಚಿಸಲಿಲ್ಲ. ನಮ್ಮ ಅಪಾಯದ ಭಾರವನ್ನು ಬೇರೆಯವರ ಮೇಲೆ ಹೊರಿಸುವ ಹೆಂಗಸ ರೆಷ್ಟು ಅಬಲೆಯರು! ಸಾಯುವಾಗ ಸುತ್ತಲೂ ಇರುವವರನ್ನೂ ಎಳೆಯುತ್ತೇವೆ.

ಅಮೂಲ್ಯನನ್ನು ರಕ್ಷಿಸುವೆನೆಂದು ಹೆಮ್ಮೆಯಿಂದ ಹೇಳಿದ್ದೆ. ನೀರಿನಲ್ಲಿ ಕೊಚ್ಚಿ ಹೋಗುತ್ತಿರುವವಳು ಬೇರೆಯವರನ್ನು ರಕ್ಷಿಸ ಬಲ್ಲಳೆ? ರಕ್ಷಿಸುವ ಬದಲು ಸಾಯಲು ಕಳುಹಿಸಿದ್ದೇನೆ. ತಮ್ಮಾ, ನಾನೆಂತಹ ಅಕ್ಕ, ನಿನಗೆ! ಹಬ್ಬದ ದಿನ ಆಶೀರ್ವದಿಸಿದಾಗ ಯಮನೆಷ್ಟು ನಕ್ಕನೋ! ನನ್ನ ಪಾಪಭಾರದಿಂದ ಹುಚ್ಚಳಂತೆ ಅಲೆಯುತ್ತಿದ್ದೇನೆ.

ಮನುಷ್ಯನನ್ನು ರೋಗದಂತೆ ಪಾಪವೂ ಆಗಾಗ ಆವರಿಸುತ್ತದೆ. ಎಲ್ಲಿಂದಲೋ ಕ್ರಿಮಿ ಬಂದು ಸೋಕಿ, ಒಂದು ರಾತ್ರಿಯಲ್ಲಿ ಸಾವಿನ ಹಿಡಿತಕ್ಕೆ ಸಿಕ್ಕಿ ಬೀಳುತ್ತೇವೆ. ಇಂತಹ ರೋಗಿಯನ್ನು ಜಗತ್ತಿನಿಂದ ದೂರವಾಗಿ ಏಕಿಡುವುದಿಲ್ಲ? ಸೋಂಕು ಎಷ್ಟು ಭಯಂಕರವೆಂಬುದನ್ನು ನಾನಂತೂ ಅರಿತಿದ್ದೇನೆ. ಅದು ಲೋಕವನ್ನೇ ಸುಡಲು ಹೊರಟ ಕೈ ದೀವಿಗೆ.

ಒಂಬತ್ತು ಗಂಟೆ ಹೊಡೆಯಿತು. ಅಮೂಲ್ಯ ಪೋಲೀಸರಿಗೆ ಸಿಕ್ಕಿ ಬಿದ್ದು ಕೊಂದರೆಯಲ್ಲಿದ್ದಾನೆಂಬ ಭಯವನ್ನು ದೂರ ಮಾಡಲು ಸಾಧ್ಯವಾಗಲಿಲ್ಲ. ಪೋಲೀಸು ಆಫೀಸಿನಲ್ಲಿ ಬಹಳ ಕುತೂಹಲವಿರಬೇಕು—ಒಡವೆ ಯಾರದು? ಇವನಿಗೆಲ್ಲಿ ಸಿಕ್ಕಿತು? ಕಡೆಗೆ ನಾನೇ ಜಗತ್ತಿನೆದುರಿಗೆ ನಿಂತು ಉತ್ತರ ಕೊಡಬೇಕಾದೀತು.

ಆ ಉತ್ತರ ಏನು? ನಾನು ಅಸಡ್ಡೆ ಮಾಡಿದ ದೊಡ್ಡ ರಾಣಿಗೆ ಅನುಕೂಲಸಮಯ ಒದಗಿತು. ಜಗತ್ತಿನ ಜನರಿಂದ ನಿನ್ನ ಸೇಡು ತೀರುತ್ತದೆ. ದೇವಾ, ರಕ್ಷಿಸು. ನನ್ನ ಹೆಮ್ಮೆಯನ್ನು ನನ್ನ ಓರಗಿತ್ತಿಯ ಪಾದಗಳಲ್ಲಿ ಬಿಸಾಡುವೆನು.

ಸಹಿಸಲಾಗಲಿಲ್ಲ. ವೀಳ್ಯವನ್ನು ಹಾಕಿಕೊಂಡು ಕುಳಿತಿದ್ದ ದೊಡ್ಡ ರಾಣಿಯ ಬಳಿಗೆ ಹೋದೆ. ಅವಳ ಬಳಿ ಥಾಕೋ ಇದ್ದುದರಿಂದ ಅರೆಕ್ಷಣ ಹಿಂಜರಿದೆ. ಆದರೆ ಸಂಕೋಚವನ್ನು ಬದಿಗೊತ್ತಿ ಆಕೆಯ ಕಾಲಿಗೆ ನಮಸ್ಕರಿಸಿದೆ.

" ಇದೇನು ಚಿಕ್ಕರಾಣಿ. ಇದ್ದಕ್ಕಿದ್ದಂತೆ ಇಷ್ಟು ಮರ್ಯಾದೆ? "

" ಈದಿನ ನನ್ನ ಹುಟ್ಟಿದ ಹಬ್ಬ, ಅಕ್ಕಾ. ನಿಮಗೆಷ್ಟೊ ನೋವುಂಟುಮಾಡಿದ್ದೇನೆ. ಮುಂದೆ ಹಾಗೆ ಮಾಡದಂತೆ ಆಶೀರ್ವದಿಸಿ. ನನ್ನದು ಬಹಳ ಸಂಕುಚಿತ ಬುದ್ಧಿ. " ಪುನಃ ನಮಸ್ಕರಿಸಿ ಹೊರಡುತ್ತಿರಲು ಆಕೆ ಹಿಂದಕ್ಕೆ ಕರೆದು " ನಿನ್ನ ಹುಟ್ಟಿದ ಹಬ್ಬ

ವೆಂದು ಮೊದಲೇ ಹೇಳಲಿಲ್ಲವಲ್ಲಾ! ಮಧ್ಯಾಹ್ನ ನನ್ನೊಡನೆ ಊಟಕ್ಕೆ ಬರಬೇಕು " ಎಂದಳು.

ದೇವರೇ, ಈದಿನ ಸತ್ಯವಾಗಿ ನನ್ನ ಜನ್ಮದಿನವಾಗಲಿ. ಪುನಃ ಹುಟ್ಟಲು ಸಾಧ್ಯವಿಲ್ಲವೇ ? ದೇವಾ, ನನ್ನನ್ನು ಪರಿಶುದ್ಧ ಗೊಳಿಸಿ ಇನ್ನೊಮ್ಮೆ ಅವಕಾಶಕೊಡು.

ಪುನಃ ಕೋಣೆಗೆ ಹೋದಾಗ ಅಲ್ಲಿ ಸಂದೀಪನಿದ್ದ. ಅವ ನನ್ನು ನೋಡಿ ಬೇಸರವಾಯಿತು. ಪ್ರಾತಃಕಾಲದ ಬೆಳಕಿನಲ್ಲಿ ಅವನ ಮುಖದಲ್ಲಿ ಪ್ರತಿಭೆಯ ಪ್ರಕಾಶವಿರಲಿಲ್ಲ.

" ಕೋಣೆಯಿಂದ ಹೊರಗೆ ಹೋಗುತ್ತೀರಾ, " ಒರಟಾಗಿ ಹೇಳಿದೆ. ಸಂದೀಪ ನಕ್ಕು " ಅಮೂಲ್ಯ ಇಲ್ಲದಿರುವುದರಿಂದ ನನ್ನೊಡನೆ ಮಾತನಾಡಬಹುದಲ್ಲಾ" ಎಂದನು.

ನನ್ನ ಕರ್ಮ ತಿರುಗಿ ಬಿದ್ದಿತ್ತು. ನಾನೇ ಕೊಟ್ಟ ಅಧಿಕಾರ ವನ್ನು ಕಿತ್ತುಕೊಳ್ಳುವುದು ಹೇಗೆ. " ನಾನೊಬ್ಬಳೇ ಇರಲು ಬಯಸುತ್ತೇನೆ," ಎಂದೆ.

" ರಾಣಿ, ಬೇರೆಯವರಿಂದ ನಿನ್ನ ಏಕಾಂತಕ್ಕೆ ಭಂಗ ಬರಲಾರದು. ನಾನು ಯಾರೋ ಹೊರಗಿನವನಲ್ಲ. ನಾನು, ಸಂದೀಪ, ಸಾವಿರಾರು ಜನರಿಂದ ಸುತ್ತುವರಿಯಲ್ಪಟ್ಟಿದ್ದರೂ ಯಾವಾಗಲೂ ಒಂಟಿಗನೇ. "

" ಬೇರೆ ಸಮಯದಲ್ಲಿ ಬನ್ನಿ. ಈದಿನ ನಾನು..........."

" ಅಮೂಲ್ಯನಿಗೆ ಕಾದಿದ್ದೀಯೋ ? "

ನಾನು ಬೇಸರದಿಂದ ಹೊರಗೆ ಹೋಗಲು ಹೊರಟಾಗ ಸಂದೀಪ ಬಟ್ಟೆಯ ಮರೆಯಿಂದ ನನ್ನ ಒಡವೆಯ ಪೆಟ್ಟಿಗೆಯನ್ನು ತೆಗೆದು ಮೇಜಿನ ಮೇಲಿಟ್ಟನು. ನನಗೆ ಪೂರ ಗಾಬರಿಯಾಯಿತು.

" ಅಮೂಲ್ಯ ಹೋಗಲಿಲ್ಲವೆ ? "

" ಎಲ್ಲಿಗೆ ? "

" ಕಲ್ಕತ್ತೆಗೆ."

ಸಂದೀಪ ನಗುತ್ತಾ " ಇಲ್ಲ " ಎಂದನು.

ಸಧ್ಯ, ನನ್ನ ಆಶೀರ್ವಾದ ಫಲಿಸಿತು. ಅವನು ಬದುಕಿದ. ಅವನು ಸುರಕ್ಷಿತವಾಗಿದ್ದರೆ ಸಾಕು; ಭಗವಂತ ನನ್ನನ್ನು ಶಿಕ್ಷಿಸಲಿ.

ನನ್ನ ಮುಖದ ಬದಲಾವಣೆಯನ್ನು ತಿರಸ್ಕಾರದಿಂದ ನೋಡಿ ಸಂದೀಪ " ಏನಷ್ಟು ಸಂತೋಷ, ರಾಣಿ? ಈ ಒಡವೆಗಳಿಗೆ ಅಷ್ಟು ಬೆಲೆಯೆ? ಹಾಗಾದರೆ ಅವುಗಳನ್ನು ದೇವಿಗೆ ಕೊಡಲು ಹೇಗೆ ಮನಸ್ಸು ಬಂತು? ದಾನ ಕೊಟ್ಟದ್ದನ್ನು ಹಿಂದಕ್ಕೆ ತೆಗೆದುಕೊಳ್ಳುವೆಯಾ ? "

ಹೆಮ್ಮೆ ಕಡೆಯವರೆಗೂ ನಾಶವಾಗುವುದಿಲ್ಲ. ಒಡವೆಗಳ ಮೇಲೆ ನನಗೇನೂ ಆಸೆಯಿಲ್ಲವೆಂದು ತೋರಿಸಿಕೊಳ್ಳಲು, " ನಿನಗಷ್ಟು ದುರಾಸೆಯಿದ್ದರೆ ತೆಗೆದುಕೋ," ಎಂದೆ.

ಸಂದೀಪ " ಈ ದಿನ ನನ್ನ ಆಸೆಗೆ ಬಂಗಾಳದ ಸಂಪತ್ತೆಲ್ಲಾ ಬೇಕು. ಆಸೆಗಿಂತ ಹೆಚ್ಚಿನ ಶಕ್ತಿ ಇದೆಯೆ ? ಇಂದ್ರನಿಗೆ ಐರಾವತವಿರುವಂತೆ ಆಸೆ ಈ ಲೋಕದ ಮಹಾತ್ಮರ ವಾಹನ. ಹಾಗಾದರೆ ಈ ಒಡವೆಗಳು ನನಗೆ ತಾನೆ ? "

ಸಂದೀಪ ಪೆಟ್ಟಿಗೆಯನ್ನು ಬಟ್ಟೆಯ ಕೆಳಗೆ ಮರೆಮಾಡುವ ವೇಳೆಗೆ ಅಮೂಲ್ಯ ನುಗ್ಗಿ ಬಂದನು. ತುಟಿ ಒಣಗಿ ತಲೆ ಕೆದರಿಕೊಂಡು ಒಂದೇ ದಿನದಲ್ಲಿ ಎಳೆಯತನ ನಾಶವಾದಂತಿತ್ತು. ಅವನನ್ನು ನೋಡಿ ನನ್ನ ಹೃದಯ ಬಿರಿಯಿತು.

ಅವನು ನನ್ನ ಕಡೆ ನೋಡದೆ ನೆಟ್ಟಗೆ ಸಂದೀಪನ ಬಳಿಗೆ ಹೋಗಿ " ನನ್ನ ಪೆಟ್ಟಿಗೆ! ನನ್ನ ಪೆಟ್ಟಿಗೆಯಿಂದ ನನ್ನ ಒಡವೆಗಳ ಸಂದೂಕವನ್ನು ತೆಗೆದುಕೊಂಡೆಯೋ ? " ಎಂದನು.

" ನಿನ್ನ ಒಡವೆಗಳ ಪೆಟ್ಟಿಗೆ ! " ಸಂದೀಪ ಅಣಕ ಮಾಡಿದನು.

" ನನ್ನ ಪೆಟ್ಟಿಗೆಯಲ್ಲಿತ್ತು."

ಸಂದೀಪ ಗಟ್ಟಿಯಾಗಿ ನಕ್ಕು, “ ನನ್ನದು ನಿನ್ನದು ಎಂಬು ದರ ವ್ಯತ್ಯಾಸ ನಿನಗೆ ಸರಿಯಾಗಿ ತಿಳಿದಂತಿಲ್ಲ, ಅಮೂಲ್ಯ! ಸಾಯುವುದರೊಳಗೆ ನೀನೂ ಒಬ್ಬ ಮತ ಬೋಧಕನಾಗ ಬಹುದು ! ”ಎಂದನು.

ಅಮೂಲ್ಯ ಮುಖ ಮರೆಸಿಕೊಂಡು ಕುರ್ಚಿಯ ಮೇಲೆ ಕುಳಿತನು. ನಾನು ಕೈಯನ್ನು ತಲೆಯಮೇಲಿಟ್ಟು “ ಏನಾ ಯಿತು ಅಮೂಲ್ಯ? ” ಎಂದೆ. ಅವನೆದ್ದು ನಿಂತು “ ನಿನ್ನ ಒಡವೆ ಗಳನ್ನು ನಾನೇ ನಿನ್ನ ಕೈಗೆ ಹಿಂದಕ್ಕೆ ಕೊಡಬೇಕೆಂದಿದ್ದೆ, ಅಕ್ಕಾ. ಸಂದೀಪ ಬಾಬುವಿಗೆ ಇದು ತಿಳಿದು ತಾವೇ ಮುಂದೆಬಂದಿದ್ದಾರೆ.”

“ಒಡವೆಗಳಿಂದಾಗ ಬೇಕಾದುದೇನು. ಹೋದರೆ ಹೋಗಲಿ, ನಷ್ಟವೇನು ? ”

“ ಹೋಗುವುದೆಲ್ಲಿಗೆ ? ”

ಸಂದೀಪ “ ಒಡವೆಗಳು ನನ್ನವು. ನನ್ನರಾಣಿ ನನಗೆ ಕೊಟ್ಟ ಅಧಿಕಾರ ಮುದ್ರೆ ” ಎಂದನು.

“ ಅಲ್ಲ. ಅಲ್ಲ ! ಬೇಡಕ್ಕಾ, ನಿಮಗೋಸ್ಕರ ನಾನು ಹಿಂದಕ್ಕೆ ತಂದೆ. ಬೇರೆ ಯಾರಿಗೂ ನೀವು ಕೊಡಕೂಡದು.” ಅಮೂಲ್ಯ ಗಾಬರಿಯಿಂದ ಕೂಗಿ ಕೊಂಡ.

“ ನಿನ್ನ ಕಾಣಿಕೆಯನ್ನು ನಾನು ಸ್ವೀಕರಿಸಿದೆ, ತಮ್ಮಾ. ಆದರೆ ಅವನ ದುರಾಸೆ ನೀಗಲಿ.”

ಅಮೂಲ್ಯ ಕಾಡುಮೃಗದಂತೆ ಸಂದೀಪನ ಕಡೆ ನೋಡಿ “ ನೋಡಿ, ಸಂದೀಪ ಬಾಬು, ಗಲ್ಲಿಗೆ ಹಾಕಿದರೂ ನಾನು ಹೆದರುವವನಲ್ಲ. ನೀವು ಒಡವೆಗಳ ಪೆಟ್ಟಿಗೆಯನ್ನು ತೆಗೆದು ಕೊಂಡರೆ...........”

ಸಂದೀಪ, “ ಈ ವೇಳೆಗೆ ನಿನಗೂ ತಿಳಿದಿರಬೇಕು— ಅಮೂಲ್ಯ ! ನಾನು ನಿನಗೆ ಹೆದರುವವನಲ್ಲ ಎಂದು.”

ನನ್ನ ಕಡೆ ತಿರುಗಿ, “ ರಾಣಿ, ಈ ದಿನ ಒಡವೆಗಳನ್ನು

ನಿನಗೆ ಕೊಡಬೇಕೆಂದು ಬಂದೆನೇ ಹೊರತು ತೆಗೆದುಕೊಳ್ಳುವುದ ಕ್ಕಲ್ಲ. ನನ್ನ ಕಾಣಿಕೆಯನ್ನು ನೀನು ಅಮೂಲ್ಯನ ಕೈಯಿಂದ ತೆಗೆದುಕೊಳ್ಳುವುದು ಸರಿಯಲ್ಲ. ಅದನ್ನು ತಪ್ಪಿಸುವುದಕ್ಕೋಸ್ಕರ ಮೊದಲು ಅದರ ಮೇಲೆ ನನ್ನ ಹಕ್ಕನ್ನು ಸ್ಥಾಪಿಸಿದೆ. ಈಗ ನನ್ನ ಕಾಣಿಕೆಯನ್ನು ತೆಗೆದುಕೋ. ಈ ಹುಡುಗನಿಗೆ ಬೇಕಾದ ಹಾಗೆ ಸಮಾಧಾನ ಮಾಡು. ನಾನು ಹೋಗಬೇಕು. ಈ ನಡುವೆ ನನ್ನನ್ನು ಹೊರದೂಡಿ ಅವನೊಡನೆಯೇ ವಿಶೇಷ ಮಾತು ಕತೆ ನಡೆಸುತ್ತಿದ್ದೀ. ವಿಶೇಷಗಳು ಸಂಭವಿಸಿವರೆ ನನ್ನನ್ನು ದೂರ ಬೇಡ." ಎಂದನು.

ಅಮೂಲ್ಯನನ್ನು ಕುರಿತು "ಅಮೂಲ್ಯ, ನಿನ್ನ ಪೆಟ್ಟಿಗೆ, ಸಾಮನುಗಳನ್ನು ನಿನ್ನಮನೆಗೇ ಕಳುಹಿಸಿದ್ದೇನೆ. ನಿನ್ನ ಪದಾರ್ಥ ಗಳನ್ನು ಇನ್ನುಮೇಲೆ ನನ್ನ ಕೊಠಡಿಯಲ್ಲಿಡಬೇಡ." ಎಂದು ಹೇಳಿ ಹೊರಟು ಹೋದನು.

## ೧೯

"ನಿನ್ನೊಡನೆ ಒಡವೆಗಳನ್ನು ಮಾರಲು ಕಳುಹಿಸಿದಾಗಿ ನಿಂದ ನನಗೆ ಮನಶ್ಶಾಂತಿಯೇ ಇರಲಿಲ್ಲ, ಅಮೂಲ್ಯ" ಎಂದೆ.

"ಏಕೆ, ಅಕ್ಕಾ ?"

"ಕಳ್ಳನೆಂದು ಸಿಕ್ಕಿ ಬಿದ್ದು ತೊಂದರೆಗೊಳಗಾಗುವೆ ಯೆಂದು ಹೆದರಿದೆ. ಆರು ಸಾವಿರ ರೂಪಾಯಿ ಇಲ್ಲದಿದ್ದರೂ ಚಿಂತೆಯಿಲ್ಲ. ನನಗೋಸ್ಕರ ನೀನು ಇನ್ನೊಂದು ಕೆಲಸ ಮಾಡ ಬೇಕು-ತಕ್ಷಣ ಮನೆಗೆ, ನಿಮ್ಮ ತಾಯಿಯ ಬಳಿಗೆ ಹೋಗು."

ಅಮೂಲ್ಯ ಒಂದು ಸಣ್ಣ ಗಂಟನ್ನು ತೋರಿಸಿ, "ಆರು ಸಾವಿರ ತಂದಿದ್ದೇನಕ್ಕಾ," ಎಂದನು.

"ಎಲ್ಲಿಂದ ?"

ಅವನು ನನ್ನ ಪ್ರಶ್ನೆಗೆ ಉತ್ತರ ಕೊಡದೆ, "ಚಿನ್ನವನ್ನೇ

ತರಬೇಕೆಂದು ಬಹಳ ಪ್ರಯತ್ನಪಟ್ಟೆ. ಆಗಲಿಲ್ಲ. ಕಾಗದದ ಹಣ ತರಬೇಕಾಯಿತು."

" ಸತ್ಯವಾಗಿ ಹೇಳು, ಅಮೂಲ್ಯ, ಎಲ್ಲಿಂದ ತಂದೆ ? "

" ಹೇಳುವುದಿಲ್ಲ. "

ನನಗೆ ಕಣ್ಣು ಕತ್ತಲು ಕವಿದಂತಾಯಿತು. " ಏನು ಭಯಂಕರ ಕೃತ್ಯ ನಡೆಸಿದೆ, ಅಮೂಲ್ಯ ? "

" ಹಣ ತರಲು ಕೆಟ್ಟ ಕೆಲಸ ಮಾಡಿದೆನೆಂದು ಹೇಳುವೆ. ಇರಬಹುದು. ಆದರೆ ತಪ್ಪಿಗೆ ಶಿಕ್ಷೆ ಅನುಭವಿಸಿದ್ದೇನೆ. ಈಗ ಹಣ ನನ್ನದೇ. "

ತಿಳಿದುಕೊಳ್ಳಬೇಕೆಂಬ ಆಸೆಯೇ ಹೋಯಿತು. ರಕ್ತನಾಳಗಳು ಮುದುರಿ, ದೇಹ ಮುದುರಿಕೊಂಡಂತಾಯಿತು.

" ಎಲ್ಲಿಂದ ತಂದೆಯೋ ಅಲ್ಲೇ ಇಟ್ಟುಬಿಡು. ತೆಗೆದುಕೊಂಡು ಹೋಗು ಅಮೂಲ್ಯ, " ಎಂದು ಬೇಡಿಕೊಂಡೆ.

" ಸಾಧ್ಯವಿಲ್ಲವಲ್ಲಾ. "

" ಅಸಾಧ್ಯವಲ್ಲ, ತಮ್ಮಾ. ವಿಷಗಳಿಗೆಯಲ್ಲಿ ನೀನು ನನ್ನನ್ನು ಕಂಡೆ. ನಿನಗೆ ನಾನು ಮಾಡಿರುವಷ್ಟು ಕೆಡುಕನ್ನು ಸಂದೀಪನೂ ಮಾಡಿಲ್ಲ. "

ಸಂದೀಪನ ಹೆಸರು ಚುಚ್ಚಿದಂತಾಗಿ, " ಸಂದೀಪ ! ನಿನ್ನಿಂದಲೇ ಅವನ ಯೋಗ್ಯತೆ ನನಗೆ ತಿಳಿದುದು. ನಿನ್ನಿಂದ ತೆಗೆದುಕೊಂಡ ಹಣದಲ್ಲಿ ಅವನೊಂದು ಕಾಸೂ ಖರ್ಚುಮಾಡಿಲ್ಲ. ನೆಲದ ಮೇಲೆ ಸುರಿದುಕೊಂಡು ಹಿಗ್ಗಿದ :—' ಇದು ಹಣವಲ್ಲ ! ಶಕ್ತಿಯೆಂಬ ದಿವ್ಯ ಪದ್ಮದ ದಳಗಳು. ಸಂಪತ್ತಿನ ಸ್ವರ್ಗದಲ್ಲಿ ಕೇಳ ಬರುವ ಸಂಗೀತದ ನಾದ. ಇವು ಸೌಂದರ್ಯದ ಕಂಠವನ್ನಲಂಕರಿಸಿ ತಮ್ಮ ಮುಕ್ತಿಯನ್ನು ಕಂಡುಕೊಳ್ಳ ಬೇಕಾಗಿರುವುದರಿಂದ ಇವುಗಳನ್ನು ಖರ್ಚುಮಾಡಲು ನನಗೆ ಮನಸ್ಸಿಲ್ಲ. ಅಮೂಲ್ಯ, ನಿನ್ನ ದೃಷ್ಟಿಯಿಂದ ಇವುಗಳನ್ನು ಅಪವಿತ್ರಗೊಳಿಸ

ಬೇಡ. ಇವು ಲಕ್ಷ್ಮಿಯ ಮಂದಹಾಸ, ಇಂದ್ರನ ರಾಣಿಯ ಪ್ರಸನ್ನಕಾಂತಿ. ಖಂಡಿತ, ಇವುಗಳನ್ನು ಆ ಒರಟು ವ್ಯವಸ್ಥಾಪಕ ನಿಗೆ ಕೊಡಲಾರೆ. ಅವನ ಮಾತೆಲ್ಲಾ ಸುಳ್ಳಿರಬಹುದು. ದೋಣಿ ಯನ್ನು ಯಾರು ಮುಳುಗಿಸಿದರೆಂದು ಪೋಲೀಸರಿಗೆ ಪತ್ತೆ ಯಾಗಿಲ್ಲ. ದುಡ್ಡು ಹೊಡೆಯಲು ಆ ವ್ಯವಸ್ಥಾಪಕ ಏನೋ ಮಾಡುತ್ತಿದ್ದಾನೆ. ಅವನಿಂದ ಆ ಕಾಗದಗಳನ್ನು ನಾವು ಹಿಂದಕ್ಕೆ ಪಡೆಯಬೇಕು "—

'ಹೇಗೆ' ಎಂದು ನಾನು ಕೇಳಿದಾಗ—'ಬೆದರಿಸು!' ಎಂದನು. ಹಣ ಹಿಂದಕ್ಕೆ ಕೊಟ್ಟರೆ ನಾನು ಹಾಗೆಯೇ ಮಾಡುವು ದಾಗಿ ಹೇಳಿದೆ. ಅವನು—'ಆ ವಿಚಾರ ಆಮೇಲೆ ಆಲೋಚಿಸ ಬೇಕು.' ಎಂದನು. ನಾನು ಅವನನ್ನು ಹೆದರಿಸಿ ಆ ಕಾಗದ ಗಳನ್ನು ಪಡೆದು ಸುಡಲು ಮಾಡಿದ ಪ್ರಯತ್ನವನ್ನೆಲ್ಲಾ ಈಗ ಹೇಳುವುದಿಲ್ಲ. ಆ ರಾತ್ರಿ ನಾನು ಸಂದೀಪನ ಬಳಿಗೆ ಬಂದು— ಈಗ ಇನ್ನೇನೂ ಭಯವಿಲ್ಲ ನಮಗೆ. ಸವರನ್ನುಗಳನ್ನು ವಾಪಸು ಕೊಡು, ಅಕ್ಕನಿಗೆ ಹಣ ಕೊಡೋಣ". ಎಂದೆ. ಅವನು, "ಇದೇನು ನಿನ್ನ ಹುಚ್ಚು? ನಿಮ್ಮ ಅಕ್ಕನ ಸೀರೆ, ನಿನ್ನನ್ನು ದೇಶದಿಂದ ಮರೆಮಾಡಿದೆ. ವಂದೇ ಮಾತರಂ ಹೇಳಿ ಪಾಪ ದಿಂದ ಮುಕ್ತನಾಗು." ಎಂದನು.

"ಸಂದೀಪನ ಮಾಯೆ ನಿನಗೂ ತಿಳಿದಿದೆ. ಅಕ್ಕಾ, ಚಿನ್ನ ಅವನಲ್ಲೇ ಉಳಿಯಿತು. ರಾತ್ರಿಯೆಲ್ಲಾ ನಾನು ಕೆರೆಯ ಮೆಟ್ಟಿಲ ಮೇಲೆ ವಂದೇಮಾತರಂ ಗೊಣಗುತ್ತಾ ಕಳೆದೆ.

ನೀನು ಒಡವೆಗಳನ್ನು ಮಾರಲು ಕೊಟ್ಟಾಗ ಪುನಃ ಸಂದೀಪನ ಬಳಿಗೆ ಹೋದೆ. ನನ್ನ ಮೇಲೆ ಅವನಿಗೆ ಕೋಪ, ಅದನ್ನು ಮರೆಮಾಚಲು ಪ್ರಯತ್ನಿಸಿ 'ಅವು ನನ್ನ ಪೆಟ್ಟಿಗೆಗಳಲ್ಲಿ ದ್ದರೆ ನೀನೇ ತೆಗೆದುಕೋ' ಎಂದು ಬೀಗದ ಕೈ ಬಿಸಾಡಿದ. ಪೆಟ್ಟಿಗೆಗಳಲ್ಲಿ ಇರಲಿಲ್ಲ. 'ಎಲ್ಲಿದೆ ಹೇಳು' ಎಂದು ಪೀಡಿಸಿದೆ.

' ನಿನ್ನ ಹುಚ್ಚು ಹರಿದಾಗ ಹೇಳುತ್ತೇನೆ ಈಗಲ್ಲ ' ಎಂದ.

" ಅವನಿಂದ ಅವನ್ನು ಕೀಳಲು ಅಸಾಧ್ಯವೆಂದು ತಿಳಿದು ನನ್ನ ಹತ್ತಿರವಿದ್ದ ಆರುಸಾವಿರ ರೂಪಾಯಿ ನೋಟುಗಳಿಗೆ ಬದಲಾಗಿ ಸವರನ್ನು ಕೊಡಬೇಕೆಂದು ಕೇಳಿದೆ. ' ಕೊಡುತ್ತೇನೆ ' ಎಂದು ಹೇಳಿ ಒಳಗೆ ಹೋದ. ಒಳಗೆ ನನ್ನ ಪೆಟ್ಟಿಗೆ ಮುರಿದು, ಬೇರೆ ಬಾಗಿಲಿನಿಂದ ಒಡವೆ ಪೆಟ್ಟಿಗೆಯೊಡನೆ ನಿನ್ನ ಬಳಿಗೆ ಬಂದಿದ್ದಾನೆ. ನನ್ನನ್ನು ತರಲು ಬಿಡದೆ ಅದು ತನ್ನ ಕಾಣಿಕೆಯೆಂದು ಹೇಳಿಕೊಂಡಿದ್ದಾನೆ. ನನಗೆಷ್ಟು ನಷ್ಟ ? ನಾನು ಅವನನ್ನು ಕ್ಷಮಿಸಲಾರೆ. ಆದರೆ ಅಕ್ಕ, ನನ್ನ ಮೇಲೆ ಅವನ ಆಟ ಈಗ ಏನೂ ನಡೆಯುವುದಿಲ್ಲ. ನಿನ್ನಿಂದ ನನ್ನ ಬಿಡುಗಡೆಯಾಯಿತು." ಎಂದನು.

" ತಮ್ಮಾ , ಹಾಗಿದ್ದಗೆ ನನ್ನ ಬದುಕು ಸಾರ್ಥಕ. ಆದರೆ ಇನ್ನೂ ಕೆಲಸ ಉಳಿದಿದೆ, ಅಮೂಲ್ಯ. ಭ್ರಮೆ ಹರಿದರೆ ಮುಗಿಯಲಿಲ್ಲ. ಅದರ ಕಲೆಗಳನ್ನೂ ತೊಳೆಯಬೇಕು. ನಿಧಾನಿಸದೆ ಹಣವನ್ನು ಮೊದಲಿದ್ದ ಕಡೆ ಇಟ್ಟು ಬಾ. ಆಗುವುದಿಲ್ಲವೆ, ತಮ್ಮಾ?"

" ನಿನ್ನ ಆಶೀರ್ವಾದವಿದ್ದರೆ ಎಲ್ಲಾ ಸಾಧ್ಯ, ಅಕ್ಕಾ."

" ಈ ಕೆಲಸ ನಿನ್ನೊಬ್ಬನ ಪ್ರಾಯಶ್ಚಿತ್ತವಲ್ಲ ; ನನ್ನದೂ ಕೂಡ. ನಾನು ಹೆಂಗಸು, ಹೊರಗೆ ಹೋಗುವಂತಿಲ್ಲ. ಸಾಧ್ಯವಿದ್ದರೆ ನಾನೇ ಹೋಗುತ್ತಿದ್ದೆ. ನನ್ನ ಪಾಪದ ಭಾರವನ್ನು ನಿನ್ನ ಮೇಲೆ ಹೊರಿಸುವುದೇ ನನಗೆ ಗುರುತರ ಶಿಕ್ಷೆ."

" ಹಾಗೆನ್ನ ಬೇಡ, ಅಕ್ಕಾ. ನಾನು ಹೋಗುತ್ತಿದ್ದುದು ನಿನ್ನ ಹಾದಿಯಲ್ಲಲ್ಲ. ಆ ಹಾದಿಯಲ್ಲಿದ್ದ ಕಷ್ಟ, ತೊಂದರೆಗಳು ನನ್ನನ್ನಾಕರ್ಷಿಸಿದುವು. ಈಗ ನಿನ್ನ ಹಾದಿಯಲ್ಲಿ ನಡೆಯುವುದರಲ್ಲಿ ಸಾವಿರ ಪಾಲು ಹೆಚ್ಚಿನ ತೊಂದರೆಗಳಿದ್ದರೂ ನಿನ್ನ ಪಾದಧೂಳಿ ಜಯಿಸುವ ಶಕ್ತಿ ನೀಡುತ್ತದೆ. ಹಣ ಹಿಂದಿರುಗಿಸಬೇಕೆಂದು ನಿನ್ನಪ್ಪಣೆಯೇ ? "

“ನನ್ನ ಅಪ್ಪಣೆಯಲ್ಲ, ತವ್ಮಾ. ಭಗವಂತನ ಆಜ್ಞೆ.”

“ನನಗದೆಲ್ಲಾ ಗೊತ್ತಿಲ್ಲ. ಭಗವಂತನ ಆಜ್ಞೆಯೇ ಆಗಲಿ, ನಿನ್ನ ಬಾಯಿಂದ ಬಂದರೆ ನನಗೆ ಸಾಕು. ನಾನು ಹೊರಡುವ ಮುಂಚೆ ಪ್ರಸಾದ ಕೊಡುವುದನ್ನು ಮರೆಯಬೇಡ. ಸಾಧ್ಯವಾದರೆ ಸಾಯಂಕಾಲವೇ ಕೆಲಸ ಮುಗಿಸುತ್ತೇನೆ.”

“ಹಾಗೇ ಆಗಲಿ” ಎಂದು ಹೇಳಿ ನಗಲು ಪ್ರಯತ್ನಿಸಿದಾಗ ನನ್ನ ಕಣ್ಣಲ್ಲಿ ನೀರು ತುಂಬಿ ಬಂತು.

# ಅಧ್ಯಾಯ ೧೧

# ವಿಮಲೆಯ ಕಥೆ

## ೨೦

ಅಮೂಲ್ಯ ಹೊರಟು ಹೋಗಲು ನನಗೆ ಗಾಬರಿಯಾ ಯಿತು. ತಾಯಿಯ ಒಬ್ಬನೇ ಮಗನನ್ನು ಎಂತಹ ಕಷ್ಟ ಕೆಲ ಸಕ್ಕೆ ಕಳುಹಿಸಿದೆ! ದೇವಾ, ನನ್ನ ಪ್ರಾಯಶ್ಚಿತ್ತ ಇಷ್ಟು ವೈಭವ ದಿಂದ ಕೂಡಿರಬೇಕೆ? ಇಷ್ಟು ಜನರನ್ನು ತೊಂದರೆಗೆ ಸಿಕ್ಕಿಸದೆ ನನ್ನ ಶಿಕ್ಷೆಯನ್ನು ಒಬ್ಬಳೇ ಅನುಭವಿಸಲು ಸಾಧ್ಯವಿಲ್ಲವೆ? ಈ ಅರಿಯದ ಮಗುವಿನ ಮೇಲೆ ನಿನ್ನ ಕೋಪವನ್ನು ತೋರಿಸಬೇಡ.

" ಅಮೂಲ್ಯ " ಎಂದು ಕೂಗಿದಾಗ ಅವನಿಗೆ ಕೇಳಿಸಲಿಲ್ಲ.

ಬಾಗಿಲ ಬಳಿ ಹೋಗಿ ಪುನಃ " ಅಮೂಲ್ಯ " ಎಂದು ಕರೆದೆ.

" ಯಾರಲ್ಲಿ? "

" ಏನು ತಾಯಿ ? "

" ಅಮೂಲ್ಯನನ್ನು ಕರೆ."

ಏನಾಯಿತೋ ನಾನರಿಯೆ. ಪ್ರಾಯಶಃ ಅವನಿಗೆ ಅಮೂ ಲ್ಯನ ಗುರುತಿರಲಿಲ್ಲವೇನೋ. ಸಂದೀಪನೊಡನೆ ಹಿಂದಕ್ಕೆ ಬಂದ.

ಒಳಕ್ಕೆ ಬಂದು, " ನೀನು ಕಳುಹಿಸಿದಾಗಲೇ, ಪುನಃ ಕರೆ ಯುವೆಯೆಂದು ನನ್ನ ಅಂತರಾತ್ಮ ಉಸುರಿತು." ಎಂದನು. ಒಬ್ಬನೇ ಚಂದ್ರನಿಂದ ಉಬ್ಬರವಿಳಿತಗಳಾಗುತ್ತವೆ. ಕರೆಯುವೆ ಯೆಂದು ಖಂಡಿತವಾಗಿ ತೋರಿ ಕಾದಿದ್ದೆ. ನಿನ್ನ ಆಳು ಬರು ತ್ತಲೇ ಅವನು ಕೂಗುವುದಕ್ಕೆ ಮೊದಲೇ—' ಬರುತ್ತೇನೆ; ತಕ್ಷಣ ಬರುತ್ತೇನೆ ' ಎಂದೆ. ಅವನಿಗೆ ಆಶ್ಚರ್ಯವಾಯಿತು. ನಾನು ಮಂತ್ರವಾದಿಯೆಂಬಂತೆ ಬಾಯಿ ಬಿಟ್ಟುಕೊಂಡು ನೋಡಿದ.

ಲೋಕದಲ್ಲಿ ಎಲ್ಲಾ ಕದನಗಳೂ ಮಾಯಾ ಶಕ್ತಿಗಳಿಂದ ನಡೆಯುತ್ತವೆ. ಮಂತ್ರವನ್ನೆದುರಿಸಿ ಮಂತ್ರ—ಅದೃಶ್ಯಲಕ್ಷ್ಯ ವನ್ನು ತಾಕುವ ನಿಶ್ಶಬ್ದ ಆಯುಧಗಳು. ಕಡೆಗೆ ನನಗೆ ಸಮನಾದ ಎದುರಾಳಿ ನೀನು ದೊರೆತೆ. ಮಾಯಾವಿಯಾದ ರಣದೇವಿ ! ನಿನ್ನ ಬತ್ತಳಿಕೆ ತುಂಬಿದೆ. ಸಂದೀಪನನ್ನು ಇಷ್ಟ ಬಂದಂತೆ ಓಡಾಡಿಸಲು ಶಕ್ತಳಾದವಳು ಲೋಕದಲ್ಲೆಲ್ಲಾ ನೀನೊಬ್ಬಳೇ. ಈಗ ಅವನಿಗೇನಪ್ಪಣೆ ಮಾಡುವೆ—ಕಾಲಬಳಿ ಬಿದ್ದಿದ್ದಾನೆ. ಬಂಧನದಲ್ಲಿಡುವೆಯೋ, ಕೊನೆಯ ಪೆಟ್ಟು ಕೊಡುವೆಯೋ ? ಮೊದಲೇ ಎಚ್ಚರಿಸುತ್ತೇನೆ ರಾಣಿ ! ಈ ಪ್ರಾಣಿಯನ್ನು ಬಂಧನ ದಲ್ಲಿಡುವುದು ಎಷ್ಟು ಕಷ್ಟವೋ ಕೊಲ್ಲುವುದೂ ಅಷ್ಟೇ ಕಷ್ಟ. ಆದರೆ ಮಾಯೆಯ ಆಯುಧಗಳನ್ನುಪಯೋಗಿಸಿ ಹೊತ್ತೇಕೆ ಕಳೆಯುವೆ ? ”

ಸೋಲಿನ ಸಮಯ ಸಮೀಪಿಸಿತೆಂದು ಸಂದೀಪನಿಗೆ ತೋರಿ ರಬೇಕು. ಉತ್ತರವನ್ನೇ ಅಪೇಕ್ಷಿಸದೆ ಬಡಬಡಿಸುತ್ತಿದ್ದ. ನಾನು ಹೇಳಿ ಕಳುಹಿಸಿದುದು ಅಮೂಲ್ಯನಿಗೆಂದು ಅವನಿಗೆ ತಿಳಿ ದಿರಬೇಕು. ಆದರೂ ಬೇಕೆಂದು ಈ ಉಪಾಯ ಹೂಡಿದ್ದ. ನನಗೆ ಮಾತನಾಡಲು ಅವಕಾಶವೇ ಕೊಡಲಿಲ್ಲ. ಆದರೆ ಅದ ರಿಂದ ಅವನ ದೌರ್ಬಲ್ಯ ನನಗೆ ತಿಳಿಯಿತು. ಈಗ ಅವನಿಗೆ ಸೂಜಿಯ ಮೊನೆಯಷ್ಟು ಜಾಗ ಬಿಟ್ಟು ಕೊಡಕೂಡದು.

“ ಸಂದೀಪ ಬಾಬು, ಹೀಗೆ ನಿಲ್ಲಿಸದೆ ಭಾಷಣಮಾಡಲು ಹೇಗೆ ಸಾಧ್ಯ ? ಮೊದಲೇ ಗಟ್ಟಿ ಮಾಡುತ್ತೀರೋ ? ” ಎಂದೆ.

ಸಂದೀಪನ ಮುಖ ಕೆಂಪಾಯಿತು.

ನಾನು, “ ಎಲ್ಲಾ ಬಗೆಯ ಭಾಷಣಗಳನ್ನೂ ಸಿದ್ಧಪಡಿಸಿ ರುವ ಪುಸ್ತಕವಿದೆಯೆಂದು ಕೇಳಿದ್ದೇನೆ. ನಿಮ್ಮ ಹತ್ತಿರ ಇದೆಯೋ ? ” ಎಂದೆ.

ಹಲ್ಲು ಕಡಿಯುತ್ತಾ ಸಂದೀಪ, “ ಹೆಂಗಸರಿಗೆ ದೇವರು

ಬೇಕಾದಷ್ಟು ವೈಯ್ಯಾರವನ್ನು ಕೊಟ್ಟಿದ್ದಾನೆ. ಸಹಾಯಕ್ಕೆ ನೆಯ್ಗೆಯವರೂ ಅಕ್ಕಸಾಲಿಗರೂ ಇದ್ದಾರೆ. ಆದರೆ ಪುರುಷರು ಅನಾಥರೆಂದು ತಿಳಿಯಬೇಡಿ. ”

“ ಮನೆಗೆ ಹೋಗಿ ಪುಸ್ತಕ ನೋಡಿ, ಸಂದೀಪ ಬಾಬು. ಮಾತುಗಳು ಸರಿಯಾಗಿ ಬರುತ್ತಿಲ್ಲ. ಬಾಯಿ ಪಾಠದಲ್ಲಿರುವ ತೊಂದರೆಯೇ ಅದು. ”

ಮೈಮರೆತು ಸಂದೀಪ, “ ನೀನು ! ನೀನು ನನಗೆ ಅವ ಮಾನ ಮಾಡುತ್ತೀಯಾ ! ನಿನ್ನ ವಿಚಾರ ನನಗೆ ತಿಳಿಯದು ದೇನಿದೆ ? ” ಮುಂದೆ ಮಾತೇ ಹೊರಡಲಿಲ್ಲ.

ಮಾಯಾವಿ ಸಂದೀಪ ಮೋಡಿಯ ಸಹಾಯವಿಲ್ಲದಿದ್ದರೆ ಶಕ್ತಿಯನ್ನೆಲ್ಲಾ ಕಳೆದುಕೊಳ್ಳುತ್ತಾನೆ. ರಾಜಪೀಠದಿಂದ ಅಸಭ್ಯತೆ ಗಿಳಿದ ಅವನ ದೌರ್ಬಲ್ಯದಿಂದ ನನಗಾದ ಆನಂದಕ್ಕೆ ಮೇರೆ ಯುಂಟೆ ! ಒರಟುತನದಿಂದ ಕಠಿಣನಾದಷ್ಟಕ್ಕೂ ನನ್ನ ಆನಂದ ಉಕ್ಕಿ ಹರಿಯಿತು. ನನ್ನನ್ನು ಬಂಧಿಸಿದ್ದ ಅವನ ಸರ್ಪಪಾಶಗಳು ಉಡುಗಿದುವು–ನಾನು ಬಿಡುಗಡೆ ಹೊಂದಿದೆ. ಮುಕ್ತಳಾದೆ ! ‘ಒರಟನಾಗು, ಅಪಮಾನ ಪಡಿಸು ! ಅದೇ ನಿನ್ನ ನಿಜಸ್ವರೂಪ. ಆದರೆ ನಿನ್ನ ಮೋಸದ ಮುಖಸ್ತುತಿ ಮಾತ್ರ ಬೇಡ.’

ಇಷ್ಟು ಹೊತ್ತಿಗೆ ನನ್ನ ಪತಿ ಬಂದರು. ಮೊದಲಿನ ಹಾಗೆ ತಕ್ಷಣ ಮುಖ ಸರಿಪಡಿಸಿಕೊಳ್ಳುವ ಶಕ್ತಿಯನ್ನು ಸಂದೀಪ ಕಳೆದುಕೊಂಡಿದ್ದನು. ನನ್ನಪತಿ ಕ್ಷಣ ಕಾಲ ವಿಸ್ಮಯದಿಂದ ಅವನ ಕಡೆ ನೋಡಿದರು. ಕೆಲವು ದಿನಗಳ ಕೆಳಗಾಗಿದ್ದರೆ ನನಗೆ ನಾಚಿಕೆಯಾಗುತ್ತಿತ್ತು. ಈ ದಿನ ಸಂತೋಷವೇ ಆಯಿತು. ನನ್ನ ಪತಿ ಏನಾದರೂ ತಿಳಿದುಕೊಳ್ಳಲಿ; ಸೋಲುತ್ತಿರುವ ಎದುರಾಳಿ ಯನ್ನು ಮುಗಿಸಿಬಿಡಬೇಕೆನ್ನಿಸಿತು.

ಇಬ್ಬರೂ ಮಾತನಾಡದೆ ಇದ್ದುದನ್ನು ನೋಡಿ ನನ್ನ ಪತಿ ಅನುಮಾನಿಸಿ ಕುರ್ಚಿಯಮೇಲೆ ಕುಳಿತರು. “ ಸಂದೀಪ್,

ನಿನಗಾಗಿ ಹುಡುಕುತ್ತಿದ್ದೆ. ಇಲ್ಲಿದ್ದೀಯೆಂದು ತಿಳಿಯಿತು" ಎಂದರು.

ಸಂದೀಪ ಒತ್ತಿ "ಇಲ್ಲಿಯೇ ಇದ್ದೇನೆ. ರಾಣಿ ಬೆಳಿಗ್ಗೆ ಹೇಳಿ ಕಳುಹಿಸಿದಳು. ಈ ಬಡ ಕೆಲಸಗಾರ ಎಲ್ಲವನ್ನೂ ಬಿಟ್ಟು ಅಪ್ಪಣೆ ಪಾಲಿಸಲು ಬಂದ." ಎಂದನು.

"ನಾನು ನಾಳೆ ಕಲ್ಕತ್ತೆಗೆ ಹೋಗಬೇಕಾಗಿದೆ. ನೀನೂ ನನ್ನೊಡನೆ ಬರುತ್ತೀ."

"ಏಕೆ ? ನಾನು ನಿನ್ನ ಆಳೆಂದುಕೊಂಡಿದ್ದೀಯೋ ?"

"ಹೋಗಲಿ ಬಿಡು. ನೀನೇ ಯಜಮಾನ; ಕಲ್ಕತ್ತೆಗೆ ಹೋಗುತ್ತಿದ್ದೀ. ನಾನೇ ನಿನ್ನ ಹಿಂದೆ ಬರುತ್ತೇನೆಂದುಕೋ."

"ನನಗಲ್ಲೇನೂ ಕೆಲಸವಿಲ್ಲ."

"ಅದಕ್ಕೇ ಹೋಗಬೇಕು. ಇಲ್ಲಿ ನಿನಗೆ ಬಹಳ ಕೆಲಸವಾಗಿದೆ."

"ನಾನು ಹೋಗುವುದಿಲ್ಲ".

"ಹಾಗಾದರೆ ಸಾಗಿಸಬೇಕಾಗುತ್ತೆ."

"ಬಲವಂತವಾಗಿ ?"

"ಹೌದು."

"ಹಾಗಾದರೆ ನಾನು ಹೋಗುತ್ತೇನೆ. ಆದರೆ ಪ್ರಪಂಚದಲ್ಲಿರುವುದು ಕಲ್ಕತ್ತೆ, ನಿನ್ನ ಜಹಗೀರಿ, ಎರಡೇ ಅಲ್ಲ. ಭೂಪಠದ ಮೇಲೆ ಬೇರೆ ಸ್ಥಳಗಳಿವೆ."

"ನೀನಾಡುವುದು ನೋಡಿದರೆ ಭೂಪಠದಮೇಲೆ ನನ್ನ ಜಹಗೀರಿ ಬಿಟ್ಟು ಬೇರೆ ಸ್ಥಳವೇ ಇರುವ ಹಾಗಿಲ್ಲ."

ಸಂದೀಪ ಎದ್ದು ನಿಂತ "ಒಂದೊಂದು ಸಲ ಒಬ್ಬ ಮನುಷ್ಯನ ಜಗತ್ತೆಲ್ಲಾ ಒಂದು ಸ್ಥಳದಲ್ಲಿ ಕೇಂದ್ರೀಕೃತವಾಗುತ್ತೆ. ನನ್ನ ಜಗತ್ತನ್ನು ಈ ಕೋಣೆಯಲ್ಲಿ ಕಂಡಿದ್ದೇನೆ. ಆದರಿಂದಲೇ ಇಲ್ಲಿ ಸ್ಥಿರವಾಗಿ ನಿಂತೆ."

ನನ್ನಕಡೆ ತಿರುಗಿ, " ನಿನಗೊಬ್ಬಳಿಗೆ ನನ್ನ ಮಾತು ಅರ್ಥವಾಗುತ್ತೆ ರಾಣಿ,—ಅಥವಾ ಆಗುವುದಿಲ್ಲವ್ರೋ ! ನಿನಗೆ ವಂದನೆಗಳು. ಹೃದಯದಲ್ಲಿ ಪೂಜೆ ತುಂಬಿಕೊಂಡು ದೂರವಾಗುತ್ತೇನೆ. ನೀನು ಪ್ರತ್ಯಕ್ಷವಾದಾಗಿನಿಂದ ನನ್ನ ಜೀವನ ಮಂತ್ರ ಬದಲಾಗಿದೆ. ಅದು " ವಂದೇ ಮಾತರಂ " ಅಲ್ಲ; " ವಂದೇ ಪ್ರೇಯಸಿ" " ವಂದೇ ಮೋಹಿನಿ." ತಾಯಿ ಕಾಪಾಡುತ್ತಾಳೆ, ಪ್ರೇಯಸಿ ನಾಶಕ್ಕೊಯ್ಯುತ್ತಾಳೆ. ಆದರೆ ಎಂತಹ ಪ್ರಿಯವಾದ ವಿನಾಶ ! ಸಾವಿನ ಕಾಲ್ಗೆಜ್ಜೆಯ ನಾದವನ್ನು ನನ್ನ ಹೃದಯದಲ್ಲಿ ಪ್ರತಿಧ್ವನಿಗೊಳಿಸಿದ್ದೀ. ನಿನ್ನ ಭಕ್ತನ ಮನಸ್ಸಿನಲ್ಲಿದ್ದ ಬಂಗಾಳದ ಚಿತ್ರವನ್ನೇ ಬದಲಾಯಿಸಿದ್ದೀ ! " ಮಲಯಜ ಶೀತಲಾಂ.... ಫುಲ್ಲಕುಸುಮಿತ ದ್ರುಮದಳ ಶೋಭಿನೀಂ ! " ಪ್ರಿಯೆ, ನೀನು ನಿರ್ದಯಳು. ವಿಷದ ಬಟ್ಟಲನ್ನು ತಂದಿದ್ದೀ—ಹೊರಳಾಡಿ ಸಾಯುವುದಕ್ಕಾಗಲಿ, ಸಾವನ್ನು ಜಯಿಸಿ ಬದುಕುವುದಕ್ಕಾಗಲಿ, ಕುಡಿದು ಮುಗಿಸುತ್ತೇನೆ." ಎಂದನು.

ಮುಂದುವರಿಸುತ್ತಾ " ಹೌದು. ಇನ್ನು ಮಾತೆಯ ದಿನಗಳಿಲ್ಲ. ಪ್ರಿಯೆ, ಸತ್ಯ ಧರ್ಮ ಸ್ವರ್ಗಗಳನ್ನೇ ನನಗಿಲ್ಲದಂತೆ ಮಾಡಿದ್ದೀ. ಕರ್ತವ್ಯವೆಲ್ಲಾ ಛಾಯೆಯಾಗಿದೆ. ಕಟ್ಟುಗಳೂ ತಡೆಗಳೂ ಮುರಿದು ಬಿದ್ದಿವೆ. ಪ್ರಿಯೆ, ನನ್ನ ಪ್ರಿಯೆ ! ನಿನ್ನ ಮುದ್ದು ಪಾದಗಳಿರುವ ಈ ದೇಶದಾಚೆಯ ನಾಡಿಗೆಲ್ಲಾ ಬೆಂಕಿ ಇಟ್ಟು ಬೂದಿಯ ಮೇಲೆ ವಿಕಟ ನೃತ್ಯವಾಡ ಬಲ್ಲೆ. ಇವರು ವಿನಯಶೀಲರು ; ಒಳ್ಳೆಯವರು ; ಸರ್ವರಿಗೂ ಒಳ್ಳೆಯದನ್ನು ಮಾಡಬಲ್ಲರು—ಇದೆಲ್ಲಾ ಸತ್ಯವೆ ? ಅಲ್ಲ, ಅಲ್ಲ ! ಲೋಕದಲ್ಲಿ ನನ್ನ ನೈಜ ಪ್ರೇಮವೊಂದೇ ತಥ್ಯ ! ನಿನಗೆ ನಮಸ್ಕರಿಸುತ್ತೇನೆ ; ನನ್ನ ಭಕ್ತಿ ನನ್ನನ್ನು ಕ್ರೂರನಾಗಿ ಮಾಡಿದೆ. ನಿನ್ನ ಪೂಜೆ ವಿನಾಶದ ಕೊಳ್ಳಿಯನ್ನು ನನ್ನಲ್ಲಿ ಹತ್ತಿಸಿದೆ. ನಾನು ಸತ್ಯವಂತನಲ್ಲ. ನನಗೆ ನಂಬಿಕೆ ಇಲ್ಲ. ಲೋಕವನ್ನೆಲ್ಲಾ ಮಾರಿ, ನನಗೆ

ಸಾಕ್ಷಾತ್ಕಾರವಾಗಿರುವವಳಲ್ಲಿ, ಒಬ್ಬಳಲ್ಲಿ ಮಾತ್ರ, ಭಕ್ತಿ ಇಡ ಬಲ್ಲೆ."

ವಿಸ್ಮಯಕರ! ನಿಜವಾಗಿಯೂ ಆಶ್ಚರ್ಯಕರ! ಕ್ಷಣಕ್ಕೆ ಮುಂಚೆ ಈ ಮನುಷ್ಯನಲ್ಲಿ ನನಗೆ ತಿರಸ್ಕಾರ ಭಾವವಿತ್ತು. ಆದರೆ ಸತ್ತ ಬೂದಿ ಧಗಧಗನೆ ಉರಿಯುವ ಜೀವಾಗ್ನಿಯಾಗಿತ್ತು. ಆ ಬೆಂಕಿ ನಿಸ್ಸಂದೇಹವಾಗಿ ಸತ್ಯವಾದುದು. ಮನುಷ್ಯ ಇಷ್ಟು ಮಿಶ್ರಪ್ರಾಣಿಯಾಗಿ ಸೃಷ್ಟಿಯಾಗಿರುವುದೇಕೆ? ಭಗವಂತನ ಕೈಚಳಕ ತೋರಿಸಲೆಂದೋ? ಕೆಲವೇ ನಿಮಿಷಗಳ ಕೆಳಗೆ ನಾನು ಆದರ್ಶ ವ್ಯಕ್ತಿ ಎಂದುಕೊಂಡಿದ್ದ ಸಂದೀಪ ನಾಟಕದ ನಾಯಕ ಮಾತ್ರವೆಂದು ಕೊಂಡೆ. ಆದರೆ ಹಾಗಲ್ಲ. ನಾಟಕದ ವೇಷ ಗಳ ಮರೆಯಲ್ಲೂ ಆದರ್ಶ ವ್ಯಕ್ತಿಯಡಗಿರಬಹುದು.

ಸಂದೀಪನಲ್ಲಿ ಅನಾಗರಿಕತೆ, ವಿಷಯ ಲಾಲಸೆ, ಮೋಸ, ಐಹಿಕತೆಗಳು ಅಡಕವಾಗಿವೆ. ಆದರೆ—ನಮಗರ್ಥವಾಗದ ಎಷ್ಟೋ ವಿಷಯಗಳು ಅವನ ಆಳದಲ್ಲಡಗಿವೆ-ನಮ್ಮಲ್ಲಿಯೂ ಹಾಗೆಯೇ. ಮನುಷ್ಯ ಒಂದು ಅದ್ಭುತವಸ್ತು. ಅವನ ಸಾಧನೆ ಧ್ಯೇಯ ರುದ್ರನಿಗೇ ಗೋಚರ. ನಾವು ಅದರ ಭಾರ ಹೊರಲಾ ರದೆ ನರಳುತ್ತಿದೇವೆ ಮಾತ್ರ. ಶಿವ ಸೃಷ್ಟಿಯ ಗೊಂದಲದ ಪ್ರಭು. ಆತನು ಆನಂದಮಯ. ನಮ್ಮ ಬಂಧನಗಳನ್ನು ಬಿಡಿಸುವ ವನು ಆತನು.

ನನ್ನಲ್ಲಿಯೇ ಎರಡು ವ್ಯಕ್ತಿಗಳು ಇವೆಯೆಂದು ಪುನಃ ಪುನಃ ತೋರುತ್ತದೆ. ಸಂದೀಪನ ವಿನಾಶಕಾರಕ ಮೂರ್ತಿ ಯನ್ನು ಕಂಡು ಒಂದು ಭಾಗ ಹಿಂದಕ್ಕೆ ಸರಿದರೆ, ಇನ್ನೊಂದು ಭಾಗ ಅವನೆಡೆಗೇ ಸೆಳೆಯುತ್ತದೆ. ಮುಳುಗುವ ಹಡಗಿನ ಸುತ್ತಲೂ ಈಜುವವರಿಗೆ ಸುರಕ್ಷತೆ ಇಲ್ಲ. ಸಂದೀಪ ಅಂತಹ ವಿನಾಶಕ ಶಕ್ತಿ. ಹೆದರಿಕೆ ನಮ್ಮನ್ನು ರಕ್ಷಿಸುವ ಮೊದಲೇ, ಅವನ ಅದ್ಭುತ ಆಕರ್ಷಣೆ ಹಿಡಿದು ಕ್ಷಣ ಮಾತ್ರದಲ್ಲಿ ಎಲ್ಲ

ಬೆಳಕು, ಒಳಿತು, ಸ್ವಾತಂತ್ರ್ಯ, ಉಸಿರು, ನಮ್ಮ ದಿನಚರಿಯ ಎಲ್ಲ ಸಂಪತ್ತುಗಳಿಂದ ಎಳೆದೊಯ್ದು ವಿನಾಶದ ತಳದಲ್ಲಿ ಮುಳುಗಿಸುತ್ತದೆ.

ಯಾವುದೋ ವಿಪ್ಲವರಾಷ್ಟ್ರದ ದೂತ, ಈ ಸಂದೀಪ. ದೇಶದಲ್ಲಿ ಅಮಂಗಳ ಮಂತ್ರ ಪಠನೆ ಮಾಡುತ್ತಾ ಅವನು ತಿರುಗುತ್ತಿದ್ದರೆ ಹುಡುಗರೂ ಯುವಕರೂ ಅವನನ್ನು ಹಿಂಬಾಲಿಸುತ್ತಾರೆ. ಪದ್ಮ ಪೀಠಸ್ಥಳಾದ ದೇಶಮಾತೆ ರೋದಿಸುತ್ತಿದ್ದಾಳೆ. ಇವರು ಆಕೆಯ ಸಂಪತ್ತನ್ನು ಕೊಳ್ಳೆ ಹೊಡೆದು, ಮದ್ಯಪಾನ ಸಮಾರಂಭ ನಡೆಸುತ್ತಿದ್ದಾರೆ. ದೇವತೆಗಳಿಗಾಗಿ ಸಿದ್ಧವಾದ ಅರ್ಘ್ಯವನ್ನು ಧೂಳಿನಲ್ಲಿ ಸುರಿಯುತ್ತಿದ್ದಾರೆ. ಆಕೆಯ ಪೂಜಾ ಪಾತ್ರೆಗಳನ್ನು ಚೂರು ಮಾಡುತ್ತಿದ್ದಾರೆ. ಆಕೆಗೋಸ್ಕರ ನನ್ನ ಜೀವ ಮಿಡುಕಿದರೂ, ಅವರ ಉತ್ಸಾಹ ನನ್ನನ್ನೂ ಸೋಂಕಿದೆ.

ಸತ್ಯವೇ—ನಮ್ಮ ಪರೀಕ್ಷೆಗಾಗಿ—ಈ ವಿಲೋಭನೆಯ ನ್ನೊಡ್ಡಿದೆ. ಪ್ರಮತ್ತತೆ ದಿವ್ಯ ವೇಷದಲ್ಲಿ ಯಾತ್ರಿಕರ ಮುಂದೆ ಕುಣಿಯುತ್ತಾ—"ತ್ಯಾಗದ ನಿಷ್ಫಲ ಹಾದಿಯಲ್ಲಿ ನಡೆಯುವ ನೀವು ಮೂಢರು. ಅದು ದೂರದ ದಾರಿ, ನಡೆ ನಿಧಾನ. ವಜ್ರಾಯುಧನಾದ ಇಂದ್ರ ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದ್ದಾನೆ. ದೃಷ್ಟಿಸಿ ನೋಡಿ, ನಾನು ಸುಂದರಿ, ರಾಗ ರಾಣಿ. ನಾನು ನಿಮ್ಮನ್ನು ಸ್ವೀಕರಿಸುತ್ತೇನೆ. ನನ್ನ ಆಲಿಂಗನೆಯಲ್ಲಿ ಮೋಕ್ಷ." ಎನ್ನುತ್ತದೆ.

ಸ್ವಲ್ಪ ಹೊತ್ತಾದ ಮೇಲೆ ಸಂದೀಪ ಪುನಃ "ದೇವಿ! ನಿನ್ನಿಂದ ದೂರವಾಗುವ ಕಾಲ ಬಂದಿದೆ. ಒಳ್ಳೆಯದು. ನಿನ್ನ ಸಾಮೀಪ್ಯದಲ್ಲಿದ್ದು ಮಾಡಬೇಕಾಗಿದ್ದ ಕೆಲಸ ಮುಗಿದಿದೆ. ಇಲ್ಲಿಯೇ ಆಲಸ್ಯ ಮಾಡಿದರೆ, ಆ ಕೆಲಸ ನಿಷ್ಪ್ರಯೋಜಕ ವಾದೀತು. ಜಗತ್ತಿನ ಅತ್ಯುತ್ಕೃಷ್ಟ ವಸ್ತುವನ್ನು ಅತ್ಯಾಸೆಯಿಂದ ಅಗ್ಗಪಡಿಸಿದರೆ ಸರ್ವನಾಶವಾದೀತು. ಆ ಕ್ಷಣದಲ್ಲಿ ಶಾಶ್ವತ

ವಾದುದನ್ನು ಅನಂತಕಾಲಕ್ಕೂ ಹರಡಿದರೆ ಅಲ್ಪವಾಗುವುದು. ಅನಂತ ಕ್ಷಣವನ್ನು ಹಾಳು ಮಾಡುತ್ತಿದ್ದೆವು. ನಿನ್ನ ಎತ್ತಿದ ಸಿಡಿಲಿನ ಆಯುಧ ರಕ್ಷಿಸಿತು. ನಿನ್ನ ಪೂಜೆಯ ಪವಿತ್ರತೆಯನು ನೀನೇ ಉಳಿಸಿದೆ—ಭಕ್ತನನ್ನೂ ಉಳಿಸಿದೆ. ಹೋಗುವಾಗ ನಿನ್ನ ಪೂಜೆಯೊಂದೇ ಅದ್ಭುತವಾಗಿ ಕಾಣುತ್ತಿರುವುದು. ದೇವಿ, ಈ ದಿನ ನಿನ್ನನ್ನೂ ನಾನು ಬಿಡುಗಡೆ ಮಾಡಿದೆ. ನನ್ನ ಮಣ್ಣಿನ ಗುಡಿಯಲ್ಲಿ ನಿನಗಿನ್ನು ಸ್ಥಳ ಸಾಲದು. ಪ್ರತಿಕ್ಷಣವೂ ಅದು ಒಡೆಯುತ್ತಲೇ ಇದೆ. ವಿಶಾಲವಾದ ಗುಡಿಯಲ್ಲಿ ನಿನ್ನ ಹಿರಿಯ ವಿಗ್ರಹವನ್ನು ಪೂಜಿಸಲು ಹೋಗುತ್ತಿದ್ದೇನೆ. ದೂರದಲ್ಲಿದ್ದೇ ನಿನ್ನ ಸಾನ್ನಿಧ್ಯ ಪಡೆಯಬಲ್ಲೆನು. ಇಲ್ಲಿ ನಿನ್ನ ಕೃಪಾದೃಷ್ಟಿ ಮಾತ್ರ ನೀಡಿದ್ದೆ; ಅಲ್ಲಿ ವರದಾನ ಮಾಡುತ್ತೀ."

ನನ್ನ ಒಡವೆಗಳ ಪೆಟ್ಟಿಗೆ ಮೇಜಿನ ಮೇಲಿತ್ತು. ನಾನು ಅದನ್ನು ಎತ್ತಿ ಹಿಡಿದು:—"ಈ ನನ್ನ ಒಡವೆಗಳನ್ನು ನಿನ್ನ ಮೂಲಕ ದೇವಿಗೆ ಅರ್ಪಿಸುತ್ತೇನೆ," ಎಂದೆ. ನನ್ನ ಪತಿ ಮಾತ ನಾಡಲಿಲ್ಲ. ಸಂದೀಪ ಹೊರಗೆ ಹೋದನು.

## ೨೧

ನಾನು ಅಮೂಲ್ಯನಿಗೆ ಹೋಳಿಗೆ ಮಾಡುತ್ತಿದ್ದಾಗ ದೊಡ್ಡ ರಾಣಿ ಬಂದಳು.

"ಇದೇನನ್ಯಾಯ! ನಿನ್ನ ಜನ್ಮದಿನ ನೀನೇ ಹೋಳಿಗೆ ಮಾಡಬೇಕೆ?"

"ಬೇರೆಯವರಿಗಾಗಿ ಮಾಡಕೂಡದೆ?"

"ಈ ದಿನ ನೀನು ಬೇರೆಯವರಿಗೆ ಉಪಚಾರ ಮಾಡ ಕೂಡದು. ನಾವು ನಿನಗೆ ಹಬ್ಬ ಮಾಡಬೇಕು. ಏನು ಮಾಡೋಣವೆಂದು ಆಲೋಚಿಸುತ್ತಿದ್ದಾಗ ಈ ಭಯಂಕರ ವರ್ತಮಾನ ಬಂತು. ಐನೂರು ಆರು ನೂರು ಜನ ಖಜಾನೆ

ಯನ್ನು ಲೂಟಿ ಮಾಡಿ ಆರು ಸಾವಿರ ರೂಪಾಯಿ ಕದ್ದುಕೊಂಡು ಹೋದರಂತೆ. ಇನ್ನು ನಮ್ಮ ಮನೆ ಲೂಟಿಯಾಗುವುದೇ ಉಳಿದಿರುವುದು."

ನನಗೆ ಸಮಾಧಾನವಾಯಿತು. ನಮ್ಮ ಹಣವನ್ನೇ ಅಮೂಲ್ಯ ಕದ್ದುದು. ಅವನಿಗೆ ಹೇಳಿ ಕಳುಹಿಸಿ ಹಣವನ್ನು ನನ್ನ ಪತಿಗೆ ಕೊಡಿಸಿ ನಾನೇ ಎಲ್ಲವನ್ನೂ ಹೇಳಬೇಕೆಂದುಕೊಂಡೆ.

ನನ್ನ ಓರಗಿತ್ತಿ "ನೀನು ವಿಚಿತ್ರ ವ್ಯಕ್ತಿ! ಭಯವೇ ಇಲ್ಲವೇ?" ಎಂದಳು.

"ನಾನು ನಂಬುವುದಿಲ್ಲ. ಮನೆಯನ್ನೇಕೆ ಲೂಟಿ ಮಾಡುತ್ತಾರೆ?" ಎಂದೆ.

"ನಂಬಿಕೆಯಿಲ್ಲವಂತೆ! ನಮ್ಮ ಖಜಾನೆಯನ್ನು ಲೂಟಿ ಮಾಡುತ್ತಾರೆಂದು ನಾವು ನಂಬಿದ್ದೆವೆ?"

ನಾನು ಉತ್ತರ ಕೊಡದೆ ಹೋಳಿಗೆಯೊಳಗೆ ಹೂರಣ ತುಂಬಿದೆ. ದೊಡ್ಡ ರಾಣಿ ನನ್ನನ್ನೇ ದೃಷ್ಟಿಸಿ ನೋಡಿ "ನಾನು ಹೋಗುತ್ತೇನೆ. ನಿಖಿಲನಿಗೆ ಹೇಳಿ ನನ್ನ ಹಣವನ್ನು ಕಲ್ಕತ್ತೆಗೆ ಕಳುಹಿಸಿ ಬಿಡಬೇಕು." ಎಂದಳು.

ಆಕೆ ಹೋದ ಕೂಡಲೆ ನಾನು ಓಡಿ ಹೋಗಿ ಕೋಣೆಯ ಬಾಗಿಲು ಹಾಕಿಕೊಂಡೆ. ನನ್ನ ಪತಿಯ ಜೇಬಿನಲ್ಲಿ ಬೀಗದ ಕೈ ಇತ್ತು. ಕಬ್ಬಿಣದ ಪೆಟ್ಟಿಗೆಯ ಬೀಗದ ಕೈಯನ್ನು ನನ್ನ ಬಟ್ಟೆಯಲ್ಲಿ ಮರೆಸಿದೆ. ಬಾಗಿಲು ತಟ್ಟಿದ ಸದ್ದಾಯಿತು. "ಬಟ್ಟೆ ಬದಲಾಯಿಸುತ್ತಿದ್ದೇನೆ," ಎಂದು ಕೂಗಿದೆ. ದೊಡ್ಡ ರಾಣಿ "ಕ್ಷಣಕ್ಕೆ ಮುಂಚೆ ಹೋಳಿಗೆ ಮಾಡುತ್ತಿದ್ದಳು! ಈಗ ಅಲಂಕಾರವಂತೆ! ವಂದೇ ಮಾತರಂ ಸಭೆಯೇನೋ! ಕಳ್ಳರಾಣಿ! ಕೊಳ್ಳೆ ಹಣವನ್ನೆಣಿಸುತ್ತಿದ್ದೀಯಾ?" ಎಂದು ಕೂಗಿದಳು.

ಅವರು ಹೊರಟು ಹೋಗಲು ನಾನು ಕಬ್ಬಿಣದ ಪೆಟ್ಟಿಗೆಯ ಬೀಗವನ್ನೇಕೆ ತೆಗೆದೆನೋ ತಿಳಿಯದು. ಎಲ್ಲವೂ ಕನಸಾಗಿರ

ಲೆಂಬ ಹಂಬಲವಿತ್ತೇನೋ! ಒಳಗೆ ಚಿನ್ನದ ನಾಣ್ಯಗಳ ಸುರುಳಿ ಗಳಿದ್ದಿದ್ದರೆ! ಆದರೆ ಅಯ್ಯೋ! ದ್ರೋಹಿಯ ವಿಶ್ವಾಸದಂತೆ ಎಲ್ಲವೂ ಬರಿದಾಗಿತ್ತು.

ಅಲಂಕಾರ ಮಾಡಿ ಕೊಂಡಂತೆ ನಟಿಸಬೇಕಾಗಿತ್ತು. ಆವಶ್ಯಕತೆ ಇಲ್ಲದಿದ್ದರೂ ತಲೆಯನ್ನು ಬಾಚಿ ಕಟ್ಟ ಬೇಕಾಯಿತು. ನನ್ನ ಓರಗಿತ್ತಿ "ದಿನಕ್ಕೆ ಎಷ್ಟು ಬಾರಿ ಅಲಂಕಾರ?" ಎಂದು ಕೂಗಿದಳು.

"ಈ ದಿನ ನನ್ನ ಹುಟ್ಟಿದ ಹಬ್ಬವಲ್ಲವೇ?"

"ಯಾವ ಕಾರಣವಾದರೂ ನಿನಗೆ ಸರಿಯೇ! ನಿನ್ನಂತಹ ವೈಯಾರಿಯನ್ನು ನಾನೆಲ್ಲೂ ಕಂಡಿಲ್ಲ."

ಅಮೂಲ್ಯನಿಗೆ ಹೇಳಿ ಕಳುಹಿಸ ಬೇಕೆನ್ನುವಷ್ಟರಲ್ಲಿ ಅವ ನೊಂದು ಚೀಟಿ ಕಳುಹಿಸಿದನು. "ಅಕ್ಕಾ, ನೀನು ಮಧ್ಯಾಹ್ನ ಊಟಕ್ಕೆ ಕರೆದೆ. ತಡಮಾಡಬಾರದೆನ್ನಿಸಿತು. ಆದರೆ ನಿನ್ನ ಕೆಲಸ ಮುಗಿಸಿದ ಮೇಲೆ ಪ್ರಸಾದ ಸ್ವೀಕರಿಸುತ್ತೇನೆ. ಹೊತ್ತಾಗ ಬಹುದು," ಎಂದು ಬರೆದಿದ್ದ.

ಹಣವನ್ನು ಯಾರಿಗೆ ಹಿಂದಕ್ಕೆ ಕೊಡಬಹುದು? ಪಾಪದ ಹುಡುಗ, ಯಾವ ಹೊಸ ತೊಂದರೆಗೆ ಸಿಕ್ಕಿ ಬೀಳುತ್ತಿರಬಹುದು? ಪಾಪಿ ಸ್ತ್ರೀ; ಬಾಣದಂತೆ ಅವನನ್ನು ಕಳುಹಿಸಬಲ್ಲೆನೇ ಹೊರತು, ಗುರಿ ತಪ್ಪಿದರೆ ಹಿಂದಕ್ಕೆ ಕರೆಯಲಾರೆ.

ಕಳ್ಳತನದ ಮೂಲ ನಾನೇ ಎಂದು ಆಗಲೇ ಒಪ್ಪಿಕೊಳ್ಳ ಬೇಕಾಗಿತ್ತು. ಆದರೆ ಹೆಂಗಸರು ಆವರಣವನ್ನು ನಂಬಿ ಬದುಕು ತ್ತಾರೆ—ಅದೇ ಅವರ ಜಗತ್ತು: ಈ ನಂಬಿಕೆ ಬಯಲಾದರೆ, ಅವರು ಭಗ್ನಾವಶೇಷಗಳ ಮೇಲೆ, ನೋವನ್ನು ಅನುಭವಿಸುತ್ತಲೇ ಇರಬೇಕು. ಪಾಪ ಮಾಡುವುದು ಸುಲಭ; ಆದರೆ ಅದನ್ನು ಸರಿಪಡಿಸಿಕೊಳ್ಳುವುದು ಹೆಂಗಸಿಗೆ ಬಹು ಕಷ್ಟ.

ಕೆಲವು ದಿನದಿಂದ, ನನ್ನ ಪತಿಯೊಡನಿದ್ದ ಸುಲಭ ಸಂಪರ್ಕ

ವನ್ನು ಕಳೆದುಕೊಂಡಿದ್ದೇನೆ. ಈ ಭಾರೀ ವರ್ತಮಾನವನ್ನು ಆತನಿಗೆ ಹೇಳುವುದು ಹೇಗೆ ? ಈ ದಿನ ಆತನು ಊಟಕ್ಕೆ ಬಂದಾಗ ಬಹಳ ಹೊತ್ತಾಗಿತ್ತು.—ಎರಡು ಘಂಟೆಯ ಸಮಯ. ಯಾವುದೋ ಆಲೋಚನೆಯಲ್ಲಿದ್ದ. ಆತ ಸರಿಯಾಗಿ ಅನ್ನ ತಿನ್ನ ಲಿಲ್ಲ. ಬಲವಂತ ಮಾಡುವ ಸ್ವಾಮ್ಯವನ್ನೂ ಕಳೆದುಕೊಂಡಿದ್ದೆ. ಕಣ್ಣೀರನ್ನೊರಸಿಕೊಳ್ಳಲು ಮುಖ ತಿರುಗಿಸ ಬೇಕಾಯಿತು.

"ಒಳಗೆ ಬಂದು ವಿಶ್ರಮಿಸಿಕೊಳ್ಳಿ. ಆಯಾಸ ಪಟ್ಟಿದ್ದೀರಿ ಎಂದು ಹೇಳಬೇಕೆನ್ನಿಸಿತು. ಗಂಟಲು ಸರಿಪಡಿಸಿಕೊಳ್ಳುವ ವೇಳೆಗೆ ಒಬ್ಬ ಆಳು—ಪಂಚುವನ್ನು ಕರೆದುಕೊಂಡು ಒಬ್ಬ ಪೋಲೀಸ್ ಇನ್‌ಸ್ಪೆಕ್ಟರು ಬಂದಿರುವನೆಂದು ಹೇಳಿದನು. ಮುಖ ಚಿಕ್ಕದುಮಾಡಿಕೊಂಡು ನನ್ನ ಪತಿ ಊಟ ಬಿಟ್ಟೆದ್ದು ಹೊರಗೆ ಹೋದರು.

ಸ್ವಲ್ಪ ಹೊತ್ತಿಗೆ ದೊಡ್ಡ ರಾಣಿ ಬಂದಳು. "ನಿಖಿಲ ಬಂದಾಗ ನನಗೇಕೆ ಹೇಳಿ ಕಳುಹಿಸಲಿಲ್ಲ ? ಹೊತ್ತಾಗಬಹು ದೆಂದು ಸ್ನಾನಕ್ಕೆ ಹೋದೆ. ಇಷ್ಟು ಬೇಗ ಊಟ ಹೇಗೆ ಮುಗಿ ಸಿದ ? " ಎಂದಳು.

"ಏಕೆ, ಏನಾದರೂ ಕೆಲಸವಾಗ ಬೇಕಾಗಿತ್ತೇನು ? "

"ಇದೇನು, ನೀವಿಬ್ಬರೂ ಕಲ್ಕತ್ತೆಗೆ ಹೋಗುತ್ತೀರಂತೆ ? ನಾನಂತೂ ಇಲ್ಲಿ ಒಬ್ಬಳೇ ಇರುವುದಿಲ್ಲ. ಇಷ್ಟು ಡಕಾಯಿತಿ ನಡೆಯುತ್ತಿರುವಾಗ ಪ್ರತಿಶಬ್ದಕ್ಕೂ ಹೆದರಬೇಕಾಗುತ್ತದೆ. ನೀವು ನಾಳೆ ಹೊರಡುವುದು ನಿಶ್ಚಯವ್ರೋ ? "

ಈ ವಿಚಾರ ನಾನು ಕೇಳಿದುದು ಈಗಲೇ. ನಾಳೆಯೊಳಗೆ ಹೋದರೂ ಬಿಟ್ಟರೂ ವ್ಯತ್ಯಾಸವಿಲ್ಲದಂತಹ ಘಟನೆಗಳು ನಮ್ಮ ಚರಿತ್ರೆಯನ್ನೇ ಮಾರ್ಪಡಿಸಬಹುದು. ಮುಂದೆ ನಮ್ಮ ಮನೆ ಹೇಗಿರುವುದೋ ಜೀವ ಹೇಗಿರುವುದೋ ನಾನರಿಯೆ. ಎಲ್ಲಾ ಮುಸುಕಿನಲ್ಲಿ ಮರೆಯಾಗಿತ್ತು. ಆದರೂ "ಹೌದು" ಎಂದು ಉತ್ತರಕೊಟ್ಟೆ.

ಇನ್ನು ಕೆಲವು ಘಂಟೆಗಳಲ್ಲಿ ನನ್ನ ಅದೃಷ್ಟ ವ್ಯಕ್ತವಾಗುವುದು. ಕಾಲದ ಓಟವನ್ನು ನಿಲ್ಲಿಸಿ ಎಲ್ಲಾ ವಿಚಾರಗಳನ್ನು ಸರಿಪಡಿಸಲು ಸಮಯ ದೊರಕಿಸಿ ಕೊಡಬಲ್ಲವರು ಯಾರೂ ಇಲ್ಲವೆ? ಬಿತ್ತಿದ ಬೀಜ ಮೊಳೆಯುವುದೆಂಬ ಹೆದರಿಕೆಯೇ ಮರೆಯಾಗುವಷ್ಟು ದೀರ್ಘಕಾಲ ಅದು ನೆಲದಲ್ಲಿ ಹುದುಗಿರುತ್ತದೆ. ಮೊಳೆತ ಮೇಲೆ, ಅದನ್ನು ಸೀರೆ, ದೇಹ, ಜೀವದಿಂದ ಕೂಡ ಮುಚ್ಚಲ ಸಾಧ್ಯವಾಗುವಷ್ಟು ಬೇಗ ಬೇಗ ಬೆಳೆಯುತ್ತದೆ.

ಇನ್ನು ಅದರ ವಿಚಾರ ಆಲೋಚಿಸದೆ, ಅಲಕ್ಷ್ಯದಿಂದಿರುತ್ತೇನೆ. ಬೇಕಾದಾಗ ಸಿಡಿಲೆರಗಲಿ. ನಾಡಿದ್ದಿನ ವೇಳೆಗೆ—ಅವಮಾನ, ಪ್ರಶ್ನೆ, ವಿವರಣೆ, ನಗು, ಗೋಳೆಲ್ಲಾ ಮುಗಿದಿರುತ್ತದೆ.

ಆದರೆ ಭಕ್ತಿ ಭರಿತವಾದ ಅಮೂಲ್ಯನ ಮುಖವನ್ನು ಮರೆಯಲಾರೆ. ಅವನು ವಿಧಿಯ ಹೊಡೆತಕ್ಕೆ ತಲೆಯೊಡ್ಡಿ ನಿರಾಸೆಯಿಂದ ಕುಳಿತಿರದೆ ಅಪಾಯದ ನಡುವೆ ನುಗ್ಗಿದ. ಈ ಸಂಕಟದಲ್ಲೂ ಅವನನ್ನು ಪುರಸ್ಕರಿಸುತ್ತೇನೆ. ಅವನು ನನ್ನ ಬಾಲಕೃಷ್ಣ. ಆಡುತ್ತ ಆಡುತ್ತ ನನ್ನ ಭಾರವನ್ನು ತಾನೇ ಹೊತ್ತ. ನನ್ನ ಶಿಕ್ಷೆಯನ್ನು ತಾನೇ ವಹಿಸಿಕೊಳ್ಳುವುದಕ್ಕೂ ಅವನು ಸಿದ್ಧ. ಆದರೆ ನನ್ನ ದೇವನ ಈ ಘೋರ ಕ್ಷಮೆಯನ್ನು ಹೇಗೆ ಹೊರಲಿ?

ಮಗು, ತಮ್ಮಾ, ನಿನಗೆ ನಮಸ್ಕಾರ. ನೀನು ಶುದ್ಧ; ಸುಂದರ; ನಿನಗೆ ನಮಸ್ಕಾರ. ಮುಂದಿನ ಜನ್ಮದಲ್ಲಿ ನನ್ನ ಮಗುವಾಗಿ ನನ್ನ ಕೈಗೆ ಬಾ. ಅದೇ ನನ್ನ ಪ್ರಾರ್ಥನೆ.

## ೨೨

ಸುದ್ದಿಗಳು ಹರಡುತ್ತಿವೆ. ಪೋಲೀಸರು ಬಂದು ಹೋಗುತ್ತಿದ್ದಾರೆ. ಮನೆಯ ಸೇವಕರೆಲ್ಲಾ ಸಡಗರದಲ್ಲಿದ್ದಾರೆ.

ಖೇಮ ನನ್ನ ಬಳಿಗೆ ಬಂದು, "ರಾಣಿ ತಾಯಿ! ನನ್ನ ಸರ ಬಳೆಗಳನ್ನು ನಿಮ್ಮ ಪೆಟ್ಟಿಗೆಯಲ್ಲಿಟ್ಟಿರಿ," ಎಂದಳು. ನಾನೇ ಈ ತೊಂದರೆಗೆಲ್ಲಾ ಮೂಲ ಕಾರಣಳೆಂದೂ, ಅದರಲ್ಲಿ ನಾನೇ ಸಿಕ್ಕಿ ಒದ್ದಾಡುತ್ತಿರುವೆನೆಂದೂ ಹೇಗೆ ವಿವರಿಸುವುದು. ಆಶ್ರಿತ ರಕ್ಷಕಿಯಂತೆ ಅವಳ ಒಡವೆಗಳನ್ನೂ, ಥಾಕೋಳ ಹಣವನ್ನೂ ತೆಗೆದುಕೊಂಡೆ. ಹಾಲಿನವಳು ನನ್ನ ಕೊಠಡಿಯಲ್ಲಿ ಸೀರೆ ಮುಂತಾದ ಬೆಲೆ ಬಾಳುವ ವಸ್ತುಗಳು ತುಂಬಿದ ಪೆಟ್ಟಿಗೆಯನ್ನು ತಂದಿಟ್ಟು "ಇವುಗಳನ್ನು ನಿಮ್ಮ ಮದುವೆಯಲ್ಲಿ ಕೊಟ್ಟರು." ಎಂದು ಹೇಳಿದಳು.

ಇವರೆಲ್ಲರೆದುರಿಗೆ ನಾಳೆ ನನ್ನ ಪೆಟ್ಟಿಗೆಯನ್ನು ತೆಗೆದಾಗ— ಆ ಆಲೋಚನೆ ಮಾಡಲಾರೆ! ವರ್ಷದಮೇಲೆ ಇದೇ ಮಾಘ ತದಿಗೆಯ ದಿನ ಹೇಗಿರುತ್ತೆಂದು ಆಲೋಚಿಸುತ್ತೇನೆ. ಆಗಲೂ ಸಂಸಾರದ ನೋವು ನೂತನವಾಗಿಯೇ ಇರುವುದೆ ?

ಅಮೂಲ್ಯ ಸಂಜೆ ಹೊತ್ತಾಗಿ ಬರುತ್ತೇನೆಂದು ಬರೆ ದಿದ್ದಾನೆ. ಏನನ್ನೂ ಮಾಡದೆ, ಆಲೋಚನೆಗಳಿಗೆ ಸಿಕ್ಕಿ ನರಳು ತ್ತಿರಲಾರೆ. ಪುನಃ ಅವನಿಗೋಸ್ಕರ ಹೋಳಿಗೆ ಮಾಡುತ್ತೇನೆ. ಎಷ್ಟು ಮಾಡಿದರೂ ತೃಪ್ತಿಯಿಲ್ಲ. ತಿನ್ನುವವರು ಯಾರು ? ಆಳುಗಳಿಗೆ ಹಂಚುತ್ತೇನೆ. ಈ ರಾತ್ರಿಯೇ ನನ್ನ ಕಡೆಯ ರಾತ್ರಿ. ನಾಳೆ ನನ್ನ ಕೈ ಮೀರುತ್ತದೆ.

ಬೇಸರವಿಲ್ಲದೆ ಹೋಳಿಗೆ ಬೇಯಿಸಿದೆ. ಮಹಡಿಯಮೇಲೆ ನನ್ನ ಕೋಣೆಯಲ್ಲಿ ಆಗಾಗ ಸದ್ದಾಗುತ್ತಿತ್ತು. ನನ್ನ ಪತಿಗೆ ಪೆಟ್ಟಿಗೆಯ ಬೀಗದ ಕೈ ಸಿಕ್ಕದೆ, ದೊಡ್ಡರಾಣಿ ಆಳುಗಳಿಂದ ಹುಡುಕಿಸುತ್ತಿರಬಹುದೆ ? ಆ ಸದ್ದಿಗೆ ಕಿವಿಗೊಡಬಾರದು. ಬಾಗಿಲು ಮುಚ್ಚುತ್ತೇನೆ.

ಹಾಗೆ ಮಾಡಲು ಎದ್ದಾಗ ಥಾಕೋ "ರಾಣಿತಾಯಿ" ಎಂದು ಕೂಗುತ್ತಾ ಓಡಿ ಬಂದಳು.

ನಾನು ಬೇಸರದಿಂದ, "ಹೋಗು! ತೊಂದರೆ ಮಾಡ ಬೇಡ" ಎಂದೆ. "ದೊಡ್ಡ ರಾಣಿ ಕರೆಯುತ್ತಾರೆ. ಆಕೆಯ ಸೋದರಳಿಯ ಕಲ್ಕತ್ತೆಯಿಂದ ಒಂದು ಯಂತ್ರ ತಂದಿದ್ದಾರೆ. ಮನುಷ್ಯನ ಹಾಗೆ ಮಾತನಾಡುತ್ತದೆ. ಬಂದು ಕೇಳಿ ಅಮ್ಮಾ." ಎಂದಳು.

ನಗಬೇಕೋ ಅಳಬೇಕೋ ತಿಳಿಯಲಿಲ್ಲ. ಇಂತಹ ಸಮಯ ದಲ್ಲಿ ನಾಟಕದ ಹಾಡುಗಳನ್ನು ಗೊಣಗುವ ಯಂತ್ರ ಬರಬೇಕೆ? ಯಂತ್ರ ಮನುಷ್ಯನನ್ನು ಅನುಕರಿಸಿದರೆ ಎಷ್ಟು ಭಯಂಕರ!

ಸಂಜೆಯಾಗುತ್ತಾ ಬಂತು. ಅಮೂಲ್ಯ ಬಂದ ತಕ್ಷಣ ತಿಳಿಸುವನೆಂದು ತಿಳಿದಿದ್ದರೂ ಕಾಯಲು ಸಾಧ್ಯವಾಗಲಿಲ್ಲ. ಆಳನ್ನು ಕರೆದು "ಅಮೂಲ್ಯ ಬಾಬುವನ್ನು ಕರೆ," ಎಂದೆ.

ಸ್ವಲ್ಪ ಹೊತ್ತಿಗೆ ಹೋದವನು ಬರಲಿಲ್ಲವೆಂದು ತಿಳಿಸಿದನು.

ಹೋದವನು!—ಕತ್ತಲಲ್ಲಿ ರೋದನದಂತೆ ಆ ಮಾತು ನನ್ನ ಕಿವಿಗೆ ತಾಕಿತು. ಅಮೂಲ್ಯ ಹೋದನು! ಅಸ್ತಮ ರವಿಯ ಕಿರಣದಂತೆ ಕಾಣಿಸಿ ಮರೆಯಾದನೆ! ಸಾಧ್ಯವಾದ ಅಸಾಧ್ಯವಾದ ಅಪಾಯಗಳೆಲ್ಲಾ ನನ್ನ ಮನಸ್ಸಿನ ಮುಂದೆ ಹಾದು ಹೋದುವು. ನಾನೇ ಮೃತ್ಯುವಿನೆಡೆಗೆ ಅವನನ್ನು ನೂಕಿದ್ದೆ. ಅವನಿಗೆ ಧೈರ್ಯ ವಿದ್ದರೇನು? ಅದು ಅವನ ಹೃದಯದ ಹಿರಿತನ. ಹೀಗಾದ ಮೇಲೆ ನಾನು ಜೀವಿಸಿರುವುದು ಹೇಗೆ? ಅಮೂಲ್ಯನ ಗುರುತಾಗಿ ನನ್ನಲ್ಲಿದ್ದುದು ಅವನು ಭಕ್ತಿಯಿಂದ ಕೊಟ್ಟ ಪಿಸ್ತೂಲು. ಇದೇ ವಿಧಿಯ ಸಂಜ್ಞೆಯೋ? ಜೀವನದ ಬೇರನ್ನೇ ಕೆಡಿಸಿದ ಈ ಪಾಪವನ್ನು ಅಳಿಸಲು ನನ್ನ ದೈವ ಮಗುವಿನ ರೂಪದಲ್ಲಿ ಬಂದು ಸಲಕರಣೆಯನ್ನಿತ್ತು ಮಾಯವಾಗಿದ್ದನು. ಪ್ರೇಮದ ಕಾಣಿಕೆ—ಅದರಿಂದ ದೊರಕಬಹುದಾದ ಅನಂತ ಶಾಂತಿ.

ಪೆಟ್ಟಿಗೆ ತೆಗೆದು ಪಿಸ್ತೂಲನ್ನೆತ್ತಿಕೊಂಡು ಭಕ್ತಿಯಿಂದ ಹಣೆ ಗೊತ್ತಿಕೊಂಡೆ. ಆ ನಿಮಿಷದಲ್ಲಿ ನಮ್ಮ ಮನೆಗೆ ಸೇರಿದ್ದ

ದೇವಾಲಯದ ಗಂಟೆಯನ್ನು ಬಾರಿಸಿದರು. ಭಕ್ತಿಯಿಂದ ಅಡ್ಡ ಬಿದ್ದೆ.

ಸಂಜೆ ಮನೆಯಲ್ಲಿದ್ದವರಿಗೆಲ್ಲಾ ಹೋಳಿಗೆ ಹಂಚಿದೆ. "ಒಬ್ಬಳೇ ಎಷ್ಟು ಸೊಗಸಾಗಿ ಹುಟ್ಟಿದ ಹಬ್ಬದ ಔತಣ ನಡಸಿದೆ ಯಮ್ಮಾ. ನನುಗೂ ಸ್ವಲ್ಪ ಕೆಲಸ ಬಿಡು," ಎಂದು ಹೇಳಿ ನನ್ನ ಓರಗಿತ್ತಿ ಗ್ರಾಮಫೋನ್ ತಿರುಗಿಸಿದಳು. ಕಲ್ಕತ್ತೆಯ ನಟಿಯರ ಸಿಳ್ಳುದನಿ! ಲಾಯದಲ್ಲಿ ಹೆಣ್ಣು ಕುದುರೆಗಳ ಕಿರಿಚಾಟದಂತಿತ್ತು!

ಊಟಗಳೆಲ್ಲಾ ಮುಗಿಯುವ ವೇಳೆಗೆ ತುಂಬಾ ಹೊತ್ತಾಯಿತು. ನನ್ನ ಪತಿಯ ಪಾದ ಧೂಳಿಯನ್ನು ತಲೆಯಲ್ಲಿ ಧರಿಸ ಬೇಕೆಂಬ ಆಸೆಯುಂಟಾಯಿತು. ನಾನು ಕೋಣೆಗೆ ಹೋಗುವ ವೇಳೆಗೆ ಆತ ನಿದ್ರಿಸುತ್ತಿದ್ದರು. ಬಹಳ ಆಯಾಸದ ದಿನ. ಪರದೆಯನ್ನು ಮೆಲ್ಲಗೆ, ಬಹಳ ಮೆಲ್ಲಗೆ ಎತ್ತಿ ತಲೆಯನ್ನು ಕಾಲಿನ ಬಳಿ ಇಟ್ಟೆ. ಕೂದಲು ತಾಕಿದುದರಿಂದ ನಿದ್ದೆಯಲ್ಲಿ ಕಾಲನ್ನಲುಗಿಸಿ ನನ್ನ ತಲೆಯನ್ನು ನೂಕಿದರು.

ನಾನು ಹೊರಗೆ ಹೋಗಿ ಪಶ್ಚಿಮದ ಪಡಸಾಲೆಯಲ್ಲಿ ಕುಳಿತೆ. ಎಲೆಗಳೆಲ್ಲಾ ಉದುರಿದ್ದ ಬೂರುಗದ ಮರವೊಂದು ದೂರದಲ್ಲಿ ಅಸ್ಥಿ ಪಂಜರದಂತೆ ನಿಂತಿತ್ತು. ಅದರ ಹಿಂದೆ ಅರ್ಧ ಚಂದ್ರ ಮುಳುಗುತ್ತಿದ್ದನು. ಇದ್ದಕ್ಕಿದ್ದಂತೆ--- ನಕ್ಷತ್ರಗಳೂ ನನ್ನನ್ನು ನೋಡಿ ಹೆದರುತ್ತಿದ್ದಂತೆಯೂ, ರಾತ್ರಿಯೂ ನನ್ನ ಕಡೆ ಅಪ ನಂಬಿಕೆಯ ನೋಟ ಬೀರುತ್ತಿದ್ದಂತೆಯೂ ತೋರಿತು. ಏಕೆ? ನಾನು ಏಕಾಕಿನಿ.

ಜಗತ್ತಿನಲ್ಲಿ ಏಕಾಕಿಯಂತಹ ವಿಚಿತ್ರ ವಸ್ತುವಿಲ್ಲ. ನೆಂಟರೆಲ್ಲಾ ಒಬ್ಬೊಬ್ಬರಾಗಿ ಸತ್ತರೂ ಆ ಮನುಷ್ಯ ಏಕಾಕಿಯಲ್ಲ—ಸಾವಿನ ತೆರೆಯ ಹಿಂದೆ ಬಂಧುಗಳಿರುವಾತ. ನೆಂಟರಿದ್ದೂ ದೂರವಾಗಿ, ತುಂಬಿದ ಮನೆಯಿಂದ ದೂರನಾದವನಿಗೆ ಮಾತ್ರ ತಾರಾಮಯವಾದ ವಿಶ್ವವೇ ರೋಷದಿಂದ ನೋಡುತ್ತಿರುವಂತೆ ಭಾಸವಾಗುತ್ತದೆ.

ನಾನಿರುವ ಕಡೆ ನಾನಿಲ್ಲ. ನನ್ನ ಸುತ್ತಲೂ ಇರುವವರಿಂದ ದೂರವಾಗಿದ್ದೇನೆ. ಕಮಲ ಪತ್ರದ ಮೇಲಿನ ನೀರ ಹನಿಯಂತೆ ಚಂಚಲಳಾಗಿ ಎಲ್ಲರಿಂದ ಜಗದಂತರ ದೂರವಾಗಿದ್ದೇನೆ.

ಮನುಷ್ಯರ ಗುಣ ಬದಲಾದಾಗ ತೀರ ಬದಲಾಗುವುದಿಲ್ಲವೇಕೆ? ನನ್ನ ಹೃದಯದೊಳಗೆ ಮೊದಲಿನಂತೆ ಎಲ್ಲವೂ ಇದೆ.—ಆದರೆ ಅದಲು ಬದಲಾಗಿದೆ. ಸರಿಯಾಗಿದ್ದುದೆಲ್ಲ ಅಸ್ತವ್ಯಸ್ತವಾಗಿದೆ. ಮಾಲೆಯಲ್ಲಿದ್ದ ರತ್ನಗಳೆಲ್ಲಾ ಧೂಳಿನಲ್ಲಿ ಹೊರಳುತ್ತಿವೆ. ನನ್ನ ಹೃದಯ ಬಿರಿಯುತ್ತಿದೆ.

ಸಾಯಬೇಕೆನ್ನಿಸುತ್ತದೆ. ಆದರೆ ಹೃದಯದಲ್ಲಿ ಎಲ್ಲಾ ಜೀವಂತವಾಗಿದೆ—ಸಾವಿನಲ್ಲೂ ಸಮಾಪ್ತಿಯಿಲ್ಲ; ಸಾವಿನಲ್ಲೇ ಹೆಚ್ಚು ಪಶ್ಚಾತ್ತಾಪವಿರಬಹುದು. ಮುಗಿಯ ಬೇಕಾದುದು ಈ ಜನ್ಮದಲ್ಲೇ ಮುಗಿಯಬೇಕು—ಬೇರೆ ಮಾರ್ಗವಿಲ್ಲ.

ದೇವಾ, ಇದೊಂದು ಬಾರಿ ಕ್ಷಮಿಸು. ನೀನು ನನ್ನ ಕೈಗೆ ಕೊಟ್ಟ ಸಂಪತ್ತೆಲ್ಲಾ ಹೊರೆಯಾಗಿ ಮಾಡಿಕೊಂಡಿದ್ದೇನೆ. ಹೊರಲೂ ಆರೆ ಬಿಡಲೂ ಆರೆ. ಹಿಂದೆ ಅರುಣೋದಯದ ಸುಂದರ ಅಂಚಿನಲ್ಲಿ ನಿಂತು ನನಗಾಗಿ ನುಡಿಸುತ್ತಿದ್ದ ವೇಣುವನ್ನು ಇನ್ನೊಮ್ಮೆ ಧ್ವನಿ ಮಾಡು—ನನ್ನ ಸಿಕ್ಕುಗಳೆಲ್ಲಾ ಬಿಟ್ಟು ಹೋಗಿ ಜೀವನ ಸುರಸವಾಗಲಿ. ಮುರಿದುದನ್ನು ಕೂಡಿಸಲು, ಕೊಳೆಯನ್ನು ತೊಳೆಯಲು ನಿನ್ನ ಗಾನಕ್ಕೆ ಮಾತ್ರ ಸಾಧ್ಯ. ನಿನ್ನ ಸಂಗೀತದಿಂದ ನನ್ನ ನೂತನ ಗೃಹವನ್ನು ನಿರ್ಮಿಸು. ಬೇರೆ ದಾರಿಯಿಲ್ಲ.

ನೆಲದ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅತ್ತೆ. ದಯೆಗಾಗಿ ಬೇಡಿದೆ—ಎಲ್ಲಿನದೋ, ಕಿಂಚಿತ್ ದಯೆ, ಸ್ವಲ್ಪ ಮರೆ, ಸ್ವಲ್ಪ ಕ್ಷಮೆ, ಸ್ವಲ್ಪ ಆಸೆಗಾಗಿ ಬೇಡಿದೆ, "ದೇವಾ, ನೀನು ದಯೆ ತೋರುವವರೆಗೂ ಊಟವಿಲ್ಲದೆ ನಿದ್ದೆಯಿಲ್ಲದೆ ಇಲ್ಲಿ ಬಿದ್ದಿರುತ್ತೇನೆ" ಎಂದು ಶಪಥಮಾಡಿದೆ.

ಹೆಜ್ಜೆಯ ಸದ್ದಾಯಿತು. ಮನುಷ್ಯರಿಗೆ ದೇವರು ಪ್ರತ್ಯಕ್ಷನಾಗುವುದಿಲ್ಲವೆಂದು ಹೇಳುವವರಾರು ? ತಲೆಯೆತ್ತಿದರೆ ಮಾಯೆ ಹರಿಯುವುದೆಂಬ ಭಯದಿಂದ ತಲೆಯೆತ್ತಲಿಲ್ಲ. ಬಾ, ಬಂದು ನಿನ್ನ ಪಾದದಿಂದ ನನ್ನ ತಲೆ ಸೋಕು. ನಿನ್ನ ಪಾದವನ್ನು ಬಡಿದುಕೊಳ್ಳುವ ನನ್ನ ಹೃದಯದ ಮೇಲಿಡು. ಆ ಕ್ಷಣದಲ್ಲಿ ನನಗೆ ಮೃತ್ಯು ಒದಗಲಿ.

ಆತನು ಬಂದು ನನ್ನ ತಲೆಯ ಬಳಿ ಕುಳಿತನು. ಯಾರು ? ನನ್ನಪತಿ. ಆತನ ಸ್ಪರ್ಶದಿಂದ ಮೂರ್ಛೆ ಬರುವಂತಾಯಿತು. ಅನಂತರ ಹೃದಯದ ನೋವು ನರಗಳನ್ನೂ ನಾಳಗಳನ್ನೂ ಭೇದಿಸಿಕೊಂಡು ಕಣ್ಣೀರಿನ ಬೃಹತ್ಪ್ರವಾಹವಾಗಿ ಹರಿಯಿತು. ಆತನ ಪಾದಗಳನ್ನು ಬಿಗಿಯಾಗಿ ಎದೆಗೊತ್ತಿಕೊಂಡೆ. ಅದರ ಗುರುತು ಚಿರಕಾಲ ಅಲ್ಲಿ ನಿಲ್ಲಬಾರದೆ ?

ಆತ ಮೃದುವಾಗಿ ನನ್ನ ತಲೆ ಸೇವರಿಸಿದರು. ಆಶೀರ್ವಾದ ಪಡೆದೆ. ನಾಳೆ ಬರುವ ಬಹಿರಂಗ ಅವಮಾನದ ಶಿಕ್ಷೆಯನ್ನು ಅನುಭವಿಸಲು ಈಗ ಸಿದ್ಧಳಾಗಿದ್ದೇನೆ. ಅದನ್ನೆಲ್ಲಾ ನನ್ನ ದೇವನ ಚರಣ ತಲದಲ್ಲಿ ಭಾವ ಶುದ್ಧಿಯಿಂದ ಅರ್ಪಿಸುತ್ತೇನೆ.

ಒಂಭತ್ತು ವರ್ಷಗಳ ಕೆಳಗೆ ನನ್ನ ಮದುವೆಯಾದಾಗ ಈ ಮನೆಗೆ ಸ್ವಾಗತಿಸಿದ ಮಂಗಳ ವಾದ್ಯಗಳು ನನ್ನ ಪಾಲಿಗೆ ಪುನಃ ಜನ್ಮದಲ್ಲಿಲ್ಲವೆಂಬ ಆಲೋಚನೆ ಹೃದಯವನ್ನು ಸುಡುತ್ತದೆ. ಯಾವ ಕಠಿಣ ತಪಸ್ಸು ಪುನಃ ನನ್ನನ್ನು ಶೃಂಗಾರ ವಧುವನ್ನಾಗಿ ಮಾರ್ಪಡಿಸಿ ವಧು ಪೀಠದಲ್ಲಿ ಕುಳ್ಳಿರಿಸೀತು ? ಎಷ್ಟು ವರ್ಷ, ಎಷ್ಟು ಯುಗ, ಎಷ್ಟು ಕಲ್ಪಗಳನ್ನು ದಾಟಿದರೆ ಆ ಒಂಬತ್ತು ವರ್ಷದ ಹಿಂದಿನ ದಿನದ ದಾರಿ ಸಿಕ್ಕೀತು ?

ದೇವರು ಹೊಸದನ್ನು ಸೃಷ್ಟಿಸಬಲ್ಲನು. ಆದರೆ ಆತನಿಗೂ ನಾಶವಾದ ವಸ್ತುವನ್ನು ಪುನಃ ಸೃಷ್ಟಿಸುವ ಶಕ್ತಿ ಇದೆಯೆ ?

## ಅಧ್ಯಾಯ ೧೨

# ನಿಖಿಲನ ಕಥೆ

### ೧೫

ನಾವು ಈ ದಿನ ಕಲ್ಕತ್ತೆಗೆ ಹೋಗುತ್ತೇವೆ. ಕೂಡಿಸುತ್ತಾ ಹೋದರೆ ನಮ್ಮ ಹರ್ಷ ದುಃಖಗಳು ಹೊರೆಯಾಗುತ್ತವೆ. ಇಟ್ಟು ಕೊಳ್ಳುವುದು, ಕೂಡಿಡುವುದು ಎಲ್ಲಾ ಮಿಥ್ಯೆ. ಮನೆಯ ಯಜಮಾನನಾಗಿ ನನ್ನ ಸ್ಥಿತಿ ಕೃತಕ.—ವಾಸ್ತವವಾಗಿ ಜೀವನದ ಹಾದಿಯಲ್ಲಿ ನಾನೊಬ್ಬ ಪಥಿಕ. ಅದರಿಂದಲೇ ನಿಜವಾದ ಯಜ ಮಾನನಿಗೆ ಹೆಜ್ಜೆ ಹೆಜ್ಜೆಗೂ ನೋವು—ಕಡೆಯಲ್ಲಿ ಸಾವಿನ ಅಧಿಕ ನೋವು.

ಪ್ರಿಯೆ, ನಿನ್ನೊಡನೆ ನನ್ನ ಸಂಬಂಧ ಹಾದಿಯ ಅಂಚಿನದು. ಇಬ್ಬರ ಮಾರ್ಗವೂ ಒಂದೇ ಆಗಿದ್ದಾಗ ಸರಿಯಾಗಿತ್ತು. ಮುಂದೆ ನಿಲ್ಲಿಸಿಕೊಳ್ಳಲು ಪ್ರಯತ್ನಪಟ್ಟರೆ ತೊಂದರೆಯಾಗುತ್ತದೆ. ಅದರ ಕಟ್ಟುಗಳನ್ನು ಹಿಂದೆ ಬಿಡುತ್ತಿದ್ದೇವೆ. ಮುಂದಿನ ಪ್ರಯಾಣದಲ್ಲಿ ಒಂದು ನೋಟ, ಸಾಗುವಾಗ ಕರಸ್ಪರ್ಶ, ಸಾಕು. ಆಮೇಲೆ? ಆಮೇಲೆ ಜಗತ್ತಿನ ವಿಸ್ತಾರಮಾರ್ಗ; ಅನಂತವಾದ ಜೀವನ ಪ್ರವಾಹ.

ಪ್ರಿಯೆ! ನನ್ನಿಂದ ಎಷ್ಟು ಸಲ ಅಪಹರಿಸಲು ಸಾಧ್ಯ? ಕಿವಿಗೊಟ್ಟು ಕೇಳಿದರೆ, ಅಗಲಿಕೆಯ ನಾದಲಹರಿ ಕೇಳ ಬರುತ್ತದೆ. ದೇವಿಯ ಅಮೃತಕ್ಕೆ ಅಂತ್ಯವಿಲ್ಲ. ಆಕೆ ನಾವು ಕುಡಿಯುವ ಪಾತ್ರೆಯನ್ನು ಒಮೊಮ್ಮೆ ಒಡೆಯುತ್ತಾಳೆ. ಆ ಅಲ್ಪಕ್ಕಾಗಿ ನಮ್ಮ ಪರಿತಾಪವನ್ನು ನೋಡಿ ನಗುತ್ತಾಳೆ. ಮುರಿದ ಪಾತ್ರೆಯನ್ನು ನಾನೆತ್ತುವುದಿಲ್ಲ. ಅತೃಪ್ತ ಹೃದಯವಿದ್ದರೂ ಮುಂದೆ ಸಾಗುತ್ತೇನೆ.

ದೊಡ್ಡ ರಾಣಿ ಬಂದು "ಇದೇನು ತಮ್ಮಾ, ಪುಸ್ತಕಗಳ

ನ್ನೆಲ್ಲಾ ಕಟ್ಟಿ ಕಳುಹಿಸುತ್ತಿದ್ದಾರೆ ? " ಎಂದು ಕೇಳಿದಳು.

" ನನಗಿನ್ನೂ ಅವುಗಳ ಮೇಲಿನ ವ್ಯಾಮೋಹ ಹೋಗಿಲ್ಲ."

" ಬೇರೆ ಕೆಲವು ಪದಾರ್ಥಗಳ ಮೇಲೂ ವ್ಯಾಮೋಹ ವಿದ್ದರೆ ವಾಸಿ. ತಿರುಗಿ ನೀನು ಹಿಂದಕ್ಕೆ ಬರುವುದಿಲ್ಲವೆ ? "

" ಬಂದು ಹೋಗುತ್ತಿರುತ್ತೇನೆ. ಇಲ್ಲೇ ನಿಲ್ಲುವುದಿಲ್ಲ."

" ಹಾಗೋ ! ನನ್ನ ಕೋಣೆಗೆ ಬಂದು, ನನಗೆಷ್ಟು ಪದಾರ್ಥ ಗಳ ಮೇಲೆ ವ್ಯಾಮೋಹ ಹೋಗಿಲ್ಲವೆಂಬುದನ್ನು ನೋಡು." ಎಂದು ಕೈಹಿಡಿದು ಕರೆದುಕೊಂಡು ಹೋದಳು.

ಆಕೆಯ ಕೊಠಡಿಯಲ್ಲಿ ಅನೇಕ ಪೆಟ್ಟಿಗೆಗಳೂ ಮೂಟೆಗಳೂ ಕಟ್ಟಿ ಸಿದ್ಧವಾಗಿದ್ದುವು. ಒಂದು ಪೆಟ್ಟಿಗೆ ತೆಗೆದು, " ವೀಳ್ಯದ ಸಾಮಾನು ನೋಡು, ತಮ್ಮಾ. ಈ ಸೀಸೆಗಳಲ್ಲಿ ಏಲಕ್ಕಿ,ಲವಂಗದ ಪುಡಿ ! ಇಸ್ಪೀಟು, ಚದುರಂಗವನ್ನೂ ಬಿಟ್ಟಿಲ್ಲ. ನಿಮಗಿಬ್ಬರಿಗೂ ತುಂಬಾ ಕೆಲಸವಿದ್ದರೆ ಆಡುವುದಕ್ಕೆ ಯಾರಾದರೂ ಬೇರೆ ಸ್ನೇಹಿ ತರನ್ನು ನೋಡಬೇಕು. ಈ ಬಾಚಣಿಗೆ ನಿನಗೆ ಜ್ಞಾಪಕ ವಿದೆಯೆ ? ನೀನು ತಂದುಕೊಟ್ಟ ಸ್ವದೇಶಿ ಬಾಚಣಿಗೆ."

" ಇವೆಲ್ಲಾ ಏಕಕ್ಕಾ. ನೀನೇಕೆ ಸಾಮಾನು ಕಟ್ಟು ತ್ತಿದ್ದೀ ? "

" ನಾನು ನಿಮ್ಮೊಡನೆ ಹೋಗುವುದಿಲ್ಲವೆಂದು ಕೊಂಡೆಯಾ ? "

" ಏನು ವಿಚಿತ್ರ ಆಲೋಚನೆ ! "

" ಭಯ ಪಡಬೇಡ. ನಾನಲ್ಲಿ ಬಂದು ಚಿಕ್ಕರಾಣಿ ಯೊಡನೆ ಜಗಳವಾಡುವೆನೆಂದುಕೊಳ್ಳಬೇಡ. ಎಂದಾದರೂ ಸಾಯಬೇಕು ; ಗಂಗೆಯ ದಡದಲ್ಲಿ ಸತ್ತರೆ ವಾಸಿ. ಈ ಶ್ಮಶಾನ ದಲ್ಲಿ ಆಲದ ಮರದ ಕೆಳಗೆ ಸುಡಲ್ಪಡುವುದೆಂದರೆ ಭಯಂಕರ. ಆದರಿಂದಲೇ ಇಷ್ಟು ದಿನವೂ ಸಾಯದೆ ನಿಮಗೆ ತೊಂದರೆ ಕೊಡುತ್ತಿದ್ದೇನೆ."

ಇದು ಮನೆಯ ನಿಜವಾದ ಕಂಠಸ್ವರ. ನನಗೆ ಆರು ವರ್ಷಮಾತ್ರವಾಗಿದ್ದಾಗ ದೊಡ್ಡರಾಣಿ ಮನೆಗೆ ವಧುವಾಗಿ ಬಂದಿದ್ದಳು. ಮಾಳಿಗೆಯ ಮೂಲೆಯಲ್ಲಿ ಮಧ್ಯಾಹ್ನದ ಹೊತ್ತು ಇಬ್ಬರೂ ಆಡಿದ್ದೇವೆ. ಜೀರ್ಣವಾಗದ ಚಟ್ಣಿಮಾಡಲು ಆಕೆಗೆ ಗಿಡದಿಂದ ಮಾವಿನಕಾಯಿ ಕಿತ್ತುಕೊಟ್ಟಿದ್ದೇನೆ. ಆಕೆಯ ಬೊಂಬೆಯ ಮದುವೆಗೆ ಗುಟ್ಟಾಗಿ ಉಗ್ರಾಣದಿಂದ ಸಾಮಾನು ಸಾಗಿಸಿಕೊಡುತ್ತಿದ್ದವನು ನಾನು. ಏಕೆಂದರೆ ಅಜ್ಜಿಯ ನ್ಯಾಯ ಶಾಸ್ತ್ರದಲ್ಲಿ ನನಗೊಬ್ಬನಿಗೆ ಶಿಕ್ಷೆಯಿರಲಿಲ್ಲ. ನಮ್ಮ ಅಣ್ಣನಿಂದ ಏನನ್ನಾದರೂ ಪಡೆಯಬೇಕಾದರೆ ನನ್ನನ್ನೇ ಕಳುಹಿಸುತ್ತಿದ್ದಳು. ಅಣ್ಣ ನನಗೇನನ್ನೂ ಇಲ್ಲವೆನ್ನುತ್ತಿರಲಿಲ್ಲ. ಖಾಯಿಲೆಯಲ್ಲಿ ವೈದ್ಯರು ಬರೀ ಸಕ್ಕರೆ ಏಲಕ್ಕಿ ಹಾಕಿದ ಬಿಸಿನೀರು ಕುಡಿಯ ಬೇಕೆಂದು ಹೇಳಿದಾಗ ಅತ್ತಿಗೆ ಗುಟ್ಟಾಗಿ ತಿಂಡಿ ಸಾಮಾನು ತಂದುಕೊಡುತ್ತಿದ್ದಳು. ಸಿಕ್ಕಿಬಿದ್ದಾಗ ಅವಳನ್ನೆಷ್ಟುಬಯ್ದಿದ್ದರು!

ಬೆಳೆಯುತ್ತಾ ಸುಖದುಃಖಗಳಲ್ಲಿ ಸಹಾನುಭೂತಿ ಹೆಚ್ಚಿತು. ಜಗಳಗಳೂ ನಡೆಯುತ್ತಿದ್ದುವು. ಪ್ರಾಪಂಚಿಕ ವಿಚಾರಗಳಿಂದ ಒಬ್ಬರೊಬ್ಬರಲ್ಲಿ ಅನುಮಾನ, ಅಸೂಯೆಗಳುಂಟಾಗುತ್ತಿದ್ದುವು. ಚಿಕ್ಕರಾಣಿ ನಮ್ಮಿಬ್ಬರ ನಡುವೆ ಬಂದಾಗ, ಬಿರುಕುಗಳು ವಿಸ್ತಾರ ವಾದುವು. ಆದರೂ ತಳದಲ್ಲಿದ್ದ ಅಂಜನ ಮೇಲಿನ ಗಾಯಕ್ಕಿಂತ ಶಕ್ತಿಯುತವಾಗಿತ್ತು.

ಹೀಗೆ ಚಿಕ್ಕಂದಿನಿಂದ ಏರ್ಪಟ್ಟ ನಿಕಟ ಸಂಬಂಧ ಗಿಡ ವಾಗಿ ಬೆಳೆದು ಕೊಂಬೆಗಳು ಹರಡಿ ಈ ದೊಡ್ಡಮನೆಯ ಮೂಲೆ ಮೂಲೆಯನ್ನೂ ಆವರಿಸಿದೆ. ದೊಡ್ಡರಾಣಿ ಸಾಮಾನು ಕಟ್ಟಿ ಕೊಂಡು, ಈ ನಮ್ಮ ಮನೆಯಿಂದ ಹೊರಡುವುದನ್ನು ಕಂಡಾಗ ನಮ್ಮನ್ನು ಬಿಗಿದಿದ್ದ ಬಂಧನಗಳೆಲ್ಲಾ ಅದುರಿದುವು.

ಆಕೆ ದಿನಚರಿಯ ಅಭ್ಯಾಸಗಳ! ಬಂಧನಗಳನ್ನೆಲ್ಲಾ ಕಡಿದು ಒಂಭತ್ತನೆಯ ವರ್ಷದಲ್ಲಿ ಹೊಕ್ಕ ಮನೆಯನ್ನೂ ತೊರೆದು

ಅರಿಯದೆಡೆ ಹೊರಡಲು ಏಕೆ ಮನಸ್ಸು ಮಾಡಿದಳೆಂದು ತಿಳಿಯಿತು. ಆದರೆ ಈ ವಿಚಾರ ಬಾಯಿಬಿಡದೆ ಆಕೆ ಏನೇನೋ ಕಾರಣಗಳನ್ನೊಡ್ಡುತ್ತಿದ್ದಳು.

ಜಗತ್ತಿನಲ್ಲಿ ಮಕ್ಕಳಿಲ್ಲದ ದುರದೃಷ್ಟಶಾಲಿನಿ ವಿಧವೆಗಿದ್ದುದು ಒಂದೇ ಸಂಬಂಧ ; ಅದಕ್ಕೆ ಹೃದಯದ ಪ್ರೇಮವನ್ನೆಲ್ಲಾ ಧಾರೆಯೆರೆದಿದ್ದಳು. ಆಕೆಯ ಸಾಮಾನಿನ ನಡುವೆ ನಿಲ್ಲುವವರೆಗೂ ಈ ಅಗಲಿಕೆ ಆಕೆಗೆಷ್ಟು ವ್ಯಥೆಯನ್ನುಂಟು ಮಾಡಿತ್ತೆಂದು ನಾನು ತಿಳಿದಿರಲಿಲ್ಲ.

ವಿಮಲೆಯೊಡನೆ ಹಣದ ವಿಚಾರವಾಗಿ ಈಕೆಗೆ ಆಗಾಗ ಉಂಟಾಗುತ್ತಿದ್ದ ಅಸಮಾಧಾನಗಳು ಹಣದಾಸೆಗಾಗಿ ಅಲ್ಲ; ಈ ಒಂದು ಸಂಬಂಧವನ್ನು ಸಡಿಲಿಸಲು ಎಲ್ಲಿಂದಲೊ ಆ ಹೆಂಗಸು ಬಂದಳೆಂಬ ಅಸಮಾಧಾನ. ಪದೇ ಪದೇ ನೋವಾಗುತ್ತಿದ್ದರೂ ದೂರುವ ಬಾಧ್ಯತೆಯಿಲ್ಲ.

ವಿಮಲೆಗೂ ದೊಡ್ಡರಾಣಿ ನನ್ನ ವಿಚಾರದಲ್ಲಿ ಹೆಚ್ಚು ಆಸಕ್ತಿ ವಹಿಸುತ್ತಿದ್ದಾಳೆಂದು ತಿಳಿದಿತ್ತು. ಚಿಕ್ಕಂದಿನ ಈ ಕಟ್ಟುಗಳನ್ನು ಕಂಡು ಅವಳಿಗೆ ಅಸೂಯೆ.

ಈ ದಿನ ನನ್ನ ಹೃದಯ ಬಡಿದುಕೊಂಡಿತು. ಒಂದು ಪೆಟ್ಟಿಗೆಯ ಮೇಲೆ ಕುಳಿತು, “ ನೀನು ಈ ಮನೆಗೆ ಬಂದ ಹೊಸದರಲ್ಲಿ ಎಷ್ಟು ಚೆನ್ನಾಗಿತ್ತು, ಅತ್ತಿಗೆ ? ಪುನಃ ಆಕಾಲ ಬರಬಾರದೆ?” ಎಂದೆ.

“ ಇಲ್ಲ, ತಮ್ಮ , ಪುನಃ ಹೆಂಗಸಾಗಿ ಆ ಜೀವನವನ್ನು ಭರಿಸಲಾರೆ. ಈ ಜನ್ಮಕ್ಕೇ ನನ್ನ ದುಃಖ ಮುಗಿಯಲಿ.”

“ ದುಃಖವನ್ನು ದಾಟಿ ಸೇರುವ ಮುಕ್ತಿ ದುಃಖಕ್ಕಿಂತ ಹೆಚ್ಚಾದುದು ” ಎಂದೆ.

“ ಪುರುಷರಿಗೆ ಹಾಗಿರಬಹುದು. ಬಿಡುಗಡೆ ನಿಮಗೆ. ಹೆಂಗಸರಿಗೆ ಬೇರೆಯವರನ್ನು ಬಂಧಿಸುವುದರಲ್ಲೇ ಆನಂದ.

ನಾವೂ ಬಂಧನಕ್ಕೆ ಸಿಕ್ಕಿದರೂ ಚಿಂತೆಯಿಲ್ಲ. ನಮ್ಮ ಕಟ್ಟು ಗಳಿಂದ ನಿನಗೆ ಬಿಡುಗಡೆಯಿಲ್ಲ, ತನ್ಮೂ. ಗರಿಗೆದರಿ ಹಾರ ಬೇಕಾದರೆ ನಮ್ಮನ್ನೂ ಒಯ್ಯಬೇಕು. ಆದರಿಂದಲೇ ಇಷ್ಟು ಮೂಟೆಗಳು. ಗಂಡಸರನ್ನು ಸುಲಭವಾಗಿ ಹೊರಡಲು ಬಿಡ ಬಾರದು."

"ನಿನ್ನ ಮಾತಿನ ಭಾರ ಜೋರಾಗಿದೆ. ಆದರೆ ನಾವು ಹೊರುವ ಭಾರಕ್ಕೆ ಒಳ್ಳೆಯ ಕೂಲಿ ನೀವು ಹೆಂಗಸರು ಕೊಡು ವುದರಿಂದ ಹೊರುವುದಕ್ಕೆ ಆಕ್ಷೇಪಣೆಯಿಲ್ಲ"--ನಗುತ್ತಾ ಹೇಳಿದೆ.

"ಆ ಭಾರ ಅನೇಕ ಸಣ್ಣ ಸಾಮಾನುಗಳು ಸೇರಿ ಆಗಿರುವುದರಿಂದ ಹೊರುತ್ತೀರಿ. ಯಾವುದನ್ನು ಬಿಡ ಬೇಕೆಂದರೂ 'ನಾನು ಚಿಕ್ಕ ಸಾಮಾನು!' ಎಂದು ಬೇಡುತ್ತದೆ. ಸಣ್ಣ ಸಾಮಾನುಗಳಿಂದಲೇ ನಿಮ್ಮ ಬೆನ್ನು ಮುರಿಯುತ್ತೇವೆ........ ಹೊರಡುವುದು ಯಾವಾಗ?"

"ರಾತ್ರಿ ಹನ್ನೊಂದುವರೆಗೆ ರೈಲು ಹೊರಡುತ್ತೆ. ಬೇಕಾ ದಷ್ಟು ಹೊತ್ತಿದೆ."

"ಹಾಗಾದರೆ ಒಳ್ಳೆಯವನಂತೆ ನನ್ನ ಮಾತು ಕೇಳು. ಮಧ್ಯಾಹ್ನ ಚೆನ್ನಾಗಿ ನಿದ್ದೆ ಹೋಗು. ರೈಲಿನಲ್ಲಿ ನಿದ್ದೆ ಬರುವು ದಿಲ್ಲ. ನಿನ್ನ ಮುಖ ಆಯಾಸದಿಂದ ತುಂಬಿದೆ. ಮೊದಲು ಸ್ನಾನ ಮಾಡು."

ನಾವು ಕೊಠಡಿಯ ಕಡೆ ಹೋಗುತ್ತಿದ್ದಾಗ ಮುಖದ ಪರದೆ ಎಳೆದುಕೊಳ್ಳುತ್ತಾ ಖೇಮ "ಪೋಲೀಸು ಇನ್ಸ್‌ಪೆಕ್ಟರ್ ಒಬ್ಬ ಕೈದಿಯೊಡನೆ ಬಂದು ಮಹಾರಾಜರನ್ನು ನೋಡಲು ಕಾದಿ ದ್ದಾನೆ," ಎಂದು ಹೇಳಿದಳು.

ದೊಡ್ಡರಾಣಿ ರೇಗಿ, "ಹೀಗೆ ಪೋಲೀಸಿನವರು ಗೋಳಾಡಿ ಸಲು ಮಹಾರಾಜ ಕಳ್ಳನೋ? ಸ್ನಾನಕ್ಕೆ ಹೋಗಿದ್ದಾರೆಂದು ಇನ್ಸ್‌ಪೆಕ್ಟರಿಗೆ ಹೇಳು."

" ಏನೋ ಅವಸರದ ಕೆಲಸವಿರಬಹುದು; ನೋಡಿ ಬರುತ್ತೇನೆ "—ಎಂದು ಕೇಳಿಕೊಂಡೆ.

ಆದರೆ ಅತ್ತಿಗೆ, " ಬೇಡ, ಬೇಡ. ಚಿಕ್ಕರಾಣಿ ರಾತ್ರಿ ಹೋಳಿಗೆ ಮಾಡಿದಳು. ಅದನ್ನು ಅವರಿಗೆ ಕಳುಹಿಸಿದರೆ ಸುಮ್ಮನಿರುತ್ತಾರೆ." ಎಂದು ನನ್ನನ್ನು ಕೋಣೆಗೆ ತಳ್ಳಿ ಬಾಗಿಲು ಹಾಕಿದಳು.

ಇಂತಹ ಅಪರೂಪದ ದಬ್ಬಾಳಿಕೆಗೆ ತಲೆಬಾಗದಿರಲು ಸಾಧ್ಯವಾಗಲಿಲ್ಲ. ಇನ್ಸ್ಪೆಕ್ಟರ್ ತಿನ್ನುತ್ತಿರಲಿ. ಕೆಲಸ ಸ್ವಲ್ಪ ನಿಧಾನವಾದರೇನಂತೆ.

ಈಚೆಗೆ ಪೋಲೀಸಿನವರ ಓಡಾಟ ಹೆಚ್ಚಾಗಿತ್ತು. ಪ್ರತಿದಿನವೂ ಯಾರಾದರೊಬ್ಬ ನಿರಪರಾಧಿಯನ್ನು ನನ್ನ ಬಳಿಗೆ ಹಿಡಿದು ತರುತ್ತಿದ್ದರು. ಈ ದಿನವೂ ಹಾಗೆಯೇ ಇರಬಹುದೆಂದುಕೊಂಡೆ. ಇನ್ಸ್ಪೆಕ್ಟರಿಗೆ ಮಾತ್ರ ಹೋಳಿಗೆ ಏಕೆ ? ಅದು ಸರಿಯಲ್ಲ. ಬಾಗಿಲು ತಟ್ಟಿದೆ.

ನನ್ನ ಅತ್ತಿಗೆ ಹೊರಗಿನಿಂದ " ಹುಚ್ಚು ಹಿಡಿಯುತ್ತಿದ್ದರೆ ತಲೆಯಮೇಲೆ ನೀರು ಸುರಿದುಕೋ. ತಣ್ಣಗಾಗುತ್ತೆ," ಎಂದಳು.

" ಇಬ್ಬರಿಗೆ ಹೋಳಿಗೆ ಕಳುಹಿಸು. ಅಪರಾಧಿಯೇ ತಿನ್ನಲು ಹೆಚ್ಚು ಅರ್ಹನಾಗಿರಬಹುದು. ಹೆಚ್ಚಾಗಿ ಕಳಿಸು.

ಬೇಗ ಬೇಗ ಸ್ನಾನಮಾಡಿದೆ. ಹೊರಗೆ ಬಂದಾಗ ವಿಮಲೆ ನೆಲದಮೇಲೆ ಕುಳಿತಿದ್ದಳು. ಇವಳೇ ನನ್ನ ಹಿಂದಿನ ಅಭಿಮಾನಿ ವಿಮಲೆಯೆ ?

ಬಾಗಿಲಲ್ಲಿ ನೆಲದಮೇಲೆ ಕುಳಿತು ಏನು ಬೇಡಲು ಬಂದಿದ್ದಳು ? ನನ್ನನ್ನು ನೋಡಿ, ಎದ್ದು ನಿಂತು ತಲೆ ತಗ್ಗಿಸಿಕೊಂಡು ಮೃದುವಾಗಿ " ಒಂದು ಮಾತು ಹೇಳಬೇಕಾಗಿದೆ " ಎಂದಳು.

" ಒಳಗೆ ಬಾ."

" ಏನಾದರೂ ಕೆಲಸವಿದೆಯೆ ? "

" ಇತ್ತು. ಆದರೆ ನಿನ್ನ ಮಾತು ಕೇಳಿ ಹೋಗುತ್ತೇನೆ."

" ಬೇಡ, ಕೆಲಸ ಮುಗಿಯಲಿ. ಊಟವಾದಮೇಲೆ ಹೇಳುತ್ತೇನೆ."

ಹೊರಗಿನ ಕೋಣೆಯಲ್ಲಿ ಇನ್ಸ್ಪೆಕ್ಟರ ತಟ್ಟೆ ಬರಿದಾಗಿತ್ತು. ಅವನೊಡನೆ ಬಂದಿದ್ದವನು ಮಾತ್ರ ಇನ್ನೂ ತಿನ್ನುತ್ತಿದ್ದನು.

ನಾನು ಆಶ್ಚರ್ಯದಿಂದ " ಅಮೂಲ್ಯನೆ ? " ಎಂದೆ.

ಬಾಯಿ ತುಂಬ ಹೋಳಿಗೆ ತುಂಬಿಕೊಂಡು, " ಹೌದು ಸ್ವಾಮಿ, ಹಬ್ಬದೂಟವಾಯಿತು. ನಿಮ್ಮ ಆಕ್ಷೇಪಣೆ ಇಲ್ಲದಿದ್ದರೆ ಮಿಕ್ಕುದನ್ನು ಕಟ್ಟಿಕೊಳ್ಳುತ್ತೇನೆ," ಎಂದು ಮಿಕ್ಕ ಹೋಳಿಗೆ ಯನ್ನು ಕೈ ಚೌಕದಲ್ಲಿ ಕಟ್ಟಿದನು.

ನಾನು ಇನ್ಸ್ಪೆಕ್ಟರನ ಕಡೆ ತಿರುಗಿ " ಇದೇನು ? " ಎಂದೆ.

ಅವನು ನಕ್ಕು " ಕಳ್ಳ ಸಿಕ್ಕಲಿಲ್ಲ. ರಹಸ್ಯ ಹೆಚ್ಚುತ್ತಿದೆ." ಬಟ್ಟೆಯ ಗಂಟನ್ನು ಬಿಚ್ಚಿ ನೋಟಿನ ಕಂತೆಯನ್ನು ತೆಗೆದು, " ಮಹಾರಾಜ, ನಿಮ್ಮ ಆರು ಸಾವಿರ ರೂಪಾಯಿ," ಎಂದನು.

" ಎಲ್ಲಿ ಸಿಕ್ಕಿತು ? "

" ಅಮೂಲ್ಯ ಬಾಬುವಿನ ಕೈಯಲ್ಲಿ. ನಿನ್ನೆ ಸಾಯಂಕಾಲ ವ್ಯವಸ್ಥಾಪಕನಿಗೆ ಹಣ ಸಿಕ್ಕಿದೆಯೆಂದು ಹೇಳಿದನು. ಅವನಿಗೆ ಹೋದಾಗ ಆದುದಕ್ಕಿಂತ ಸಿಕ್ಕಿದಾಗ ಹೆಚ್ಚು ಗಾಬರಿಯಾಯಿತು. ತನ್ನ ಮೇಲೇ ಅನುಮಾನ ಬರಬಹುದೆಂದು ಹೆದರಿದ. ಅಮೂಲ್ಯ ನನ್ನು ಕಾದಿರುವಂತೆ ಹೇಳಿ ಪೋಲೀಸು ಠಾಣೆಗೆ ಬಂದನು. ನಾನು ಅಮೂಲ್ಯ ಬಾಬುವನ್ನು ಹಿಡಿದು ತಂದು ಬೆಳಗ್ಗೆಯೆಲ್ಲಾ ಪ್ರಶ್ನಿಸಿದೆ. ಹಣವೆಲ್ಲಿ ಸಿಕ್ಕಿತೆಂದು ಹೇಳುವುದಿಲ್ಲ. ಹೇಳುವ ವರೆಗೂ ಬಿಡುವುದಿಲ್ಲವೆಂದು ಹೆದರಿಸಿದೆ. ಹಾಗಾದರೆ ಸುಳ್ಳು ಹೇಳಬೇಕಾಗುತ್ತೆಂದು ಹೇಳಿದ. ನಾನು ಅವನಿಷ್ಟವೆಂದೆ.

ಪೊದರಿನಲ್ಲಿ ಸಿಕ್ಕಿತೆಂದು ಹೇಳಿದ. ಸುಳ್ಳು ಹೇಳುವುದು ಅಷ್ಟು ಸುಲಭವಲ್ಲವೆಂದೆ. ಯಾವ ಪೊದರು ? ಎಲ್ಲಿ ? ಅಲ್ಲಿಗೆ ಅವನೇಕೆ ಹೋದ ? ಎಲ್ಲಾ ಹೇಳಬೇಕು ಎಂದೆ. ಕಲ್ಪಿಸಿಕೊಂಡು ಹೇಳಲು ಬೇಕಾದಷ್ಟು ಹೊತ್ತಿದೆಯೆಂದು ಹೇಳಿದ."

"ಆದರೆ ಅಮೂಲ್ಯ ಬಾಬುವಿನಂತಹ ಸಭ್ಯ ಯುವಕ ನನ್ನು ಏಕೆ ಹಿಂಸಿಸುತ್ತೀರಿ?"

"ನನಗೆ ಅಪೇಕ್ಷೆಯಿಲ್ಲ. ಅವನೂ ಸಭ್ಯ. ನನ್ನ ಸಹಪಾಠಿ ನಿವಾರಣ ಬಾಬುವಿನ ಮಗ. ಏನಾಗಿದೆಯೆಂದು ತಿಳಿಸುತ್ತೇನೆ, ಮಹಾರಾಜ. ಅಮೂಲ್ಯನಿಗೆ ಕಳ್ಳ ಯಾರೆಂದು ತಿಳಿದಿದೆ. ತನ್ನ ಮೇಲೆ ಸಂಶಯವನ್ನೆಳೆದುಕೊಂಡು ಮರೆಸುತ್ತಿದ್ದಾನೆ. ಅವನು ಯಾವಾಗಲೂ ಹೀಗೆಯೇ." ಅಮೂಲ್ಯನ ಕಡೆ ತಿರುಗಿ,

"ನಾನೂ ಯುವಕನಾಗಿದ್ದೆ. ರಿಪನ್ ಕಾಲೇಜಿನಲ್ಲಿ ಓದು ತ್ತಿದ್ದೆ. ಒಬ್ಬ ಗಾಡಿಯವನನ್ನು ಉಳಿಸಲು ಹೋಗಿ ಸೆರೆಮನೆ ಸೇರುತ್ತಿದ್ದೆ. ಸ್ವಲ್ಪದರಲ್ಲಿ ತಪ್ಪಿತು." ಪುನಃ ನನ್ನ ಕಡೆ ತಿರುಗಿ "ಮಹಾರಾಜ, ಪ್ರಾಯಶಃ ನಿಜವಾದ ಕಳ್ಳ ತಪ್ಪಿಸಿಕೊಳ್ಳು ತ್ತಾನೆ. ಆದರೆ ಯಾರೆಂದು ನಾನು ಹೆಳಬಲ್ಲೆ" ಎಂದನು.

"ಯಾರು ? "

"ನಿಮ್ಮ ವ್ಯವಸ್ಥಾಪಕ-ಕಾವಲುಗಾರ ಕಾಸೀಮನೊಡನೆ ಸೇರಿಕೊಂಡು ಈ ಕೆಲಸ ಮಾಡಿದ್ದಾನೆ."

ಇನ್ಸ್‌ಪೆಕ್ಟರು ಹೊರಟುಹೋದಮೇಲೆ ನಾನು ಅಮೂಲ್ಯ ನೊಡನೆ, "ಕಳ್ಳರು ಯಾರೆಂದು ಹೇಳಿದರೆ ಶಿಕ್ಷೆಯಾಗದಂತೆ ನೋಡಿಕೊಳ್ಳುತ್ತೇನೆ." ಎಂದೆ.

"ನಾನೇ."

"ಅದು ಹೇಗಾದೀತು. ಕಳ್ಳರ ಗುಂಪೇ ಬಂದಿತ್ತಂತೆ."

"ಇಲ್ಲ. ನಾನೊಬ್ಬನೇ."

ಅಮೂಲ್ಯ ಹೇಳಿದ ಕತೆ ವಿಚಿತ್ರವಾಗಿತ್ತು. ವ್ಯವಸ್ಥಾಪಕ

ಆಗತಾನೆ ಊಟಮಾಡಿ ಬಾಯಿ ತೊಳೆದು ಕೊಳ್ಳುತ್ತಿದ್ದ. ಕತ್ತ
ಲಾಗಿತ್ತು. ಎರಡು ಜೇಬಿನಲ್ಲೂ ರಿವಾಲ್ವರ್ ಇಟ್ಟು ಕೊಂಡು
ಅಮೂಲ್ಯ ಅಲ್ಲಿ ಹೋದ. ಮುಖ ಮರೆಸಿಕೊಂಡು ವ್ಯವಸ್ಥಾಪ
ಕನ ಮುಖಕ್ಕೆ ಬೆಳಕು ಬಿಟ್ಟು ಬರೀ ಮದ್ದು ತುಂಬಿದ್ದ ರಿವಾಲ್ವರ್
ಸದ್ದು ಮಾಡಲು ವ್ಯವಸ್ಥಾಪಕ ಮೂರ್ಛೆಹೋದ. ಕಾವಲು
ಗಾರರು ಓಡಿಬಂದು ಇವನ ರಿವಾಲ್ವರನ್ನು ನೋಡಿ ಹಿಂದಕ್ಕೋಡಿ
ದರು. ಕಾಸಿಂ ಮಾತ್ರ ಕೋಲನ್ನಾಡಿಸುತ್ತ ಬಂದ. ಅಮೂಲ್ಯ
ಅವನ ಕಾಲಿಗೆ ಗುಂಡು ಹೊಡೆಯಲು ಅವನುರುಳಿದ. ನಡುಗು
ತ್ತಿದ್ದ ವ್ಯವಸ್ಥಾಪಕನಿಂದ ಪೆಟ್ಟಿಗೆಯ ಬಾಗಿಲು ತೆಗೆಸಿ ಆರು
ಸಾವಿರ ರೂಪಾಯಿಗಳನ್ನು ತೆಗೆದುಕೊಂಡು ಕುದುರೆಯಮೇಲೆ
ಹತ್ತಿಕೊಂಡು ಸ್ವಲ್ಪ ದೂರ ಹೋಗಿ, ಕುದುರೆಯನ್ನಲ್ಲೇ ಬಿಟ್ಟು
ನಡೆದು ಬಂದಿದ್ದ.

"ಇಷ್ಟೆಲ್ಲಾ ಏಕೆ ಮಾಡಿದೆ, ಅಮೂಲ್ಯ."

"ಕಾರಣವಿತ್ತು ಮಹಾರಾಜ."

"ಹಣ ಹಿಂದಿರುಗಿಸಲು ಏಕೆ ಪ್ರಯತ್ನಿಸಿದೆ?"

"ಯಾರ ಅಪ್ಪಣೆಯನ್ನು ಪಾಲಿಸಿದೆನೋ ಆಕೆ ಬರಲಿ.
ಎಲ್ಲಾ ಹೇಳುತ್ತೇನೆ."

"ಆಕೆ ಯಾರು?"

"ನನ್ನ ಸೋದರಿ, ಚಿಕ್ಕ ರಾಣಿ."

ವಿಮಲೆಗೆ ಹೇಳಿ ಕಳುಹಿಸಿದೆ. ತಲೆಯ ಮೇಲೆ ಬಿಳೀ
ಶಾಲು ಹೊದ್ದುಕೊಂಡು, ಬರಿಗಾಲಿನಲ್ಲಿ ಅನುಮಾನಿಸುತ್ತಾ
ಬಂದಳು. ವಿಮಲೆ ಹೀಗಿದ್ದುದನ್ನು ನಾನೆಂದೂ ನೋಡಿರಲಿಲ್ಲ.
ಅರುಣ ಕಿರಣ ಅವಳನ್ನು ಸುತ್ತುವರಿದಿದ್ದಂತಿತ್ತು.

ಅಮೂಲ್ಯ ಅವಳಿಗೆ ಅಡ್ಡಬಿದ್ದು ಎದ್ದು "ನಿನ್ನ ಅಪ್ಪಣೆ
ಯಂತೆ ನಡೆದಿದ್ದೇನೆ, ಅಕ್ಕ. ಹಣ ಹಿಂದಕ್ಕೆ ಕೊಟ್ಟೆ,"
ಎಂದನು.

" ನನ್ನನ್ನು ಬದುಕಿಸಿದೆ ತಮ್ಮಾ" ಎಂದಳು ವಿಮಲ.

" ಮನಸ್ಸಿನಲ್ಲಿ ನಿನ್ನ ಮೂರ್ತಿ ಪ್ರತಿಷ್ಠಿತವಾಗಿರುವುದರಿಂದ ಒಂದು ಸುಳ್ಳನ್ನು ಆಡಲಿಲ್ಲ. ನನ್ನ ವಂದೇ ಮಾತರಂ ಮಂತ್ರ ನಿನ್ನ ಪಾದದಡಿ ಎಸೆದಿದ್ದೇನೆ. ಇಲ್ಲಿಗೆ ಬರುತ್ತಲೇ ನಿನ್ನ ಪ್ರಸಾದವೂ ಸಿಕ್ಕಿತು."

ವಿಮಲೆಗೆ ಅವನ ಕಡೆಯ ಮಾತುಗಳು ಅರ್ಥವಾಗಲಿಲ್ಲ. ಅಮೂಲ್ಯ ಕೈ ಚೌಕವನ್ನು ಬಿಚ್ಚಿ ಹೋಳಿಗೆಗಳನ್ನು ತೋರಿಸಿದನು. " ನಾನು ಎಲ್ಲವನ್ನೂ ತಿನ್ನಲಿಲ್ಲ. ಮಿಕ್ಕುದನ್ನು ನಿನ್ನ ಕೈಯಿಂದಲೇ ತೆಗೆದುಕೊಳ್ಳಬೇಕೆಂದು ಕಾದಿದ್ದೇನೆ."

ನಾನು ಅಲ್ಲಿರಬೇಕಾದ ಆವಶ್ಯಕತೆ ಕಾಣಲಿಲ್ಲ. ಹೊರಗೆ ಹೋದೆನು. ನಾನು ಬೇಕಾದಷ್ಟು ಉಪದೇಶ ಮಾಡಬಹುದು ; ಅದರ ಪರಿಣಾಮವಾಗಿ ನನ್ನ ಮೂರ್ತಿ ಸುಡಲ್ಪಟ್ಟಿತು. ಸಾವಿನ ಹಾದಿಯಿಂದ ಒಂದು ಜೀವವನ್ನೂ ಉಳಿಸಲು ನನಗೆ ಸಾಧ್ಯವಾಗಲಿಲ್ಲ. ಶಕ್ತಿಯಿರುವವರಿಗೆ ಸಂಕೇತ ಮಾತ್ರದಿಂದ ಈ ಕೆಲಸ ಸಾಧ್ಯ. ನನ್ನ ಮಾತಿನಲ್ಲಿ ಆ ಅಳಿಸಲಾಗದ ಅರ್ಥವಿಲ್ಲ. ನಾನು ಜೀವಂತ ಜ್ಯೋತಿಯಲ್ಲ; ಆರಿದ ಇದ್ದಿಲ ತುಂಡು. ನಾನೊಂದು ದೀಪವನ್ನೂ ಬೆಳಗಿಸಲಾರೆ. ಅದೇ ನನ್ನ ಜೀವನದ ಕತೆ—ಬೆಳಗದ ದೀಪಗಳ ಸಾಲು.

## ೧೬

ಒಳಗಿನ ಕೋಣೆಗೆ ಹೋದೆ. ನನ್ನ ಅಡಿಗಳು ದೊಡ್ಡರಾಣಿಯ ಕೊಠಡಿಯ ಕಡೆಗೆಳೆದುವು. ನನ್ನ ಜೀವ ಯಾವುದಾದರೂ ಜೀವದ ಜೀವನ ತಂತುವನ್ನು ಮಿಡಿಯುವುದೆಂದು ಭಾವಿಸಲು ಆ ದಿನ ಕಾತರನಾಗಿದ್ದೆ. ಜೀವನದ ಸಿದ್ಧಿ ತನ್ನಲ್ಲಿಯೇ ಸಿಕ್ಕುವುದಿಲ್ಲ—ಹೊರಗಡೆ ಹುಡುಕಬೇಕು.

ಅತ್ತಿಗೆಯ ಕೋಣೆಯ ಮುಂದೆ ಹೋದಾಗ ಅವಳು,

" ಈ ದಿನವೂ ಹೊತ್ತು ಮಾಡುವೆಯೆಂದು ಹೆದರಿದ್ದೆ. ನೀನು ಬಂದ ಸದ್ದು ಕೇಳಿ ಬಡಿಸಬೇಕೆಂದು ಹೇಳಿದೆ. ಕ್ಷಣದಲ್ಲಿ ಸಿದ್ಧ ವಾಗುತ್ತೆ." ಎಂದಳು.

" ಅಷ್ಟರಲ್ಲಿ, ನಿನ್ನ ಹಣ ತೆಗೆದಿಡುತ್ತೇನೆ. ಜೊತೆಯಲ್ಲಿ ತೆಗೆದುಕೊಂಡು ಹೋಗೋಣ," ಎಂದೆ ನಾನು.

ನನ್ನ ಕೊಠಡಿಯ ಕಡೆ ಹೋಗುತ್ತ, "ಕಳ್ಳತನದ ವಿಚಾರ ವೇನಾದರೂ ಇನ್‌ಸ್ಪೆಕ್ಟರಿಂದ ತಿಳಿಯಿತೆ ? " ಎಂದು ಕೇಳಿದಳು. ಆ ಆರು ಸಾವಿರ ಹಿಂದಿರುಗಿ ಬಂದ ವಿಚಾರ ಆಕೆಗೆ ತಿಳಿಸಲು ಇಷ್ಟವಾಗಲಿಲ್ಲ. ಮಾತು ಮರೆಸುತ್ತಾ, " ಅದರದೇ ಈ ಅವಾಂತರವೆಲ್ಲಾ " ಎಂದೆ.

ಕೋಣೆಯಲ್ಲಿ ನೋಡಿದರೆ, ಗೊಂಚಲಿನಲ್ಲಿ ಕಬ್ಬಿಣದ ಪೆಟ್ಟಿಗೆಯ ಬೀಗದ ಕೈ ಇರಲಿಲ್ಲ. ಎಷ್ಟು ಮರೆವು ! ಬೆಳಗ್ಗೆ ಅಷ್ಟು ಬಾಗಿಲು ತೆಗೆದಾಗಲೂ ಬೀಗದ ಕೈಯನ್ನು ಗಮನಿಸಲಿಲ್ಲ.

ಅತ್ತಿಗೆ, " ಬೀಗದ ಕೈ ಎಲ್ಲಿ ? " ಎಂದಳು.

ಜೇಬುಗಳನ್ನೆಲ್ಲಾ ಹುಡುಕಿದರೂ ಉತ್ತರ ಸಿಕ್ಕಲಿಲ್ಲ. ಪುನಃ ಪುನಃ ಹುಡುಕಿದೆ. ಕಡೆಗೆ ಕಳೆದು ಹೋಗಿಲ್ಲವೆಂದೂ, ಯಾರಾದರೂ ತೆಗೆದುಕೊಂಡಿರಬೇಕೆಂದೂ ಇಬ್ಬರಿಗೂ ಹೊಳೆ ಯಿತು. ಯಾರಿರಬಹುದು ? ಆ ಕೋಣೆಯೊಳಕ್ಕೆ ಬೇರೆ ಯಾರು ಬರುವರು ?

ಅತ್ತಿಗೆ—" ನೀನೇನೂ ಆಲೋಚಿಸಬೇಡ. ಮೊದಲು ಊಟಮಾಡು. ನಿನಗೆ ಎಷ್ಟು ಮರವೆಯೆಂದು ತಿಳಿದು ಚಿಕ್ಕ ರಾಣಿ ತೆಗೆದಿಟ್ಟಿರಬೇಕು." ಎಂದಳು.

ನನಗೆ ಸಮಾಧಾನವಾಗಲಿಲ್ಲ. ವಿಮಲೆ ನನಗೆ ಹೇಳದೆ ಎಂದೂ ಬೀಗದ ಕೈ ತೆಗೆದುಕೊಳ್ಳುತ್ತಿರಲಿಲ್ಲ. ಊಟಮಾಡು ವಾಗ ವಿಮಲೆ ಬರಲಿಲ್ಲ; ಅಮೂಲ್ಯನಿಗೆ ಬಡಿಸುತ್ತಿದ್ದಳು. ಅತ್ತಿಗೆ ಹೇಳಿಕಳುಹಿಸಬೇಕೆಂದಾಗ ನಾನೇ ಬೇಡವೆಂದೆ.

ಊಟ ಮುಗಿಯುವ ವೇಳೆಗೆ ವಿಮಲೆ ಬಂದಳು. ದೊಡ್ಡ ರಾಣಿಯ ಎದುರಿಗೆ ಬೀಗದ ಕೈ ಪ್ರಶ್ನೆ ಚರ್ಚಿಸಲು ನನಗಿಷ್ಟ ವಿರಲಿಲ್ಲ. ಆದರೆ ಆಕೆಯೇ "ಬೀಗದ ಕೈ ನೋಡಿದೆಯೇನಮ್ಮಾ?" ಎಂದಳು.

"ನನ್ನ ಹತ್ತಿರ ಇದೆ."—ಎಂದಳು ವಿಮಲ.

ಅತ್ತಿಗೆ—"ನಾನು ಹೇಳಲಿಲ್ಲವೆ? ಕಳ್ಳತನದ ಹೆದರಿಕೆ ಯಿಲ್ಲವೆಂದು ಚಿಕ್ಕ ರಾಣಿ ನಟಿಸುತ್ತಾಳೆ. ಆದರೆ ಎಲ್ಲಾ ಭದ್ರ ಪಡಿಸುತ್ತಾಳೆ" ಎಂದಳು.

ವಿಮಲೆಯ ಮುಖ ಭಾವ ನೋಡಿ ನನಗೆ ಗಾಬರಿ ಯಾಯಿತು.

"ಬೀಗದ ಕೈ ಇರಲಿ. ಸಾಯಂಕಾಲ ಹಣ ತೆಗೆಯು ತ್ತೇನೆ" ಎಂದೆ.

"ಸುಮ್ಮನೆ ಮುಂದಕ್ಕೆ ತಳ್ಳುತ್ತೀ. ಜ್ಞಾಪಕವಿರುವಾಗ ಖಜಾನೆಗೆ ಕಳುಹಿಸಬಾರದೆ?"—ಅತ್ತಿಗೆ ಎಂದಳು.

"ಆಗಲೇ ನಾನು ತೆಗೆದುಬಿಟ್ಟೆ" ವಿಮಲೆಯೆಂದಳು.

ನಾನು ಹೆದರಿದೆ.

ಅತ್ತಿಗೆ—"ಎಲ್ಲಿಟ್ಟದ್ದೀ?" ಎಂದಳು.

"ಖರ್ಚು ಮಾಡಿಬಿಟ್ಟೆ."

"ಇವಳ ಮಾತು ನೋಡು! ಅಷ್ಟು ಹಣ ಏತಕ್ಕಾಗಿ ಖರ್ಚು ಮಾಡಿದೆ?"

ವಿಮಲೆ ಉತ್ತರ ಕೊಡಲಿಲ್ಲ. ನಾನು ಮುಂದೆ ಏನೂ ಕೇಳಲಿಲ್ಲ. ಅತ್ತಿಗೆ ಏನೋ ಮಾತನಾಡ ಹೋಗಿ ಸುಮ್ಮ ನಾದಳು. ಕಡೆಗೆ ನನ್ನ ಕಡೆ ತಿರುಗಿ—"ಹೋಗಲಿ ಬಿಡು. ನಾನೂ ನನ್ನ ಪತಿಯ ಹಣ ಹೀಗೇ ಮಾಡುತ್ತಿದ್ದೆ. ಅವರಿಗೆ ಬಿಟ್ಟರೆ ಏನೂ ಪ್ರಯೋಜನವಿರಲಿಲ್ಲ—ಯಾರಾದರೂ ಹೊಡೆದು ಕೊಂಡು ಹೋಗಿ ಬಿಡುತ್ತಿದ್ದರು. ನೀನೂ ಅವರ ಹಾಗೇ!

ಗಂಡಸರು ಖರ್ಚು ಮಾಡುವುದರಲ್ಲಿ ಗಟ್ಟಿಗರು. ನಿಮ್ಮಿಂದ ಕದ್ದರೆ ಮಾತ್ರ ಸ್ವಲ್ಪವಾದರೂ ಹಣ ಉಳಿಯುತ್ತದೆ. ಈ ಸಲ ಮಲಗು ಬಾ," ಎಂದಳು.

ಅತ್ತಿಗೆ ನನ್ನನ್ನು ಹೊರಗೆ ನನ್ನ ಕೊಠಡಿಗೆ ಕರೆದುಕೊಂಡು ಹೋದಳು. ಎಲ್ಲಿ ಹೋಗುತ್ತೇನೆಂಬ ಪರಿವೆಯೇ ಇರಲಿಲ್ಲ. ಮಲಗಿದಾಗ, ನನ್ನ ಹಾಸಿಗೆಯ ಪಕ್ಕದಲ್ಲಿ ಕುಳಿತುಕೊಂಡು ವಿಮಲೆಯನ್ನು, "ವೀಳ್ಯದೆಲೆ ಕೊಡಮ್ಮಾ.—ಏನು? ಇಲ್ಲವೆ? ನೀನು ಪರಂಗಿಯವಳೇ ಆಗಿ ಬಿಟ್ಟೆ. ಹೋಗಲಿ. ನನ್ನ ಕೊಠಡಿಗಾದರೂ ಹೇಳಿ ಕಳುಹಿಸು," ಎಂದಳು.

ನಾನು—"ನಿನ್ನ ಊಟವಾಯಿತೆ?" ಎಂದೆ.

"ಎಷ್ಟೋ ಹೊತ್ತಾಯಿತು," ಎಂದು ಸುಳ್ಳಾಡಿದಳು.

ಹಾಸಿಗೆಯ ಪಕ್ಕದಲ್ಲಿ ಕುಳಿತು ಏನೇನೋ ಹರಟುತ್ತಿದ್ದಳು. ಊಟ ಸಿದ್ಧವಾಗಿದೆಯೆಂದು ವಿಮಲೆಯನ್ನು ಕೆಲಸದವಳು ಕರೆದಾಗ ಅವಳು ಉತ್ತರವನ್ನೇ ಕೊಡಲಿಲ್ಲ. "ಇಷ್ಟು ಹೊತ್ತಾದರೂ ಊಟಮಾಡಿಲ್ಲವೆ?" ಎಂದು ಅತ್ತಿಗೆ ಅವಳನ್ನೆಳೆದುಕೊಂಡು ಹೋದಳು.

ಈ ಆರು ಸಾವಿರಕ್ಕೂ, ಕಳುವಾದ ಆರು ಸಾವಿರಕ್ಕೂ ಏನೋ ಸಂಬಂಧವಿದೆಯೆಂದು ನನಗೆ ಹೊಳೆಯಿತು. ಆದರೆ ಕೇಳುವ ಕುತೂಹಲ ಕೂಡ ಇರಲಿಲ್ಲ. ಎಂದಿಗೂ ಕೇಳುವುದಿಲ್ಲ.

ವಿಧಿ ನಮ್ಮ ಜೀವನದ ಒರಟು ಪ್ರತಿಯನ್ನು ಮಾತ್ರ ನಿರ್ಮಿಸುತ್ತಾನೆ.—ಅದನ್ನು ಹಸನಾಗಿ ಮಾಡುವ ಕೆಲಸ ನಮ್ಮ ಅಭಿರುಚಿಗೇ ಬಿಡುತ್ತಾನೆ. ನನ್ನ ಜೀವನ ಹಸನು ಮಾಡಿಕೊಳ್ಳುವಾಗ ಯಾವುದಾದರೂ ಮಹದಾಲೋಚನೆಗೆ ಆಕಾರ ಕೊಡಬೇಕೆಂಬ ಹಿರಿಯಾಸೆ ನನ್ನನ್ನು ಪೀಡಿಸುತ್ತದೆ. ಕಾಲವನ್ನೆಲ್ಲಾ ಈ ಪ್ರಯತ್ನದಲ್ಲೇ ಕಳೆದಿದ್ದೇನೆ. ನಾನು ಆಸೆಗಳ

ನ್ನೆಷ್ಟು ತಡೆ ಹಿಡಿದಿದ್ದೇನೋ ಹೆಜ್ಜೆ ಹೆಜ್ಜೆಗೂ ಇಂದ್ರಿಯಗಳನ್ನು ಅಮುಕಿದ್ದೇನೋ ಹೃದಯಗಳನ್ನರಿತ ದೇವನೊಬ್ಬ ಬಲ್ಲನು.

ಆದರೆ ಒಬ್ಬನ ಜೀವನ ಅವನಿಗೆ ಮಾತ್ರ ಸೇರಿದುದಲ್ಲ. ಅದರ ಸೃಷ್ಟಿಗೆ ಹೊರಗಿನ ಸಾಮಗ್ರಿಗಳೂ ಬೇಕು. ಇಲ್ಲದೆ ಸಾಧ್ಯವಿಲ್ಲ. ವಿಮಲೆಯ ಸಹಾಯದಿಂದ ಈ ಸೃಷ್ಟಿಯನ್ನು ಮಾಡುವ ಕನಸು ಕಾಣುತ್ತಿದ್ದೆ. ನನ್ನ ಪ್ರೇಮದ ಶಕ್ತಿಯಿಂದ ಅವಳ ಸಹಾಯ ಪಡೆಯಬಹುದೆಂದು ನಂಬಿದ್ದೆ.

ಆದರೆ ಸುತ್ತಲಿನ ವಾತಾವರಣದ ಸಹಾಯವನ್ನು ಸುಲಭವಾಗಿ, ಸ್ವಾಭಾವಿಕವಾಗಿ, ಸೆಳೆದುಕೊಂಡು ಆತ್ಮಸೃಷ್ಟಿ ಮಾಡಿಕೊಳ್ಳುವ ಮನುಷ್ಯರ ಗುಂಪಿಗೆ ನಾನು ಸೇರಿಲ್ಲ. ನನ್ನಲ್ಲಿದ್ದ ದಿವ್ಯಜ್ಯೋತಿಯನ್ನು ಬೇರೆಯವರಿಗೆ ಹಂಚುವ ಶಕ್ತಿ ನನಗಿಲ್ಲ. ಎಲ್ಲವನ್ನೂ ಯಾರಿಗೆ ಅರ್ಪಿಸಿದೆನೋ, ಅವರು ಎಲ್ಲವನ್ನೂ ತೆಗೆದುಕೊಂಡರು. ನನ್ನನ್ನು ತೆಗೆದುಕೊಳ್ಳಲಿಲ್ಲ.

ಕೆಲಸ ಕಷ್ಟವಾದುದು. ಅಗತ್ಯವಾಗಿ ಬೇಕಾದಾಗ ನನಗೆ ಸಹಾಯಕರಿಲ್ಲದೆ ಒಂಟಿಯಾಗಿದ್ದೇನೆ. ಆದರೂ ಈ ಸಂಕಟದಿಂದ ಒಬ್ಬನೇ ಪಾರಾಗುತ್ತೇನೆ. ಜೀವನದ ಮುಳ್ಳು ಹಾದಿಯನ್ನು ಒಬ್ಬನೇ ಕಡೆಯವರೆಗೂ ತುಳಿಯುತ್ತೇನೆ.

ನನ್ನಲ್ಲಿ ಬಲಾತ್ಕಾರದ ಕ್ರೌರ್ಯವಿರಬೇಕೆಂದು ತೋರುತ್ತಿದೆ. ವಿಮಲೆಯೊಡನೆ ನನ್ನ ಸಂಬಂಧಕ್ಕೆ ಕಠಿಣವಾದ, ನಿಶ್ಚಿತವಾದ ಸಂಪೂರ್ಣತೆಯನ್ನು ಕೊಡಬೇಕೆಂಬ ಸ್ವಚ್ಛಂದ ಅಭಿಲಾಷೆಯಿತ್ತು.

ಆದರೆ ಮನುಷ್ಯ ಜೀವನ ಅಚ್ಚಿನಲ್ಲಿ ಹುಯ್ಯಲು ಸೃಷ್ಟಿಯಾದುದಲ್ಲ. ಜೀವರಹಿತ ವಸ್ತುವಿನಂತೆ ತಿಳಿದು ಒಳ್ಳೆಯದಕ್ಕೆ ಆಕಾರ ಕೊಡಲು ಪ್ರಯತ್ನಿಸಿದರೆ ಅದು ನಾಶವಾಗಿ ನಮ್ಮ ಆಸೆಯನ್ನು ಬರಿದುಮಾಡುತ್ತದೆ.

ಈ ಅರಿವಿಲ್ಲದ ಅಧಿಕಾರ ನಮ್ಮನ್ನು ದೂರಮಾಡಿತು.

ಮೊದಲು ನನಗದು ತಿಳಿಯಲಿಲ್ಲ. ನನ್ನ ಬಲಾತ್ಕಾರ ಭಾರದಿಂದ ದಾರಿಕಾಣದ ವಿಮಲೆಯ ಜೀವನದಿ ತಳದಲ್ಲಿ ದಡವನ್ನು ಕೊರೆಯ ಬೇಕಾಯಿತು. ಕೆಲವು ವಿಚಾರಗಳಲ್ಲಿ ನನ್ನ ದರ್ಪವೆಷ್ಟೆಂಬು ದನ್ನು ಗ್ರಹಿಸಿ, ನನ್ನೊಡನೆ ಮನಬಿಚ್ಚಿ ಮಾತನಾಡಲಾರದೆ ಅವಳು ಈ ಆರುಸಾವಿರ ರೂಪಾಯಿಗಳನ್ನು ಕದಿಯಬೇಕಾಯಿತು.

ಒಮ್ಮತದಿಂದಿರುವವರಿಗೆ ನನ್ನಂತಹವನನ್ನು ತಿಳಿಯುವುದು ಸುಲಭ. ಒಪ್ಪಿಗೆಯಿಲ್ಲದವರು ಮೋಸಮಾಡಿ ಮಾತ್ರ ಜೀವಿಸ ಬಲ್ಲರು. ನಮ್ಮ ಹಠ ಸುಲಭವಾದುದನ್ನೂ ಡೊಂಕುದಾರಿಗೆಳೆ ಯುತ್ತದೆ. ಜೊತೆಗಾರ್ತಿಯ ತಯಾರಿಕೆಯಲ್ಲಿ ಪತ್ನಿ ಮರೆ ಯಾಗುತ್ತಾಳೆ.

ಮೊದಲಿಂದ ಪ್ರಾರಂಭಿಸಲು ಸಾಧ್ಯವಿಲ್ಲವೆ? ಇದ್ದರೆ ಸುಲಭದ ಹಾದಿಯನ್ನೇ ಅನುಸರಿಸುತ್ತೇನೆ. ಜೀವಗೆಳತಿಯನ್ನು ನನ್ನ ಅಭಿಪ್ರಾಯಗಳಿಂದ ಬಂಧಿಸದೆ, ಪ್ರೇಮಗಾನವನ್ನು ಹಾಡಿ "ನನ್ನನ್ನು ಪ್ರೀತಿಸುವೆಯಾ ? ಹಾಗಾದರೆ ನಿನ್ನ ಪ್ರೇಮದ ಬೆಳಕಿ ನಲ್ಲಿ ಆತ್ಮ ಸಾಕ್ಷಾತ್ಕಾರ ಪಡೆ. ನನ್ನ ಸೂಚನೆಗಳನ್ನು ಲಕ್ಷಿಸ ಬೇಡ. ನಿನ್ನಲ್ಲಿರುವ ದೇವನ ಕಲ್ಪನೆ ಜಯಿಸಲಿ, ನನ್ನ ಅಭಿ ಪ್ರಾಯಗಳು ತಲೆತಗ್ಗಿಸಲಿ—ಎಂದು ಹೇಳುತ್ತೇನೆ.

ಆದರೆ ನಮ್ಮಲ್ಲುಂಟಾಗಿರುವ ಭಿನ್ನಾಭಿಪ್ರಾಯಗಳ ಗಾಯ ನಿಸರ್ಗಮಾತೆಯ ಆಂಜನದಿಂದಲೂ ಮಾಯ ಬಲ್ಲುದೆ? ಪ್ರಕೃತಿ ಮಾತೆಯ ಮೌನ ಶಕ್ತಿಗಳು ರಹಸ್ಯವಾಗಿ ಕೆಲಸಮಾಡಲು ಆಸರೆ ಕೊಟ್ಟಿದ್ದ ಪರದೆ ಹರಿದುಹೋಗಿದೆ· ಗಾಯಗಳಿಗೆ ಬಟ್ಟೆ ಕಟ್ಟ ಬೇಕು. ಪ್ರೇಮದಿಂದ ಕಟ್ಟ ಗಾಯದ ಗುರುತನ್ನು ಅಳಿಸಲು ಸಾಧ್ಯವಿಲ್ಲವೆ? ಕಾಲಮೀರಿತಲ್ಲವೆ? ಅನುಮಾನ ಅಸಮಾಧಾನ ಗಳಲ್ಲಿ ಬಹಳ ಕಾಲಕಳೆದೆವು. ಅರ್ಥವಾಗಲು ಇಷ್ಟು ಕಾಲ ಹಿಡಿಯಿತು. ಸರಿಪಡಿಸಲು ಎಷ್ಟುಕಾಲ ಬೇಕೋ ! ಅದರಿಂದಾ ಗಿರುವ ಕೆಡುಕು ಸರಿಹೋದೀತೆ?

ಬಾಗಿಲ ಬಳಿ ಸದ್ದಾಯಿತು. ತಿರುಗಿನೋಡಿದಾಗ ವಿಮಲೆ ಹಿಂದಿರುಗಿ ಹೋಗುತ್ತಿರುವುದು ಕಾಣಿಸಿತು. ಬಾಗಿಲ ಬಳಿ ಒಳಗೆ ಬರಲೋ ಬೇಡವೋ ಎಂದು ಅನುಮಾನಿಸಿ ಹಿಂದಿರುಗಿ ಹೋಗಲು ನಿರ್ಧರಿಸಿರಬೇಕು. ತಟ್ಟನೆದ್ದು "ವಿಮಲಾ" ಎಂದು ಕೂಗಿದೆ.

ನಿಂತಳು. ಬೆನ್ನು ತಿರುಗಿಸಿ ನಿಂತಿದ್ದಳು. ಕೈಹಿಡಿದು ಕರೆತಂದೆ. ದಿಂಬಿನ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅತ್ತಳು. ಮಾತನಾಡದೆ ಕೈಹಿಡಿದು ನಿಂತಿದ್ದೆ. ದುಃಖದ ಆವೇಗ ಕಡಮೆಯಾದಾಗ ಎದ್ದು ಕುಳಿತಳು. ಹತ್ತಿರಕ್ಕೆಳೆದುಕೊಳ್ಳಲು ಪ್ರಯತ್ನಿಸಿದಾಗ ತಡೆದು ಕಾಲ ಬಳಿ ಮೊಳಕಾಲೂರಿ ಪುನಃ ಪುನಃ ನಮಸ್ಕರಿಸಿದಳು. ಕಾಲನ್ನೆಳೆದು ಕೊಂಡಾಗ ಬಿಗಿಯಾಗಿ ಹಿಡಿದು "ಬೇಡ, ಕಾಲನ್ನೆಳೆದುಕೊಳ್ಳಬೇಡಿ. ನಾನು ಪೂಜಿಸ ಬೇಕು," ಎಂದಳು.

ನಾನು ಸುಮ್ಮನೆ ನಿಂತೆ. ಬೇಡವೆನ್ನಲು ನಾನಾರು? ಸಂಕೋಚ ಪಡಲು ನಾನು ಅವಳ ಪೂಜೆಯ ದೇವರೆ?

## ವಿಮಲೆಯ ಕಥೆ

### ೨೩

ಬನ್ನಿ ಬನ್ನಿ! ಪ್ರೇಮನದಿ, ಪೂಜಾ ಸಮುದ್ರವನ್ನು ಸಂಗಮಿಸುವ ಕಡೆ ದೋಣಿಯಲ್ಲಿ ತೇಲಿ ಹೋಗುವ ಸಮಯವಿದು. ಆ ನೀಲ ರಾಗದಲ್ಲಿ ಕೊಚ್ಚೆಯೆಲ್ಲಾ ಮುಳುಗಿ ಮಾಯವಾಗವುದು.

ಈಗ ನನಗೆ ಭಯವಿಲ್ಲ—ನನ್ನ ಭಯವಿಲ್ಲ; ಯಾರ ಭಯವೂ ಇಲ್ಲ. ಅಗ್ನಿಯನ್ನು ದಾಟಿ ಬಂದಿದ್ದೇನೆ; ಸುಡತಕ್ಕದ್ದೆಲ್ಲಾ ಬೂದಿಯಾಯಿತು. ಉಳಿದಿರುವುದು ಅಮರವಾದುದು. ನನ್ನ ಪಾಪವನ್ನೆಲ್ಲಾ ತನ್ನ ನೋವಿನಲ್ಲಿ ಅಡಗಿಸಿಕೊಂಡಿರುವಾತನ ಪದತಲದಲ್ಲಿ ನನ್ನನ್ನರ್ಪಿಸಿಕೊಂಡಿದ್ದೇನೆ.

ರಾತ್ರಿ ಕಲ್ಕತ್ತೆಗೆ ಹೊರಡುತ್ತೇವೆ. ಅಂತರಂಗದ ತೊಂದರೆಗಳಿಂದ ನನ್ನ ವಸ್ತುಗಳನ್ನು ಸರಿಯಾಗಿ ನೋಡಿ ಕೊಳ್ಳಲು ಮರೆತಿದ್ದೇನೆ. ಈಗ ಎಲ್ಲವನ್ನೂ ಸರಿಪಡಿಸಿ ಕಟ್ಟುತ್ತೇನೆ.

ಸ್ವಲ್ಪ ಹೊತ್ತಿಗೆ ನನ್ನ ಪತಿ ಬಂದು ಕಟ್ಟಲು ಸಹಾಯ ಮಾಡ ತೊಡಗಿದರು.

ನಾನು "ಬೇಡ, ಬೇಡ. ಮಲುಗುವೆನೆಂದು ಹೇಳಿದಿ ರಲ್ಲವೆ ?" ಎಂದೆ.

"ಹೇಳಿರಬಹುದು. ಆದರೆ ಎಲ್ಲಿ ಹುಡುಕಿದರೂ ನಿದ್ದೆ ಸಿಕ್ಕಲೇ ಇಲ್ಲ"

"ಹಾಗೆನ್ನ ಬೇಡಿ. ಸ್ವಲ್ಪ ಸುಮ್ಮನಾದರೂ ಮಲಗಿ."

"ಇದೆಲ್ಲಾ ಕಟ್ಟಲು ನಿನ್ನೊಬ್ಬಳಿಂದ ಸಾಧ್ಯವೆ ?"

"ಸಾಧ್ಯವಿಲ್ಲದೆ ಏನು ?"

"ನಾನು ನಿನಗೆ ಆಗತ್ಯವಿಲ್ಲದಿರಬಹುದು. ನನಗೇನೋ ನೀನಿಲ್ಲದೆ ಸಾಧ್ಯವಿಲ್ಲ. ಒಬ್ಬನೇ ಇದ್ದಾಗ ನಿದ್ದೆ ಕೂಡ ನನ್ನ ಬಳಿ ಬರಲು ಒಪ್ಪಲಿಲ್ಲ." ಎಂದು ಪುನಃ ಕಟ್ಟಲು ಪ್ರಾರಂಭಿ ಸಿದರು.

ಆಳು ಬಂದು ಸಂದೀಪಬಾಬು ಬಂದರೆಂದು ತಿಳಿಸಿದನು. ಯಾರನ್ನು ನೋಡಲು ಬಂದನೆಂದು ಕೇಳಲು ಹಿಂಜರಿದೆ. ಗಿಡದ ಎಲೆ ಮುದುರಿದಂತೆ ಬೆಳಕು ಮರೆಯಾದಂತಾಯಿತು. ನನ್ನ ಪತಿ, "ಬಾ, ವಿಮಲ, ಹೋಗಿ ನೋಡೋಣ. ಹೊರಟು ಹೋದವನು ಹಿಂದಿರುಗಿ ಬಂದದ್ದು ನೋಡಿದರೆ ಏನೋ ಹೆಚ್ಚು ವಿಚಾರವಿರಬೇಕು."

ನಿಂತರೆ ಚೆನ್ನಾಗಿರುವುದಿಲ್ಲವೆಂದು ನಾನೂ ಹೋದೆ. ಸಂದೀಪ ಒಂದು ಪಠ ನೋಡುತ್ತಾ ನಿಂತಿದ್ದ. ಒಳಗೆ ನಾವು ಹೋದಾಗ—" ಇವನೇಕೆ ತಿರುಗಿ ಬಂದ--ಎಂದು ನೀವು ವಿಸ್ಮಯ ಪಡುತ್ತಿರ ಬಹುದು. ಆದರೆ ವಿಧಿಗಳನ್ನೆಲ್ಲಾ ಮಾಡದೆ

ಪ್ರೇತ ಹೋಗುವುದಿಲ್ಲ."—ಹೀಗೆಂದು ಜೇಬಿನಿಂದ ಕೈ ವಸ್ತ್ರದ ಗಂಟನ್ನು ತೆಗೆದು ಮೇಜಿನ ಮೇಲಿಟ್ಟು ಬಿಚ್ಚಿದನು. ಸವರನ್ ಗಳಿದ್ದುವು.

"ತಪ್ಪು ತಿಳಿದುಕೊಳ್ಳಬೇಡ ನಿಖಿಲ! ನಿನ್ನ ಸಹವಾಸ ದೋಷದಿಂದ ನಾನೂ ಪ್ರಾಮಾಣಿಕನಾದೆನೆಂದು ಕೊಳ್ಳಬೇಡ. ಕದ್ದ ಹಣ ಪಶ್ಚಾತ್ತಾಪದಿಂದ ಅಳುತ್ತಾ ಹಿಂದಿರುಗಿಸುವ ಹೇಡಿ ನಾನಲ್ಲ. ಆದರೆ...."

ಮಾತು ಮುಗಿಸಲಿಲ್ಲ. ಸ್ವಲ್ಪ ಸುಮ್ಮನಿದ್ದು ನನ್ನೊಡನೆ "ರಾಣಿ, ಇಷ್ಟು ದಿನದ ಮೇಲೆ ಪಶ್ಚಾತ್ತಾಪದ ಪಿಶಾಚ ನನ್ನ ಆತ್ಮ ಸಾಕ್ಷಿಯನ್ನು ಪ್ರವೇಶಿಸಿತು. ಒಂದು ನಿದ್ದೆ ಮುಗಿದಮೇಲೆ ಪ್ರತಿ ರಾತ್ರಿ ಅದರೊಡನೆ ಹೋರಾಡ ಬೇಕಾಗಿರುವುದರಿಂದ ಅದನ್ನು ಕಲ್ಪನೆಯ ಛಾಯೆ ಎನ್ನುವಂತಿಲ್ಲ. ಅದರ ಸಾಲ ಹರಿಸುವವರೆಗೆ ಬಿಡುಗಡೆಯಿಲ್ಲ. ಆ ಶಕ್ತಿಯ ಕೈಗೆ ಸಾಲ ಹಿಂದಿರುಗಿಸುತ್ತೇನೆ. ದೇವಿ! ಲೋಕದಲ್ಲಿ ನಿನ್ನೊಬ್ಬಳಿಂದ ಏನನ್ನೂ ಕದಿಯಲಾರೆ. ನಾನು ನಿರ್ಗತಿಕನಾಗುವವರೆಗೆ ನಿನ್ನಿಂದ ಬಿಡುಗಡೆಯಿಲ್ಲ. ಇವುಗಳನ್ನು ತೆಗೆದುಕೋ."

ನನ್ನ ಒಡವೆಯ ಪೆಟ್ಟಿಗೆಯನ್ನೂ ಮೇಜಿನಮೇಲಿಟ್ಟು ಬೇಗ ಹೊರಗೆ ಹೋದನು.

ನನ್ನ ಪತಿ "ಸಂದೀಪ, ಇಲ್ಲಿ ಬಾ," ಎಂದು ಕೂಗಿದರು.

ಬಾಗಿಲ ಬಳಿ ನಿಂತು ಸಂದೀಪ. "ನನಗೆ ಹೊತ್ತಿಲ್ಲ ನಿಖಿಲ. ಮುಸಲ್ಮಾನರು ನಾನೊಬ್ಬ ಅನರ್ಘ್ಯ ರತ್ನವೆಂದುಕೊಂಡು ನನ್ನನ್ನು ಲೂಟಿಮಾಡಿ ಶ್ಮಶಾನದಲ್ಲಿ ಭದ್ರಮಾಡಬೇಕೆಂದಿದ್ದಾರೆ. ಆದರೆ ನನಗೆ ಬದುಕಬೇಕೆಂಬ ಆಸೆಯಿದೆ. ರೈಲಿಗೆ ಇಪ್ಪತ್ತೈದು ನಿಮಿಷ ಉಳಿದಿದೆ. ಹೋಗಬೇಕು. ನೀವೂ ನಿಧಾನಿಸಬೇಡಿ. ಬೇರೆ ಎಂದಾದರೂ ಮಾತನಾಡೋಣ. ರಾಣಿ! ಬಿರಿದ ಹೃದಯಗಳ ರಾಣಿ, ವಿನಾಶದ ರಾಣಿ, ನಮಸ್ಕಾರ."

ಸಂದೀಪ ಓಡುತ್ತ ಹೊರಟು ಹೋದನು. ನಾನು ಕದಲದೆ ನಿಂತಿದ್ದೆ. ಈ ಚಿನ್ನ ಒಡವೆಗಳು ಎಷ್ಟು ಅಲ್ಪ ವಿಚಾರಗಳೆಂದು ನನಗೆ ಹಾಗೆ ಹಿಂದೆಂದೂ ತೋರಿರಲಿಲ್ಲ. ಕ್ಷಣ ಕಾಲದ ಮುಂಚೆ ನನ್ನೊಡನೆ ಏನು ತೆಗೆದುಕೊಂಡು ಹೋಗ ಬೇಕೆಂದೂ, ಹೇಗೆ ಕಟ್ಟಬೇಕೆಂದೂ ಚಿಂತಿಸುತ್ತಿದ್ದೆ. ಈಗ ಏನನ್ನೂ ತೆಗೆದುಕೊಂಡು ಹೋಗಬೇಕೆಂಬ ಆಸೆ ಉಳಿದಿರಲಿಲ್ಲ. ಹೊರಡಬೇಕೆಂಬ ಆತುರ ಮಾತ್ರವಿತ್ತು.

ನನ್ನ ಪತಿ ಎದ್ದು ಬಂದು ಕೈಹಿಡಿದರು. " ಹೊತ್ತಾಯಿತು. ಹೊರಡುವ ಪ್ರಯತ್ನ ಮಾಡಬೇಕು," ಎಂದರು.

ಚಂದ್ರನಾಥಬಾಬು ತಟ್ಟನೆ ಒಳಗೆ ಬಂದರು. ನಾವಿಬ್ಬರೂ ನಿಂತಿರುವುದನ್ನು ನೋಡಿ ಕ್ಷಣಕಾಲ ಅನುಮಾನಿಸಿ, "ತಾಯಿ, ಕ್ಷಮಿಸಿ. ನಿಖಿಲ, ಮುಸ್ಲಿಮರು ಮೇರೆ ಮೀರಿದ್ದಾರೆ. ಹರೀಶ ಕುಂದುವಿನ ಖಜಾನೆ ಲೂಟಿ ಮಾಡುತ್ತಿದ್ದಾರೆ. ಅದು ಹಾಗಿರಲಿ. ಹೆಂಗಸರನ್ನು ಹಿಂಸಿಸುತ್ತಿದ್ದಾರೆ."

" ಹೊರಡುತ್ತೇನೆ "—ನನ್ನ ಪತಿಯೆಂದರು.

" ಅಲ್ಲಿ ನೀವೇನು ಮಾಡಲು ಸಾಧ್ಯ ? "—ಕೈಹಿಡಿದು ಬೇಡಿದೆ :

" ಸ್ವಾಮಿ, ಹೋಗಬೇಡವೆಂದು ಹೇಳಿ."—ಗುರುವನ್ನು ಅಂಗಲಾಚಿದೆ.

" ತಾಯಿ, ಇನ್ನೇನು ಮಾಡಲೂ ಸಾಧ್ಯವಿಲ್ಲ," ಆತ ನೆಂದರು.

" ಹೆದರಬೇಡ, ವಿಮಲ," ಎಂದು ಹೇಳಿ ನನ್ನ ಪತಿ ಹೊರಟು ಹೋದರು.

ಕಿಟಕಿಯಲ್ಲಿ ನೋಡಿದಾಗ ನನ್ನ ಪತಿ ಕೈಯಲ್ಲಿ ಯಾವ ಆಯುಧವೂ ಇಲ್ಲದೆ ಕುದುರೆಯ ಮೇಲೆ ಹೊರಟು ಹೋಗು ತ್ತಿದ್ದರು.

ಮರುಕ್ಷಣ ದೊಡ್ಡರಾಣಿ ಓಡುತ್ತಾ ಬಂದು, "ಏನಾಯಿತು! ಅವನನ್ನು ಹೋಗಲು ಏಕೆ ಬಿಟ್ಟೆ? ಜವಾನನನ್ನು ಕೂಗು"—ಎಂದು ಒಬ್ಬ ಆಳಿಗೆ ಹೇಳಿದರು.

ಜವಾನನೆದುರಿಗೆ ರಾಣಿಗಳು ಎಂದೂ ಹೋಗುತ್ತಿರಲಿಲ್ಲ; ಆದರೆ ಆ ದಿನ ರಾಣಿಗೆ ಮರ್ಯಾದೆಗಳ ಪರಿವೆ ಇರಲಿಲ್ಲ.

"ಮಹಾರಾಜರನ್ನು ಕರೆತರಲು ತಕ್ಷಣ ಒಬ್ಬ ಸವಾರನನ್ನು ಕಳುಹಿಸಿ," ಎಂದು ಜವಾನನಿಗೆ ಹೇಳಿದಳು.

ಜವಾನ, "ನಾವೆಲ್ಲಾ ಕೇಳಿಕೊಂಡೆವು, ತಾಯಿಾ. ಆದರೆ ಅವರು ಒಪ್ಪಲಿಲ್ಲ" ಎಂದನು.

"ದೊಡ್ಡರಾಣಿಗೆ ಖಾಯಿಲೆಯೆಂದು ಹೇಳಿ ಕಳುಹಿಸಿ. ಸಾಯುತ್ತಿದ್ದಾಳೆಂದು ಹೇಳಿ."

ಜವಾನ ಹೊರಟು ಹೋದಮೇಲೆ ನನ್ನಮೇಲೆ ರೇಗಿ ಬಿದ್ದಳು. "ಮಾಯಗಾತಿ! ಪಿಶಾಚಿ! ನಿನಗೆ ಸಾಯುವ ಧೈರ್ಯವಿಲ್ಲ. ಅವನನ್ನು ಸಾವಿಗೆ ಕಳುಹಿಸಿದೆ...."

ಕತ್ತಲಾಗುತ್ತಾ ಬಂತು. ಮರದೆಲೆಗಳ ಹಿಂದೆ ಸೂರ್ಯ ಮುಳುಗಿದನು. ಆ ಸೂರ್ಯಾಸ್ತದ ಪ್ರತಿ ವರ್ಣಭೇದವೂ ನನ್ನ ಮನಸ್ಸಿನಲ್ಲಿ ನಿಂತಿದೆ. ಮುಳುಗುವ ಅಗ್ನಿಪಿಂಡದ ಎರಡು ಕಡೆಯೂ ಇದ್ದ ಮೋಡಗಳ ತಂಡದಿಂದ ಅದು ಜ್ವಲಿಸುವ ರೆಕ್ಕೆಯ ದೊಡ್ಡ ಪಕ್ಷಿಯಂತೆ ಕಾಣುತ್ತಿತ್ತು. ಈ ಪ್ರಾಣಾಂತಕ ದಿನ ಇರುಳು-ಸಾಗರವನ್ನು ದಾಟಿಹೋಗುತ್ತಿರುವಂತೆ ತೋರಿತು.

ಕತ್ತಲು ಹೆಚ್ಚಾಯಿತು. ದಿಗಂತದಲ್ಲಿ ಆಗಾಗ ಕಾಣುತ್ತಾ ಬೀಳುತ್ತ ಇರುವ ದೂರದ ಹಳ್ಳಿಯ ಉರಿಯಂತೆ ಕತ್ತಲಲ್ಲಿ ಏನೋ ಗೊಂದಲ ಉಕ್ಕಿ ಬಂತು

ದೇವಸ್ಥಾನದಲ್ಲಿ ಸಂಜೆಯ ಘಂಟಾನಾದವಾಯಿತು. ದೊಡ್ಡರಾಣಿ ಅಲ್ಲಿ ಕೈ ಜೋಡಿಸಿ ಕುಳಿತುಕೊಂಡು ಪ್ರಾರ್ಥನೆ ಮಾಡುತ್ತಿದ್ದಳೆಂದು ನನಗೆ ತಿಳಿಯಿತು. ನಾನು ಕಿಟಕಿಯಿಂದ

ಕದಲಲಾರದೆ ನಿಂತಿದ್ದೆ.

ರಸ್ತೆಗಳು, ದೂರದ ಹಳ್ಳಿ, ಇನ್ನೂ ದೂರವಿದ್ದ ಗಿಡಗಳು ಎಲ್ಲವೂ ಮಸಕಾದುವು. ಕೆರೆ, ಕುರುಡನ ಕಣ್ಣಿನಂತೆ ಮಂಕಾಗಿ ಆಗಸದ ಕಡೆ ನೋಡುತ್ತಿತ್ತು. ಎಡಗಡೆ ಗೋಪುರ ಏನು ನಡೆಯುತ್ತಿದೆಯೋ ನೋಡಬೇಕೆಂದು ಬಗ್ಗಿದಂತಿತ್ತು.

ರಾತ್ರಿ ವಿಧವಿಧದ ಸದ್ದುಗಳು ಕೇಳಿಸುತ್ತವೆ. ಒಂದು ರೆಂಬೆ ಮುರಿದ ಸದ್ದು. ಯಾರೋ ಜೀವದಾಸೆಯಿಂದ ಓಡುತ್ತಿರುವಂತೆ ಕೇಳಿಸುತ್ತದೆ. ಬಾಗಿಲು ಹಾಕಿದ ಸದ್ದು. ಹೆದರಿದ ಬ್ರಹ್ಮಾಂಡದ ಎದೆಯು ಹೊಡೆತವಂತೆ ಕೇಳಿಸುತ್ತದೆ.

ದೂರದ ಎಲೆಗಳ ನಡುವೆ ದೀಪದ ಕಿರಣಗಳು ಆಗಾಗ ಕಾಣುತ್ತಿದ್ದುವು. ಕುದುರೆಗಳ ಖುರಪುಟಗಳು ; ಆದರೆ ಅರಮನೆಯಿಂದ ಹೊರಡುತ್ತಿದ್ದ ಕುದುರೆಗಳು.

ನಾನು ಸತ್ತರೆ ಈ ಗೊಂದಲವೆಲ್ಲಾ ನಿಲ್ಲುವುದೆಂಬ ಭಾವನೆ ನನಗೆ ತಲೆದೋರಿತು. ಬದುಕಿರುವವರೆಗೂ ನನ್ನ ಪಾಪದ ಫಲ ಎಲ್ಲರನ್ನೂ ನಾಶಮಾಡುವುದು. ಪೆಟ್ಟಿಗೆಯಲ್ಲಿದ್ದ ಪಿಸ್ತೂಲಿನ ಜ್ಞಾಪಕ ಬಂತು. ಆದರೆ ಕಿಟಕಿ ಬಿಟ್ಟು ನನ್ನ ಕಾಲುಗಳೇಳಲಿಲ್ಲ. ನನ್ನ ಅದೃಷ್ಟವನ್ನು ತಿಳಿಯಲು ಕಾದಿದ್ದೆನಲ್ಲವೆ ?

ಹತ್ತು ಘಂಟೆ ಹೊಡೆಯಿತು. ದೂರದಲ್ಲಿ ಬೆಳಕು ಕಾಣಿಸಿಕೊಂಡು ಹೆಬ್ಬಾವು ಸರಿದು ಬರುವಂತೆ ಕತ್ತಲಲ್ಲಿ ಅರಮನೆಯ ಬಾಗಿಲ ಕಡೆ ಒಂದು ದೊಡ್ಡ ಗುಂಪು ಬಂತು.

ಜವಾನನು ಬಾಗಿಲಿಗೆ ಓಡಿದಾಗ ಒಬ್ಬ ಸವಾರ ಬಂದನು.

" ಜಟ, ಸಮಾಚಾರವೇನು ? " ಜವಾನ ಕೇಳಿದನು.

" ಒಳ್ಳೆಯದಲ್ಲ."

ಕಿಟಕಿಗೆ ಈ ಮಾತುಗಳು ಸ್ಪಷ್ಟವಾಗಿ ಕೇಳಿಸಿದುವು. ಮುಂದೆ ಮೆಲ್ಲಗೆ ಆಡಿದ ಮಾತುಗಳು ಕೇಳಿಸಲಿಲ್ಲ.

ಪಲ್ಲಕ್ಕಿ, ಒಂದು ಡೋಲಿ ಬಂದುವು. ಪಲ್ಲಕ್ಕಿಯ ಪಕ್ಕ

ದಲ್ಲಿ ವೈದ್ಯ ನಡೆಯುತ್ತಿದ್ದನು.

"ನಿಮ್ಮ ಅಭಿಪ್ರಾಯವೇನು ? " ಎಂದು ಜವಾನ ವೈದ್ಯರನ್ನು ಕೇಳಿದನು.

" ಹೇಳುವುದಕ್ಕಾಗುವುದಿಲ್ಲ. ತಲೆಗೆ ದೊಡ್ಡ ಪೆಟ್ಟು ಬಿದ್ದಿದೆ "

" ಅಮೂಲ್ಯ ಬಾಬು ? "

" ಹೃದಯವನ್ನು ಗುಂಡು ಹೊಕ್ಕಿದೆ. ಅವನ ಕೆಲಸ ಮುಗಿಯಿತು."

**ಸಂಪೂರ್ಣ.**